**ಕೆ.ಪಿ.ಎಸ್.ಸಿ.**

ಡಿಸೆಂಬರ್ 1997 ಮಾಸ ಪತ್ರಿಕೆ ರೂ. 10



ಅಧ್ಯಕ್ಷ ಎಸ್.ಎಂ.ಪಂಚಗಟ್ಟಿ

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ

**ಸ್ಪರ್ಧಾತ್ಮಕ ಪರೀಕ್ಷಾ ಸಿದ್ಧತೆ**

## ಅನ್ಯಗ್ರಹದಲ್ಲಿ ಜೀವಿಗಳಿವೆಯೇ?

**ಈಡಿಯೆಟ್ ಪೊಲೀಸರು!**

- ಬಿಜಾಪುರದ ಸೈಕಲ್ ತಾರೆಗಳು
- ಒಂದು 'ಸುವರ್ಣ' ಸುದ್ದಿ!
- ಹಾಸನದ ಕೃಷಿಕ ಸಭೆಗಳು
- ನೀವೂ ಇಂಗ್ಲಿಷ್ ಕಲಿಯಿರಿ

**ಮಂಗಳೂರು ವಿ.ವಿ.ಕುಲಪತಿ ಎಸ್. ಗೋಪಾಲ್**

## ವಿದ್ಯೆ-ಉದ್ಯೋಗ

- ವಾಣಿಜ್ಯ ತೆರಿಗೆ ಅಧಿಕಾರಿ
- ಆರೋಗ್ಯ ಸಹಾಯಕಿ ತರಬೇತಿ
- ಅಮೆರಿಕೆಯಲ್ಲಿ ಉನ್ನತ ಶಿಕ್ಷಣ
- ಎಸ್.ಡಿ.ಎ. : ಅರ್ಜಿ ಸಲ್ಲಿಸಿ
- ವಿದ್ಯಾರ್ಥಿ ಪ್ರತಿಭಾ ಶೋಧ

ನೋ ಪಾಲಿಟಿಕ್ಸ್ ಪ್ಲೀಸ್!

ಜನವರಿ 1998ರ ಸಂಚಿಕೆಯೊಂದಿಗೆ

# ಹೊಸ ವರ್ಷದ ಎರಡು ಉಡುಗೊರೆಗಳು

## ಉಡುಗೊರೆ - 1

### ಅತ್ಯಾಕರ್ಷಕ ಕ್ಯಾಲೆಂಡರ್

ಪ್ರತಿಯೊಬ್ಬರ ಮನೆ, ಕಚೇರಿ, ಅಂಗಡಿ ಅಲಂಕರಿಸಲೇಬೇಕಾದ 1998ನೇ ವರ್ಷದ ಅತ್ಯಾಕರ್ಷಕ ಬಹುವರ್ಣದ ಪ್ರತ್ಯೇಕ ಕ್ಯಾಲೆಂಡರ್‌ನ್ನು ಜನವರಿ ಸಂಚಿಕೆಯೊಂದಿಗೆ ಉಚಿತವಾಗಿ ನೀಡಲಾಗುವುದು.

## ಉಡುಗೊರೆ - 2

### ಲಾಭದಾಯಕ ಕೃಷಿ

ಅತ್ಯಂತ ಉಪಯುಕ್ತವಾಗಿ ಸಮಗ್ರವಾಗಿ ರೂಪಿಸಬೇಕೆಂಬ ನಮ್ಮ ಹಂಬಲವೇ 'ಲಾಭದಾಯಕ ಕೃಷಿ' ಪುಸ್ತಕದ ಪ್ರಕಟಣೆಯ ವಿಳಂಬಕ್ಕೆ ಕಾರಣವಾಗಿದೆ. ಇದೀಗ ಈ ಪುಸ್ತಕ ಪರಿಪೂರ್ಣ ರೂಪು ಪಡೆದಿದ್ದು ಜನವರಿ 98ರ 'ಬಿಸಿಲ ಬದುಕು' ಸಂಚಿಕೆಯೊಂದಿಗೆ ಉಚಿತವಾಗಿ ನಿಮ್ಮ ಕೈ ಸೇರಲಿದೆ.

ಹೀಗೆ ಎರಡು ಅಪೂರ್ವ ಉಚಿತ ಕೊಡುಗೆಗಳನ್ನು ಹೊತ್ತು ಡಿಸೆಂಬರ್ 15ರಂದು ಮಾರುಕಟ್ಟೆಗೆ ಅಪ್ಪಳಿಸಲಿರುವ ಜನವರಿ 98ರ 'ಬಿಸಿಲ ಬದುಕು' ಸಂಚಿಕೆಯ ಬೆಲೆಯಲ್ಲಿ ಯಾವುದೇ ವ್ಯತ್ಯಾಸವಿಲ್ಲ!

## ಕೇವಲ 10 ರೂ. ಗೆ ಇಷ್ಟೆಲ್ಲಾ ಕೊಡುಗೆ!

*ಏಜೆಂಟರಿಗೆ ಸೂಚನೆ:*
ಜನವರಿ 98ರ ಸಂಚಿಕೆಯ ಹೆಚ್ಚುವರಿ ಪ್ರತಿ ಬೇಕಾದರೆ ಏಜೆಂಟರು ಡಿಸೆಂಬರ್ 5ರೊಳಗೆ ಮುಂಗಡ ಹಣದೊಂದಿಗೆ ಬೇಡಿಕೆ ಸಲ್ಲಿಸಬೇಕು.

ಬಿಸಿಲ ಬದುಕು
• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ

ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ: 7951, ಬಸವೇಶ್ವರ ನಗರ, ಬೆಂಗಳೂರು - 560 079

ಡಿಸೆಂಬರ್ ೧೯೯೭ ಸಂಪುಟ ೧ ಸಂಚಿಕೆ ೬

# ಬಿಸಿಲ ಬದುಕು

ಮಾಸಪತ್ರಿಕೆ

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ


ಸಂಪಾದಕ
**ಚಂದ್ರಕಾಂತ ವಡ್ಡು**

ಸಂಪಾದಕೀಯ ನೆರವು
**ಎಚ್.ಎಂ. ಪಂಡಿತಾರಾಧ್ಯ**

ನಿರ್ವಹಣೆ
**ಸಿ.ಪಿ. ಸುರೇಶ್**

ಪ್ರಸಾರ
**ವೈ.ಬಿ. ವಿಜಯಕುಮಾರ**

ಜಾಹೀರಾತು
**ಬಿ.ಎಸ್. ತಿಪ್ಪೇಸ್ವಾಮಿ**
**ಎಸ್. ಕಿರಣ್**

ಅಕ್ಷರ ಜೋಡಣೆ
**ಜಿ. ಸುರೇಶ್**
**ಆಶಾ ರಮೇಶ್**

ಲೇಖಕರು :
**ಡಾ. ಟಿ.ಕೆ.ತಾಪಸ್**
**ಎಂ. ನಾರಾಯಣ ಭಟ್**
**ಜಗದೀಶ ದುದ್ಗಿ**
**ವಸಂತ ಮುರ್ಡೇಶ್ವರ**
**ಡಾ. ವಸುಂಧರಾ ಭೂಪತಿ**
**ಡಾ. ವಿಜಯ್ ಅಂಗಡಿ**
**ಡಾ. ಎಚ್.ಎಸ್. ವೆಂಕಟೇಶ್**
**ಮಾಧವ ಐತಾಳ**
**ಡಿ.ಎಂ.ಶ್ರೀಧರ**
**ಉಷಾ ನವರತ್ನರಾಮ್**
**ಡಾ. ಎಸ್.ಸಿ. ಶರ್ಮಾ**
**ಗೋಪಾಲಕೃಷ್ಣ ವಂಡ್ಸೆ**

ಮುಖಪುಟ ಚಿತ್ರ
**ಎಂ. ಶ್ರೀಧರಮೂರ್ತಿ**

ಮುಖಪುಟ ವಿನ್ಯಾಸ
**ಚಂದ್ರಶೇಖರ ಗುಬ್ಬಿ**

ವಿಳಾಸ
**ಬಿಸಿಲ ಬದುಕು** ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079










ಸ್ಥಿರ ಶೀರ್ಷಿಕೆಗಳು



Printed, Published and Owned by CHANDRAKANTA VADDU, 473, I Cross, I Block, III Stage, Near Water Tank Bus Stop, Basaveshwaranagar, Bangalore - 560 079. Tel : 080 3358198 Fax : 080 5091136. Printed at M.N.S. Enterprises, Bhattarahalli, Old Madras Road, Bangalore - 49 Editor : Chandrakanta Vaddu

## ಟಪಾಲು

**ಮಹತ್ತರ ಸಾಧನೆ**

'ಬಿಸಿಲ ಬದುಕು' ಕನ್ನಡ ಪತ್ರಿಕೋದ್ಯಮದಲ್ಲೇ ಮಹತ್ತರ ಸಾಧನೆ ಮಾಡಿದೆ. ಇದು ಪ್ರತಿಯೊಬ್ಬ ವಿದ್ಯಾರ್ಥಿಯೂ ಓದಲೇಬೇಕಾದ ಪತ್ರಿಕೆ. ನವೆಂಬರ್ ಸಂಚಿಕೆಯನ್ನು ಕೈಯಲ್ಲಿ ಹಿಡಿದು ಮನೆಗೆ ಹೋದೆ. ನನ್ನ ಮುದ್ದಿನ ತಮ್ಮ ಕಿತ್ತುಕೊಂಡ. ಪತ್ರಿಕೆ ಅವನಿಂದ ಇನ್ನೊಬ್ಬ ಶಿಕ್ಷಕರ ಕೈಗೆ ಹೋಯಿತು.

**- ಬಿ. ದೊಡ್ಡ ಮಾರೆಣ್ಣ,** ಸೋಮಲಾಪುರ

◆

**ಉದಯ ಟಿ.ವಿ.**

ನನಗೆ 'ಬಿಸಿಲ ಬದುಕು' ಮಾಸಪತ್ರಿಕೆ ಬಗ್ಗೆ ತಿಳಿದದ್ದು ಉದಯ ಟಿ.ವಿ.ಯ ''ಆಪ್ತ ಆಲೋಚನೆ'' ಕಾರ್ಯಕ್ರಮ ದಿಂದ. ಇಂತಹ ಒಳ್ಳೆಯ ಪತ್ರಿಕೆ ಬಗ್ಗೆ ಹೆಚ್ಚು ಪ್ರಚಾರ ಮಾಡಿ ಆಸಕ್ತರಿಗೆ ತಲುಪುವಂತೆ ಮಾಡುವ ಅಗತ್ಯವಿದೆ.

**- ತ್ಯಾಗರಾಜ್ ವಿ.,** ಮಾರಗೊಂಡಹಳ್ಳಿ

◆

**ಉಪರಾಷ್ಟ್ರಪತಿ ಹುದ್ದೆ**

ಉಪರಾಷ್ಟ್ರಪತಿ ಹುದ್ದೆ ಬಗ್ಗೆ ಸಂಪೂರ್ಣ ಮಾಹಿತಿ ನೀಡಿದ್ದೀರಿ. ನನಗೆ ಇಂಥ ವಿಷಯಗಳಲ್ಲಿ ಬಹಳ ಆಸಕ್ತಿ. ಆದ್ದರಿಂದ ವಾರ್ಷಿಕ ಚಂದಾದಾರನಾಗಿದ್ದೇನೆ.

**- ಎಸ್.ಎಂ. ನಾಗರಾಜ್,** ಶಿರಿಗೇರಿ

◆

**ಮನ ಗೆದ್ದಿದೆ**

ಡಾ. ರಾಜ್ ಮುಖಪುಟ ಹೊತ್ತ ಪತ್ರಿಕೆ ರಸಿಕರ ಮನ ಗೆದ್ದಿದೆ. ಬದುಕಿಗೆ ಬಿಸಿಲು ಬಹಳ ಮುಖ್ಯ. ಹಾಗೆಯೇ ಬದುಕು ರೂಪಿಸಿಕೊಳ್ಳಲು 'ಬಿಸಿಲ ಬದುಕು' ಅತ್ಯಗತ್ಯ.

**- ಅಶೋಕ ಉಮರಾಣಿಕರ,** ಸೊಲ್ಲಾಪುರ

**ಅಂಗವಿಕಲರಿಗೆ ಅಂಕಣ**

ಹೊಸತನದಿಂದ ಮೂಡಿಬರುತ್ತಿರುವ'ಬದುಕು'ಓದುಗರ ಮನ ಸೆಳೆಯುತ್ತಿದೆ. ಅಂಗವಿಕಲರಿಗಾಗಿ ಒಂದು ಅಂಕಣ ತೆಗೆಯಿರಿ.

**- ಮಹಾಲಿಂಗ ಗೋರಬಾಳ, ಗೋಕಾಕ-ಫಾಲ್ಸ**

**ಅಂಬಿಕಾ ಬುಕ್ ಸ್ಟಾಲ್**

ಗಜೇಂದ್ರಗಡದಲ್ಲಿ ಕ್ಲಾಸ್ ಮುಗಿಸಿಕೊಂಡು ಊರಿಗೆ ಮರಳಿ ಬರುವಾಗ ಬಸ್ ನಿಲ್ದಾಣದ ಅಂಬಿಕಾ ಬುಕ್ ಸ್ಟಾಲ್‌ನಲ್ಲಿ ತೂಗು ಹಾಕಿದ್ದ ಪತ್ರಿಕೆಗಳನ್ನು ವೀಕ್ಷಿಸುತ್ತಿದ್ದೆ. ಆಕಸ್ಮಿಕವಾಗಿ 'ಬದುಕು' ಕಣ್ಣಿಗೆ ಬಿತ್ತು.

**- ಶರಣಪ್ಪ ವೈ. ಬುಕನಟ್ಟಿ, ಯಲಬುರ್ತಿ**

**ಮಿನಿ ಕಾದಂಬರಿ ಏಕಿಲ್ಲ?**

ಎಲ್ಲಾ ವಿಷಯ ಸಂಗ್ರಹಿಸಿದ್ದೀರಿ. ಆದರೆ ಒಂದಾದರೂ ಮಿನಿ ಕಾದಂಬರಿ ಇರಲಿ ಎನ್ನುವುದು ನನ್ನ ಆಸೆ.

**- ದೇವರಾಜ್ ಬಿ. ಗೊರದಳ್ಳಿ,** ಹೊಸನಗರ

**ಹೊಸ ಅಭಿಮಾನಿ**

ಒಳ್ಳೊಳ್ಳೆ ಲೇಖನ, ಪ್ರತಿಭಾ ಪರಿಚಯ, ಕ್ರೀಡಾಲೋಕ, ಉದ್ಯೋಗ ಮಾಹಿತಿ.... ಎಲ್ಲಾ ಅಂಕಣಗಳನ್ನು ಒಳಗೊಂಡ 'ಬದುಕು' ಮಾಸಿಕಕ್ಕೆ ನಾನೂ ಒಬ್ಬ ಹೊಸ ಅಭಿಮಾನಿ ಎಂದು ಹೆಮ್ಮೆಯಿಂದ ಹೇಳಬಹುದು.

**- ಈರಣ್ಣ ಎಸ್. ಕುದರಿ,** ರಾಯರ ಹೆಬ್ಬಳ್ಳಿ

**ನೀನಾಸಮ್ ಶಿಬಿರ**

ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ ನೀನಾಸಮ್ ಸಂಸ್ಕೃತಿ ಶಿಬಿರ-೯೭ರಲ್ಲಿ ಭಾಗವಹಿಸಿದ್ದೇನೆ ಎಂದು ತಿಳಿಸಲು ಹರ್ಷಿಸುತ್ತೇನೆ.

**- ಕೆ. ಬಸವಣ್ಣೆಪ್ಪ,** ಹೆಗ್ಗೋಡು

**ಜನನ ದಿನಾಂಕ**

ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ ಐ.ಎಫ್.ಎಸ್. ವಿಜೇತೆ ಹುಬ್ಬಳ್ಳಿಯ ನಂದಿನಿ ಕುರಿತ ಲೇಖನದಲ್ಲಿ ಅವರು ಜನಿಸಿದ್ದು ೧೯೩೭ರಲ್ಲಿ ಎಂದಿದೆ. ಬಹುಶಃ ಅದು ೧೯೭೩ ಆಗಬೇಕಲ್ಲವೇ?

**- ಟಿ. ಬಸವರಾಜ್,** ಯಲಹಂಕ ಉಪನಗರ

**[ಹೌದು. ಮುದ್ರಣ ದೋಷಕ್ಕೆ ವಿಷಾದಿಸುತ್ತೇವೆ. -ಸಂ]**

**ಸಂಚಿಕೆಯಿಂದ ಸಂಚಿಕೆಗೆ**

ಪ್ರಥಮ ಸಂಚಿಕೆಯಿಂದ 'ಬದುಕು' ನೋಡುತ್ತಿದ್ದೇನೆ. ಪತ್ರಿಕೆ ಸಂಚಿಕೆಯಿಂದ ಸಂಚಿಕೆಗೆ ಸಮೃದ್ಧವಾಗಿ ಹೊರ ಹೊಮ್ಮುತ್ತಿದೆ.

**- ರಮೇಶ ದೇಶಪಾಂಡೆ,** ಹುಬ್ಬಳ್ಳಿ

**ಒಂದು ಕೋರಿಕೆ**

ನಿಮ್ಮ ಪತ್ರಿಕೆ ಸ್ಪರ್ಧಾಯುಗದಲ್ಲಿ ಮುಂದಿದೆ. ನನ್ನ ಒಂದು ಕೋರಿಕೆಯೆಂದರೆ ಇಟ್ಟ ದಿಟ್ಟ ಹೆಜ್ಜೆಯನ್ನು ಹಿಂತೆಗೆಯ ದಿರಿ.

**- ಚನ್ನೇಶ್ ಮಠದ,** ಹಿರೇಕೆರೂರು

**ಎಂ.ಬಿ.ಎ. ಮಾಡುವ ಬಗೆ**

'ಎಂ.ಬಿ.ಎ. ಮಾಡುವುದು ಹೇಗೆ?' (ಮಹಾದೇವಪ್ಪ ಆವಿನ) ಲೇಖನ ತುಂಬಾ ಚೆನ್ನಾಗಿ ಮೂಡಿ ಬಂದಿದೆ. ವಿದ್ಯೆ-ಉದ್ಯೋಗ ಅಂಕಣದಿಂದ ಗ್ರಾಮೀಣ ವಿದ್ಯಾರ್ಥಿ ಗಳಿಗೆ ಬಹಳ ಅನುಕೂಲವಾಗುತ್ತಿದೆ.

**- ಎಂ. ಬಸವಪ್ರಕಾಶ,** ಬಾಗಲವಾಡ

**ಕೂಪನ್ ಹಿಂಭಾಗ**

ಕತ್ತರಿಸಿ ಕಳಿಸಬೇಕಾದ ಕೂಪನ್ ಹಿಂಭಾಗದಲ್ಲಿ ಜ್ಞಾನಾರ್ಜನೆಗೆ ಸಹಕಾರಿಯಾದ ವಿಷಯಗಳನ್ನು ಪ್ರಕಟಿಸದೆ ಜಾಹೀರಾತು ಪ್ರಕಟಿಸಬಹುದು. ಇದರಿಂದ ಸಂಚಿಕೆ ಕಾಯ್ದಿಟ್ಟುಕೊಳ್ಳುವವರಿಗೆ ಅನುಕೂಲವಾಗುತ್ತದೆ.

**- ವೈ. ಎಸ್. ಮೀನಾಕ್ಷಮ್ಮ, ದೊಣೆಹಳ್ಳಿ**

**ಇಂಗ್ಲಿಷ್ ವ್ಯಾಕರಣ ಬೇಕು**

ಹಳ್ಳಿಯ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಕಲಿಯುವ ಅಗತ್ಯ ಬಹಳವಿದೆ. ಆದ್ದರಿಂದ ಇಂಗ್ಲಿಷ್ ವ್ಯಾಕರಣದ ಬಗ್ಗೆ ಪ್ರತಿ ತಿಂಗಳು ಲೇಖನ ಪ್ರಕಟಿಸಿ.

**- ಎಂ.ಎಸ್. ಸುವರ್ಣ**

**[ಇದೇ ಸಂಚಿಕೆಯಿಂದ ಇಂಗ್ಲಿಷ್ ವ್ಯಾಕರಣದ ಲೇಖನ ಮಾಲೆ ಆರಂಭಿಸಿದ್ದೇವೆ. - ಸಂ]**

**ಸೌಂದರ್ಯ ಹೆಣ್ಣಿನ ಸ್ವತ್ತಲ್ಲ!**

'ಹೆಣ್ಣಿನ ಆರೋಗ್ಯ ಮತ್ತು ಸೌಂದರ್ಯ' ಲೇಖನ ತುಂಬಾ ಉಪಯುಕ್ತವಾಗಿದೆ. ಯಾಕೆ, ನೀವು ಗಂಡಸರ ವಿರೋಧಿಗಳೇ? ಸೌಂದರ್ಯ ಬರೀ ಹೆಣ್ಣಿನ ಸ್ವತ್ತಲ್ಲ! ಗಂಡಿನ ಆರೋಗ್ಯ ಮತ್ತು ಸೌಂದರ್ಯದ ಬಗೆಗಿನ ಲೇಖನಗಳು ಮುಂದಿನ ಸಂಚಿಕೆಯಲ್ಲಿ ಮೂಡಿಬರಲಿ

**- ಫಕ್ಕೀರೇಶ ಬ. ಅಕ್ಕಿ,** ಮಜ್ಜಿಗುಡ್ಡ

**ಕೃಷಿ ಯಂತ್ರ**

ಕಡಿಮೆ ವೆಚ್ಚದ ಕೃಷಿ ಯಂತ್ರಗಳ ಬಗೆಗಿನ ಎನ್. ಲೋಕೇಶರ ಲೇಖನ ನಮ್ಮಂತಹ ರೈತರಿಗೆ ಉಪಯುಕ್ತವಾಗಿದೆ.

**- ಡಬರೆ ಶರಣಪ್ಪ ಶಿವಪುತ್ರ,** ಅಕ್ಕಲಕೋಟೆ, (ಮಹಾರಾಷ್ಟ್ರ)

**ಪತ್ರಿಕೆ ಕಳಿಸಿ**

ಕ್ವಿಜ್-೪ರಲ್ಲಿ ನನಗೆ ೧೦೦ ರೂ.ಗಳ ಸಮಾಧಾನಕರ ಬಹುಮಾನ ನೀಡಿ ಗೌರವ ಪ್ರತಿ ಕಳಿಸಿ ಪ್ರೋತ್ಸಾಹಿಸಿದ್ದಕ್ಕೆ ನಾನು ನಿಮಗೆ ಅತ್ಯಂತ ಋಣಿಯಾಗಿದ್ದೇನೆ. ನಿಮ್ಮ ಮಾರ್ಗದರ್ಶನ, ಆಶೀರ್ವಾದದಿಂದ ಮತ್ತು ನನ್ನ ಪ್ರಯತ್ನ ಮತ್ತು ಸಾಧನೆಯಿಂದ ಒಳ್ಳೆಯ ಭವಿಷ್ಯ ರೂಪಿಸಿಕೊಂಡೇನು. ತಾವು ನನಗೆ ಸಮಾಧಾನಕರ ಬಹುಮಾನದ ೧೦೦ ರೂಪಾಯಿಗಳನ್ನು ಕಳುಹಿಸುವ ಬದಲಿಗೆ ಒಂದು ವರ್ಷ ತಮ್ಮ ಪತ್ರಿಕೆ ಕಳಿಸಬೇಕಾಗಿ ವಿನಂತಿಸುವೆ.

**- ನಾಭಿರಾಜ ಡಿ. ಅಕ್ಕಿ,** ಗೋಗಿ

**ಉದಯವಾಗದ ನಾಡು**

ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ 'ಉದಯವಾಗದ ಚೆಲುವ ಕನ್ನಡ ನಾಡು' ಎಂಬ ಲೇಖನ ನಿಜಕ್ಕೂ ಅರ್ಥಗರ್ಭಿತವಾಗಿತ್ತು. ಬಹುರಾಷ್ಟ್ರೀಯ ಕಂಪನಿಗಳ ಪ್ರಭಾವದಿಂದಾಗಿ ನಾವು ನಮ್ಮ ನೆಲದಲ್ಲಿಯೇ ಪರಕೀಯರಾಗುತ್ತಿದ್ದೇವೆ. ಪರಕೀಯರು ಈ ನಾಡಿನ ಸಂಪನ್ಮೂಲಗಳೆಂಬ ಕೆನೆ ಮೊಸರನ್ನು ಬೆಕ್ಕಿನೋಪಾದಿಯಲ್ಲಿ ನೆಕ್ಕಿ ಕೆಳಗೆ ಉಳಿದ ಕೆನೆ ಮೊಸರನ್ನು ತಿನ್ನುವ ಪರಿಸ್ಥಿತಿ ಬರುವ ಕಾಲ ದೂರವಿಲ್ಲ ಎಂಬ ಎಚ್ಚರಿಕೆಯನ್ನು ಲೇಖಕರಾದ ಕೆ.ಎ. ಬಳಿಗೇರ ನೀಡಿದ್ದು ಸಮಯೋಚಿತವಾಗಿದೆ.

**- ಪಾರ್ವತಿ ಬಳಿಗೇರ,** ನಾಗರಮಡುವು

ಕನ್ನಡ, ಕನ್ನಡನಾಡು ಎಂದು ಬೊಬ್ಬೆ ಹಾಕುವ ಇಂದಿನ ನಾಯಕಶಿಖಾಮಣಿಗಳು ಕನ್ನಡಮ್ಮನ ಕೊರಳಿಗೆ ಉರುಳು ಹಾಕುತ್ತಿದ್ದಾರೆ. ಲೇಖನ ಮನ ಮಿಡಿಯುವಂತಿದೆ.

**- ಎಂ.ಡಿ. ಸರಕಾವಸ್**, ಮುಶಿಗೇರಿ

ವಿವಾಹದ ಆಮಂತ್ರಣ ಪತ್ರಿಕೆಯಲ್ಲಿ ವಧುವಿನ ಹೆಸರಿನೊಂದಿಗೆ Sow (ಹೆಣ್ಣು ಹಂದಿ!) ಸೇರಿಸುವ ಬಗ್ಗೆ ಲೇಖನ ಸೂಕ್ತ ಎಚ್ಚರಿಕೆ ನೀಡಿದೆ.

**- ಕೆ.ಎಸ್. ಗಾರವಾಡ ಹಿರೇಮಠ**, ಗಜೇಂದ್ರಗಡ

**ಪತ್ರಿಕೆ ಬಳಗ**

ಕನ್ನಡ ಪತ್ರಿಕಾರಂಗದಲ್ಲಿ ಇಷ್ಟು ವೈವಿಧ್ಯಮಯವಾಗಿ ಹೊರಡುತ್ತಿರುವ ಪತ್ರಿಕೆಗಳು ಬಹು ಕಡಿಮೆ. ಬಾಲಕರಿಂದ ವೃದ್ಧರವರೆಗೆ ಓದಲು ಅರ್ಹವಾದ ಬಿಸಿಲ ಬದುಕಿಗೆ ಬೆಂಗಾವಲಾಗಿ ದುಡಿಯುತ್ತಿರುವ ಪತ್ರಿಕೆಯ ಬಳಗ ಸಂಪದ್ಭರಿತವಾಗಿದೆ. ಜೀವನದ ಮೌಲ್ಯಗಳನ್ನು ಎತ್ತಿ ಹಿಡಿಯುವ ಯುವ ಜನಾಂಗದ ಮೇಲೆ ಸತ್ಪಭಾವವನ್ನು ಬೀರಬಲ್ಲ ಲೇಖನಗಳು ಇದರಲ್ಲಿ ಮೂಡಿ ಬರಲಿ.

**- ಎನ್.ಎಂ. ಮರುಳಾರಾಧ್ಯ**, ಹೊಳಗುಂದ (ಆಂ. ಪ್ರ.)

**ಧಾರಾವಾಹಿ ಪ್ರಕಟಿಸಿ**

ತಮ್ಮ ಮಾಸಪತ್ರಿಕೆ ಮಕ್ಕಳಿಂದ ವಯೋವೃದ್ಧರವರೆಗೂ ಮೆಚ್ಚಿಗೆಯಾಗಿದೆ. ಆದರೆ ಇದರ ಜೊತೆಯಲ್ಲಿ ತಾವು ಧಾರಾವಾಹಿಯನ್ನು ಪ್ರಕಟಿಸಿದರೆ ಒಳ್ಳೆಯದು. ಕಾರಣ ಒಮ್ಮೆ ಧಾರಾವಾಹಿ ಪ್ರಕಟಿಸಿದರೆ ಅದು ಮುಗಿಯುವವರೆಗೂ ಓದಬೇಕಲ್ಲವೇ? ಆದ್ದರಿಂದ ಧಾರಾವಾಹಿ ಪ್ರಕಟಿಸಿದಲ್ಲಿ ಹೆಚ್ಚಿನ ಜನ ಕೊಂಡು ಓದುತ್ತಾರೆ. ಇದು ನಮ್ಮ ಅಭಿಪ್ರಾಯ

**- ಜಿ. ವಿಜಯಕುಮಾರ್**, ಹರಪನಹಳ್ಳಿ

**ಕ್ವಿಜ್ ಬಹುಮಾನ**

ವಾಣಿಜ್ಯ, ವಿಕಾಸ, ಮಾಹಿತಿ, ಸಂಪರ್ಕ ಮುಂತಾದ ವಿಷಯಗಳನ್ನು ಹೊತ್ತ 'ಬದುಕು' ನಮ್ಮ ಜ್ಞಾನ ಶಕ್ತಿಯನ್ನು ಹೆಚ್ಚಿಸಲು ತುಂಬಾ ಉಪಯುಕ್ತವಾಗಿದೆ. ಅಲ್ಲದೆ ಕ್ವಿಜ್-೪ರ ಪ್ರಥಮ ಬಹುಮಾನ ಬಂದಿದ್ದು ನನಗೆ ತುಂಬಾ ಖುಷಿ ಕೊಟ್ಟಿದೆ. ರೂ. ೫೦೦ ತಲುಪಿದೆ.

**-ಸತೀಶ ಕುಮಾರ**, ಕುಂದಾಪುರ

'ಬಿಸಿಲ ಬದುಕು' ಕ್ವಿಜ್-೪ರಲ್ಲಿ ನನಗೆ ದೊರಕಿದ ೨ನೇ ಬಹುಮಾನ ರೂ. ೨೦೦/- ಹಾಗೂ ಗೌರವ ಪುಸ್ತಕ ಸಂದಾಯವಾಗಿ ಆನಂದಕ್ಕೆ ಮೇರೆಯಿಲ್ಲದಾಗಿದೆ. ಏಕೆಂದರೆ ಈಗೀನ ಭ್ರಷ್ಟಾಚಾರ ಯುಗದಲ್ಲೂ ಪ್ರಾಮಾಣಿಕ ಸೇವೆ ಸಲ್ಲಿಸುವವರು ಇದ್ದಾರೆಂದು ಮನದಟ್ಟಾಯಿತು.

**- ಭಾಗ್ಯರತ್ನಮ್ಮ ರೋಣದ**, ಅಬ್ಬಿಗೇರಿ

**ಕಾಲೇಜಿಗೆ ಬಂದ ರೈತ**

ರಾಜ್ಯೋತ್ಸವ ಸಂಚಿಕೆಯಲ್ಲಿ ನಮ್ಮ ಕಾಲೇಜು ವಿದ್ಯಾರ್ಥಿಗಳು ಶೋಧಿಸಿದ ''ಕಡಿಮೆ ವೆಚ್ಚದ ಕೃಷಿ ಯಂತ್ರಗಳು'' ಚಿತ್ರ ಸಮೇತ ಪ್ರಕಟವಾಗಿರುವುದನ್ನು ನೋಡಿ ಒಬ್ಬ ಹಾವೇರಿಯ ರೈತ ಅದನ್ನು ಖರೀದಿಸಲೆಂದೇ ನಮ್ಮ ಕಾಲೇಜಿಗೆ ಬಂದ. ಈ ವಿಚಾರ ಹೇಗೆ ಗೊತ್ತಾಯಿತು ಎಂದು ವಿಚಾರಿಸಿದಾಗ 'ಬಿಸಿಲ ಬದುಕು' ಸಂಚಿಕೆ ನೋಡಲು ಹುರಿದುಂಬಿಸಿದ. **- ಕೆ. ರಾಜಪ್ಪ**, ರಾಣೆಬೆನ್ನೂರು




**ಮೆಡಿಕಲ್ ಎಲೆಕ್ಟ್ರಾನಿಕ್ಸ್**

ತಾವು ''ಮೆಡಿಕಲ್ ಎಲೆಕ್ಟ್ರಾನಿಕ್ಸ್ ಕೋರ್ಸ್'' ಬಗ್ಗೆ ತುಂಬಾ ಉಪಯುಕ್ತ ಮಾಹಿತಿ ಒದಗಿಸಿದ್ದು ಇದರಿಂದ ವಿದ್ಯಾರ್ಥಿಗಳಿಗೆ ಆಧುನಿಕ ವೈದ್ಯಕೀಯ ತಂತ್ರಜ್ಞಾನದ ಬಗ್ಗೆ ತಿಳುವಳಿಕೆ ಮೂಡುವುದಲ್ಲದೆ ಅನೇಕ ಉದ್ಯೋಗಾಸಕ್ತರಿಗೆ ಉದ್ಯೋಗ ದೊರಕಿಸುವಲ್ಲಿ ನೆರವಾಗುವ ಪತ್ರಿಕೆ ನಿಮ್ಮದಾಗಿದೆ. ತಾವು ಇನ್ನೂ ಅನೇಕ ವೈದ್ಯಕೀಯ ಹಾಗೂ ತಂತ್ರಜ್ಞಾನ ಕುರಿತ ಲೇಖನವನ್ನು ಇನ್ನು ಮುಂದೆ ಪ್ರಕಟಿಸಲು ಕಳಕಳಿಯಾಗಿ ವಿನಂತಿಸುವೆ.

**- ಪ್ರದೀಪ ದೊಡ್ಡವಾಡ**, ಬಾದಾಮಿ

**ಉತ್ತಮ ರಕ್ಷಾ ಪುಟ**

ಮುಖಪುಟವನ್ನು ಗಮನಿಸಿದಾಗ ರಾಜ್‌ಕುಮಾರ್‌ರವರು ನೇರವಾಗಿ ನಮ್ಮೊಂದಿಗೇ ಮಾತನಾಡಿದಂತಿತ್ತು. ಯಾವುದೇ ಮೇಕಪ್ ಇಲ್ಲದೆ ಸರಳವಾಗಿ ಸೌಜನ್ಯವಾಗಿ ಇರುವ ಅಪರೂಪದ ವರ್ಣಚಿತ್ರ ಅದು.
ಪ್ರಾರಂಭದಿಂದಲೂ ನಮ್ಮ 'ಬದುಕು' ಉತ್ತಮ ರಕ್ಷಾಪುಟ ನೀಡುತ್ತಿದೆ. ಈ ಪರಂಪರೆ ಮುಂದುವರೆಯಲಿ.

**- ಕೆ.ಎಂ. ನಾಗರಾಜ್,**
**ಎಸ್.ಟಿ. ವೆಂಕಟೇಶ್**, ಬೆಂಗಳೂರು

**ಹದಿನೈದು ಬೇಗ ಬರಲಿ**

ಪ್ರತಿ ತಿಂಗಳು ೧೫ನೇ ತಾರೀಖು ೨ ಗಂಟೆಗೆ 'ಬಿಸಿಲ ಬದುಕು' ಪತ್ರಿಕೆಯನ್ನು ನಮ್ಮ ಯಜಮಾನರು ತಂದು ಕೊಡುತ್ತಾರೆ. ೧೫ನೇ ತಾರೀಖು ಬೇಗ ಬರಲಿ ಎಂದು ಕನವರಿಸುತ್ತೇವೆ. ಸಂಚಿಕೆ ೫ರಲ್ಲಿ ''ಮಂತ್ರಿ ಎಂ.ಪಿ. ಪ್ರಕಾಶರ ಕುಟುಂಬ ಕಲ್ಯಾಣ'' ಚನ್ನಾಗಿ ಮೂಡಿ ಬಂದಿದೆ. ಉಷಾ ನವರತ್ನರಾಮ್‌ರವರ ''ಆಪ್ತ ಸಮಾಲೋಚನೆ'' ವಿಭಾಗಕ್ಕಾಗಿ ಇನ್ನೂ ಒಂದು ಪುಟ ಮೀಸಲಿದ್ದರೆ ಚೆನ್ನ.

**- ಅನ್ನಪೂರ್ಣ ಬಸವರಾಜ**, ಹಂಪಾಪಟ್ಟಣ

**ವಿಜ್ಞಾನಕ್ಕೆ ಒತ್ತು ನೀಡಿ**

ಬಿಸಿಲ ಬದುಕು ಪತ್ರಿಕೆಯು ನಿಜವಾಗಿಯೂ ಜನರ ಬದುಕಿಗೆ ಜ್ಞಾನವನ್ನು ನೀಡಲು ಬಂದ ಅಕ್ಷಯಪಾತ್ರೆಯಾಗಿದೆ. ಸುದ್ದಿಗಳು ಎಲ್ಲ ರಂಗಗಳಿಂದಲೂ ಕೂಡಿರುತ್ತವೆ. ಆದರೆ ತಾವು ವಿಜ್ಞಾನದ ಹಾಗೂ ಪ್ರಚಲಿತ ಘಟನೆಗಳ ಬಗ್ಗೆ ಇನ್ನಷ್ಟು ಒತ್ತನ್ನು ನೀಡಿದರೆ ಇದೊಂದು ಕನ್ನಡದ ಪ್ರಮುಖ ಪತ್ರಿಕೆಯಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

**- ಎಸ್.ಎಸ್ ಗಾಯಕವಾಡ**, ಅಮೀನಗಡ

**ಅಡುಗೆಮನೆ ಬೇಡ**

ಕೆ.ಪಿ.ಎಸ್.ಸಿ. ಯಂತಹ ಸ್ಪರ್ಧಾತ್ಮಕ ಪರೀಕ್ಷೆಗಳ ಒಳ ಹೊರಗನ್ನು ಪರಿಚಯಿಸುತ್ತ, ರಾಜಕೀಯ ಜ್ಞಾನವನ್ನು ಪರಿಚಯಿಸುತ್ತಿದ್ದೀರಿ. ನಿಜಕ್ಕೂ ಇದೊಂದು ಹೊಸ ಪ್ರಯತ್ನ. ಬಿಸಿಲ ಬದುಕಿಗೆ 'ಅಡುಗೆ ಮನೆ' ಯಂತಹ ಅಂಕಣ ಬೇಡ ಎನ್ನಿಸುತ್ತದೆ. ಅದೇ ಪುಟವನ್ನು 'ಮಿನಿ ಕತೆ'ಗೆ ಮೀಸಲಿಡಿ. **- ವಿಜಯಾ ಪ್ರಸಾದಮಠ**, ಚಳ್ಳಕೆರೆ

**[ಇನ್ನೂ ಕೆಲವು ಪತ್ರಗಳು ೧೮ನೇ ಪುಟದಲ್ಲಿ]**

**ಹೆಸರೇ ಭೂಷಣ**

ಇತ್ತೀಚೆಗೆ 'ಬದುಕು' ಪತ್ರಿಕೆ ಓದುವ ಅವಕಾಶ ದೊರಕಿತು. 'ಬಿಸಿಲ ಬದುಕು' ಎಂಬ ಹೆಸರು ಆಕರ್ಷಣೀಯವಾಗಿದೆ.

**- ಎಸ್.ವಿ. ರಂಗನಾಥ ಶರ್ಮ**, ಗುಬ್ಬಿ

♦

**ವಿಷಾದ**

ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ 'ಬಸುರಿ ಮತ್ತು ಬಾಣಂತಿಯರ ವ್ಯಾಯಾಮಗಳು' ಲೇಖನ ಬರೆದವರು ಡಾ.ಸುನಂದಾ ಕುಲಕರ್ಣಿ. ಕಣ್ತಪ್ಪಿನಿಂದ ಹೆಸರು ಬಿಟ್ಟುಹೋದದ್ದಕ್ಕೆ ವಿಷಾದಿಸುತ್ತೇವೆ.

**- ಸಂ.**

♦

**ದಿನಕರ**

ಓ...
ಬಿಸಿಲ ಬದುಕು,
ಹತ್ತರ
ಜೊತೆ ಹನ್ನೊಂದಿರ
ಬಹುದೆಂದುಕೊಂಡಿದ್ದೆ ನಿನ್ನ
ಮೊದಲು,
ಕಂಡಾಗ
'ಉದಯ ಟೀವಿ'ಯಲಿ
ನಿನ್ನ ಠೀವಿ
ಎಂದುಕೊಂಡೆ ನೀ
ಕನ್ನಡದ ಕೋವಿ!
'ತುಷಾರ'ದಲ್ಲಿನ
ನಿನ್ನ ಜಾಹೀರಾತು
ಹುಡುಕಿಕೊಂಡು
ಬರುವಂತಾಯ್ತು
ಈಗ
ನೀನು ನನ್ನ
ಬದುಕಿನಲ್ಲಿ
ಬಿಸಿಲು (ಪ್ರಕಾಶ)
ಮೂಡಿಸಿದ
ದಿನಕರ!

**- ಪರಮೇಶ್ವರ ಎಸ್. ಕುದರಿ**, ಚಳ್ಳಕೆರೆ

# ಅನ್ಯಗ್ರಹಗಳಲ್ಲಿ ಜೀವಿಗಳಿವೆಯೇ?

○ ಎಂ. ನಾರಾಯಣ ಭಟ್

*ನಮ್ಮ ಈ ಭೂಮಿಯೊಂದೇ ಜೀವಿಗಳ ಉಗಮಕ್ಕೆ ಪ್ರಶಸ್ತವಾದದ್ದು ಎಂದು ಹೇಳುವುದು ತರ್ಕಬದ್ಧವಾಗಲಾರದು. ಇದಕ್ಕೆ ಹಲವಾರು ಕಾರಣಗಳಿವೆ. ನಮ್ಮ ಭೂಗ್ರಹದಲ್ಲಿ ಅನ್ವಯವಾಗುವ ರಾಸಾಯನಿಕ ಮತ್ತು ಭೌತಿಕ ನಿಯಮಗಳೇ ವಿಶ್ವದ ಇತರ ಗ್ರಹ ಹಾಗೂ ನಕ್ಷತ್ರಗಳಲ್ಲಿಯೂ ಅನ್ವಯವಾಗುತ್ತವೆ. ಆದ್ದರಿಂದ ಈ ನಿಯಮಗಳಿಗೆ ಅನುಸಾರವಾಗಿ ಭೂಮಿಯಲ್ಲಿ ಜೀವಿಗಳು ಉಗಮವಾಗಿರಬೇಕಾದರೆ, ಇತರೆಡೆ ಯಾಕಾಗಿರಬಾರದು?*

ಅನ್ಯಗ್ರಹ ಜೀವಾನ್ವೇಷಣೆಯ ಪಯಣ ಬಹಳ ರೋಚಕತೆ ಮತ್ತು ಕುತೂಹಲಗಳಿಂದ ಕೂಡಿದೆ. ಅಂತಹ ರೋಚಕ ಘಟನೆಯೊಂದಿಗೆ ಶುರು ಮಾಡೋಣ.

ಕಾರ್ನೆಲ್ ವಿಶ್ವವಿದ್ಯಾಲಯದ ಸಂಗೀತ ಸಭಾಂಗಣ. ಅಂದು ಬಹಳ ಜನಪ್ರಿಯ 'ಬಾಕ್' ಸಂಗೀತ ಸಭೆ ಏರ್ಪಾಡಾಗಿತ್ತು. ಆಸನಗಳೆಲ್ಲ ಭರ್ತಿಯಾಗಿದ್ದವು. 'ಬಾಕ್' ಸಂಗೀತವು ಅಲೆಅಲೆಯಾಗಿ ತೇಲಿ ಬರುತ್ತಿರಲು ಎಲ್ಲರೂ ಸಮ್ಮೋಹನಕ್ಕೆ ಒಳಗಾದವರಂತೆ ತಲೆದೂಗುತ್ತಿದ್ದರು. ಆದರೆ ಅಂದಿನ ಸಭೆಗೆ ಬಂದಿದ್ದ ಖಗೋಳ ಶಾಸ್ತ್ರಜ್ಞ 'ಪಿಲಿಫ್ ಮಾರಿಸನ್' ಅವರ ತಲೆಯಲ್ಲಿ ಮಾತ್ರ ಹೊಸದೊಂದು ವಿಚಾರ ಲಹರಿ ಮಿಂಚಿನಂತೆ ಮೂಡಿತು. ಪಿಲಿಫ್ ಮಾರಿಸನ್ ಅನ್ಯಗ್ರಹ ಜೀವಿಗಳ ಬಗ್ಗೆ ಅತೀವ ಆಸಕ್ತಿ ಉಳ್ಳವರಾಗಿದ್ದರು. ಅನ್ಯಗ್ರಹ ಜೀವಿಗಳನ್ನು ಸಂಪರ್ಕ ಮಾಡುವುದು ಹೇಗೆ? ಎಂದು ಬಹಳ ದಿನಗಳಿಂದ ಅವರ ತಲೆಯನ್ನು ತಿನ್ನುತ್ತಿದ್ದ ಪ್ರಶ್ನೆಗೆ ಈ ಸಂಗೀತ ಸಭೆ ಸರಿಯಾದ ಉತ್ತರ ದೊರಕಿಸಿ ಕೊಟ್ಟಿತು. ಸಂಗೀತದ ಅಲೆಗಳಂತೆ ರೇಡಿಯೋ ಅಲೆಗಳು ಸಹ, ತರಂಗಗಳ ರೂಪದಲ್ಲಿ ಬಹು ಬಹು ದೂರಕ್ಕೆ ಸಾಗಬಲ್ಲವು. ಆದ್ದರಿಂದ ರೇಡಿಯೋ ತರಂಗಗಳ ಮೂಲಕ ಅನ್ಯಗ್ರಹಗಳಲ್ಲಿರಬಹುದಾದ ಜೀವಿಗಳಿಗೆ ನಾವ್ಯಾಕೆ ಸಂದೇಶ ಕಳುಹಿಸಬಾರದು ಎಂದು ಅವರಿಗೆ ಆ ಕ್ಷಣ ಹೊಳೆಯಿತು. ಈ ಘಟನೆ



ನಡೆದದ್ದು ೧೯೫೯ರಲ್ಲಿ. ರೇಡಿಯೋ ತರಂಗಗಳನ್ನು ಬಿತ್ತರಿಸಿ ಸಂಪರ್ಕ ಸಾಧಿಸಲು ಅಂದಿನಿಂದ ಆರಂಭಗೊಂಡ ಈ ಶೋಧ ಇಂದಿಗೂ ತುಂಬಾ ಭರದಲ್ಲಿ ಸಾಗಿದೆ ಎಂದು ಹೇಳಬಹುದು.

ಇಲ್ಲಿ SETI ಎಂಬ ಕಾರ್ಯಕ್ರಮವನ್ನು ಖಂಡಿತಾ ಉಲ್ಲೇಖಿಸಲೇಬೇಕು. 'ಸರ್ಚ್ ಫಾರ್ ಎಕ್ಸ್‌ಟ್ರಾ ಟೆರಿಸ್ಟ್ರಿಯಲ್ ಇಂಟಲಿಜೆನ್ಸ್ (Search for Extra Terrestrial Intelligence) ಎಂಬುದರ ಸಂಕ್ಷಿಪ್ತ ರೂಪವೇ SETI.

ಬ್ರಹ್ಮಾಂಡದಲ್ಲಿ ನಾವು ಒಬ್ಬಂಟಿಗರೇ? ಬೇರೆ ಕಡೆ ಜೀವಿಗಳು ಇಲ್ಲವೇ? ಇದ್ದರೆ ಎಂತಿರಬಹುದು? ಈ ಎಲ್ಲಾ ಕುತೂಹಲ ಭರಿತ ಹಾಗೂ ರಹಸ್ಯಮಯ ಪ್ರಶ್ನೆಗಳಿಗೆ ಉತ್ತರ ದೊರಕಿಸುವುದು SETI ಕಾರ್ಯಕ್ರಮದ ಮೂಲ ಉದ್ದೇಶಗಳು.



## ನಾವು ಒಬ್ಬಂಟಿಗರೇ?

ಈ ಬ್ರಹ್ಮಾಂಡ ಅಪಾರ, ಅನಂತ. ಇಲ್ಲಿ ಹಲವಾರು ಶತಕೋಟಿ ನಕ್ಷತ್ರಗಳಿವೆ. ದಶಕೋಟಿಗಟ್ಟಲೇ ಗ್ರಹವ್ಯೂಹಗಳಿವೆ. (ಸೂರ್ಯನೆಂಬ ನಕ್ಷತ್ರದ ಸುತ್ತ ನವಗ್ರಹ ಗಳಿರುವಂತೆ, ಬೇರೆ ಬೇರೆ ನಕ್ಷತ್ರಗಳಿಗೆ ತಮ್ಮದೇ ಆದ ಗ್ರಹಗಳ ವ್ಯೂಹವಿದೆ).

ನಮ್ಮ ಭೂಮಿ ಇರುವ ಕ್ಷೀರಪಥದಲ್ಲಿಯೇ ನೂರು ಶತಕೋಟಿ ನಕ್ಷತ್ರಗಳಿವೆ. ಅಂದಮೇಲೆ ಇಡೀ ಬ್ರಹ್ಮಾಂಡದ ನಕ್ಷತ್ರ, ಗ್ರಹಗಳ ಸಂಖ್ಯೆ ನಮ್ಮ ಎಣಿಕೆಗೆ ಮೀರಿದ್ದು ಎಂದರೆ ಅತಿಶಯೋಕ್ತಿಯಾಗಲಾರದು. ಹೀಗಿರುವಾಗ ನಮ್ಮ ಭೂಮಿಯಲ್ಲಿ ಮಾತ್ರವೇ ಜೀವ ಉಗಮವಾಗಿ, ವಿಕಾಸ ಹೊಂದಿದೆಯೇ? ಬೇರೆಲ್ಲಿಯೂ ಇಲ್ಲವೇ? ಎನ್ನುವ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ.

ನಮ್ಮ ಈ ಭೂಮಿಯೊಂದೇ ಜೀವಿಗಳ ಉಗಮಕ್ಕೆ ಪ್ರಾಶಸ್ತ್ಯವಾದದ್ದು ಎಂದು ಹೇಳುವುದು ತರ್ಕಬದ್ಧವಾಗಲಾರದು. ಇದಕ್ಕೆ ಹಲವಾರು ಕಾರಣಗಳಿವೆ. ನಮ್ಮ ಭೂಗ್ರಹದಲ್ಲಿ ಅನ್ವಯವಾಗುವ ರಾಸಾಯನಿಕ ಮತ್ತು ಭೌತಿಕ ನಿಯಮಗಳೇ ವಿಶ್ವದ ಇತರ ಗ್ರಹ ಹಾಗೂ ನಕ್ಷತ್ರಗಳಲ್ಲಿಯೂ ಅನ್ವಯವಾಗುತ್ತವೆ. ಆದ್ದರಿಂದ ಈ ನಿಯಮಗಳಿಗೆ ಅನುಸಾರವಾಗಿ ಭೂಮಿಯಲ್ಲಿ ಜೀವಿಗಳು ಉಗಮವಾಗಿರಬೇಕಾದರೆ, ಇತರೆಡೆ ಯಾಕಾಗಿರಬಾರದು? ನಮ್ಮಲ್ಲಿ ಜೀವಿಗಳು ಉಗಮವಾಗಲು ಇಂಗಾಲ, ಸಾರಜನಕ ಮತ್ತು ರಂಜಕಗಳಂತಹ ಧಾತುಗಳು ಮೂಲಾಧಾರ ವಸ್ತುಗಳಾಗಿವೆ. ಆದರೆ, ಇತರ ಬೇರೆ ಬೇರೆ ರಾಸಾಯನಿಕ ಗಳಿಂದಲೂ ಜೀವಿಗಳ ಉಗಮ ಅಸಂಭವವೇನಲ್ಲ.

ಭೂಮಿಯಲ್ಲಿ ಜೀವ ಉಗಮವು, ಇಂತಹ ರಾಸಾಯನಿಕಗಳ ಯಾದೃಚ್ಛಿಕ ಜೋಡಣೆಯಿಂದಾಗಿದೆ. ಇಂತಹ ಯಾದೃಚ್ಛಿಕ ಘಟನೆಯನ್ನು ವಿವರಿಸಲು ಒಂದು ಹೋಲಿಕೆಯನ್ನು ನೀಡಬಹುದು. ನೀವು ಟೈಪ್‌ರೈಟರ್‌ವೊಂದರ ಮೇಲೆ ನಿಮ್ಮ ಮನಸ್ಸಿಗೆ ತೋಚಿದಂತೆ ಬೆರಳೊತ್ತುತ್ತಿದ್ದೀರಿ ಎಂದು ಊಹಿಸಿಕೊಳ್ಳಿ. ಆಗ ಮೂಡುವ ಬೆರಳಚ್ಚು ಅಸಂಬದ್ಧ ಹಾಗೂ ಅವ್ಯವಸ್ಥಿತವಾಗಿದ್ದು ಅರ್ಥರಹಿತವಾಗಿರುತ್ತವೆ.

## U.F.O. (ಹಾರುವ ತಟ್ಟೆಗಳು)

ಹಾರುವ ತಟ್ಟೆಗಳು ಮಾನವನ ಕುತೂಹಲವನ್ನು ಕೆದಕಿರುವಷ್ಟು ಬೇರಾವ ವಿಷಯವೂ ಕೆದಕಿಲ್ಲ ಎಂದರೆ ಉತ್ಪ್ರೇಕ್ಷೆಯೇನಲ್ಲ. ಬಡವ, ಬಲ್ಲಿದ ರಾಷ್ಟ್ರಗಳನ್ನದೆ ಎಲ್ಲೆಡೆಯೂ UFOಗಳು ಹಲವಾರು ಕಲ್ಪನೆ, ಕಥೆಗಳಿಗೆ ಜನ್ಮವಿತ್ತಿವೆ.

ಈ ಹಾರುವ ತಟ್ಟೆಗಳು ನಿಜಕ್ಕೂ ಅನ್ಯಗ್ರಹ ಜೀವಿಗಳನ್ನು ಹೊತ್ತು ತರುವ ವಾಹನಗಳೇ? ಅನ್ಯಗ್ರಹ ಜೀವಿಗಳು ಇವುಗಳಲ್ಲಿ ಬಂದು ನಮ್ಮನ್ನು ಪರೀಕ್ಷಿಸಿ ಹಿಂದಿರುಗುತ್ತಾರೆಯೇ? ಯಾರಿಗೂ ಖಚಿತವಾದ ಉತ್ತರ ಗೊತ್ತಿಲ್ಲ.

ಹಾರುವ ತಟ್ಟೆಗಳ ಅಸ್ಥಿತ್ವವನ್ನು ಅಲ್ಲಗಳೆಯುವವರ ಸಂಖ್ಯೆಯೂ ಕಮ್ಮಿ ಏನಲ್ಲ. ಈ ಹಾರುವ ತಟ್ಟೆಗಳು ಕೇವಲ ಭ್ರಮೆ ಎಂದು ವಾದಿಸುವ ಇವರು ಹಲವಾರು ಉದಾಹರಣೆಗಳನ್ನು ನೀಡುತ್ತಾರೆ.

ಇಂಗ್ಲೆಂಡ್‌ನಲ್ಲಿ ಹಳ್ಳಿಯೊಂದರಲ್ಲಿ ನಡೆದ ಹಾರುವ ತಟ್ಟೆಗಳ ಪ್ರಕರಣ ಇಂತಿದೆ :

ಆಕಾಶದಲ್ಲಿ ಇದ್ದಕ್ಕಿದ್ದಂತೆ ಹಾರುವ ತಟ್ಟೆಗಳು ಕಾಣಿಸಿಕೊಂಡವು. ಭರ್ರನೇ ಕಾಣಿಸಿಕೊಂಡು ಮಾಯವಾಗಿ ಬಿಡುತ್ತಿದ್ದ ಈ ಹಾರುವ ತಟ್ಟೆಗಳು ಭಯ, ಆಶ್ಚರ್ಯ ಮತ್ತು ಕುತೂಹಲದ ಚರ್ಚೆಯ ವಿಷಯಗಳಾದವು. ಆದರೆ ಕೊನೆಗೊಂದು ದಿನ ಅವುಗಳ ರಹಸ್ಯ ಬಯಲಾಯಿತು. ಕೆಲವು 'ತುಂಟ ಹುಡುಗರು' 'ಗಾಳಿಪಟ'ಗಳಿಗೆ ದೀಪವನ್ನು ಕಟ್ಟಿ ರಾತ್ರಿ ಹೊತ್ತು ಆಕಾಶದಲ್ಲಿ ತೇಲಿಬಿಟ್ಟು, ಹಾರುವ ತಟ್ಟೆಗಳ ಚಲನೆಯನ್ನು ಉಂಟು ಮಾಡುತ್ತಿದ್ದರಂತೆ!

## ಅಂತರಿಕ್ಷ ಪಯಣ ಮಾಡಬೇಕೆ?

ಮುಂಬಯಿ ಮತ್ತು ದೆಹಲಿ ನಡುವೆ ಓಡಾಡುವ ರಾಜಧಾನಿ ಎಕ್ಸ್‌ಪ್ರೆಸ್ ರೈಲು 'ನಾನ್ ಸ್ಟಾಪ್' ಆಗಿ ೧೨೦ ಕಿ.ಮಿ. ಪ್ರತಿ ಗಂಟೆ ವೇಗದಲ್ಲಿ ಓಡಿದರೆ, ಆ ಎರಡು ನಗರಗಳ ನಡುವಿನ ದೂರ ಕ್ರಮಿಸಲು ೧೩ ಗಂಟೆಗಳು ಬೇಕು. ಈಗ, ಇದೇ ರಾಜಧಾನಿ ಎಕ್ಸ್‌ಪ್ರೆಸ್‌ನಲ್ಲಿ ಕೂತು 'ಸೂರ್ಯ'ನ ಬಳಿ ಸಾಗಲು ಸಾಧ್ಯವಾಗುವಂತಿದ್ದರೆ, ಅದಕ್ಕೆ ತಗಲುವ ಸಮಯ ಎಷ್ಟು ಗೊತ್ತೇ? ೧೪೦ ವರ್ಷಗಳು! ಆದರೆ, ಚಂದ್ರನನ್ನು ತಲುಪಲು ನಾಲ್ಕೂವರೆ ತಿಂಗಳು ಸಾಕು. ಇನ್ನು, ನಮಗೆ ಹತ್ತಿರ ಇರುವ ಪ್ರಾಕ್ಸಿಮಾ ಸಂಚುರಿ (ನಕ್ಷತ್ರ) ತಲುಪಲು ೨,೪೦,೦೦,೦೦೦ ವರ್ಷಗಳು ಬೇಕು!

ಹಾಗಾದ್ರೆ ಯಾರ್‍ಯಾರು ರೆಡಿ 'ರಾಜಧಾನಿ ಎಕ್ಸ್‌ಪ್ರೆಸ್'ನ ಅಂತರಿಕ್ಷ ಪಯಣಕ್ಕೆ? ಟಿಕೇಟು ರಿಸರ್ವ್ ಮಾಡಿಸಿಕೊಳ್ಳಿ, ಇಂದೇ!!

## ೧೧,೨೫,೦೦೦ ಗ್ರಹಗಳಲ್ಲಿ ಜೀವಿಗಳು !

ಫ್ರಾಂಕ್ ಡ್ರೇಕ್ ಎನ್ನುವ ಅಮೇರಿಕದ ಖಗೋಳ ಶಾಸ್ತ್ರಜ್ಞ ಈ ವಿಶಾಲ ಬ್ರಹ್ಮಾಂಡದಲ್ಲಿ, ೧೧,೨೫,೦೦೦ ಗ್ರಹಗಳಲ್ಲಿ ಬೌದ್ಧಿಕ ಮತ್ತು ತಾಂತ್ರಿಕವಾಗಿ ಮುಂದುವರಿದ ಜೀವಿಗಳಿರಬಹುದು ಎಂದು ಲೆಕ್ಕಾಚಾರ ಹಾಕಿದ್ದಾನೆ. ಇದು ಬಹಳ ದೊಡ್ಡ ಸಂಖ್ಯೆಯಲ್ಲವೇ? ಖಗೋಳ ಶಾಸ್ತ್ರದಲ್ಲಿ ಸೊನ್ನೆಗಳಿಗೆ ಬೆಲೆ ಇಲ್ಲ ಎಂದುಕೊಂಡರೂ, ಶೇಷ ಉಳಿಯುವ ಸಂಖ್ಯೆಯೂ ಬಹು ದೊಡ್ಡದೇ! ಹೀಗಾಗಿ 'ಅನ್ಯಗ್ರಹ' ನಾಗರೀಕತೆಯವರು ನಮ್ಮೊಂದಿಗೆ ಇಂದಲ್ಲದಿದ್ದರೂ ನಾಳೆಯಾದರೂ ಖಂಡಿತಾ ಸಂಪರ್ಕ ಸಾಧಿಸಿಯೇ ತೀರುತ್ತಾರೆ ಅಥವಾ ಈಗಾಗಲೇ ನಮಗೆ ಕಳುಹಿಸಿರುವ ಸಂದೇಶವನ್ನು ನಾವು ಅರ್ಥೈಸಿಕೊಳ್ಳಲು ಅಸಮರ್ಥರಾಗಿದ್ದೇವೆಯೇ?

ಇಂತಹ ಕೆಣಕುವ ಪ್ರಶ್ನೆಗಳಿಗೆ ಉತ್ತರ ಪಡೆಯಲು ಹೊರಟರೆ, ಅದೊಂದು ಎಂದಿಗೂ ಮುಗಿಯದ, ಆದರೆ ನಿಗೂಢತೆ ಮತ್ತು ಆಶ್ಚರ್ಯಗಳಿಂದ ಕೂಡಿದ ಪಯಣವಾಗುವುದಂತು ದಿಟ.

'ಕಾರ್ಲ್ ಸಾಗನ್', 'ಅಸಿಮೋವ್', 'ಅರ್ಥರ್‌ಕ್ಲರ್ಕ್' ಮುಂತಾದವರು ಬರೆದ ಪುಸ್ತಕ ಹಾಗೂ ಲೇಖನಗಳನ್ನು ತಪ್ಪದೇ ಓದಿರಿ! ನಿಮಗೆ ಬ್ರಹ್ಮಾಂಡದ ಅಗಾಧತೆಯ, ಅಪಾರತೆಯ ಮತ್ತು ಅನಂತತೆಯ ಪರಿಚಯವಾಗುತ್ತದೆ. ಒಂದು ಬಾರಿ ಒಳ ಹೊಕ್ಕರೆ ಹೊರಬರುವ ಮನಸ್ಸಾಗದು!

ಆದರೆ, ಹೀಗೆಯೇ ನೀವು ಬೆರಳಚ್ಚನ್ನು ಮೂಡಿಸುತ್ತಾ ಹೋದರೆ ಒಂದಲ್ಲ ಒಂದು ಸಾರಿ ಅರ್ಥಪೂರ್ಣ ವಾಕ್ಯವೊಂದು ಮೂಡುವುದು ಅಸಾಧ್ಯವೇನಲ್ಲ. ಅದೇ ರೀತಿ ಭೂಮಿಯಲ್ಲಿಯೂ 'ಜೀವ ಉಗಮ'ಕ್ಕೆ ಮೊದಲು ಯಾದೃಚ್ಛಿಕವಾಗಿ ಭೌತಿಕ ಮತ್ತು ರಾಸಾಯನಿಕ ಕ್ರಿಯೆ/ಘಟನೆಗಳು ನಡೆದು ಕೊನೆಗೊಮ್ಮೆ ಜೀವಿಗಳು ಉದ್ಭವಿಸಿವೆ.

ಬ್ರಹ್ಮಾಂಡದ ಹಲವಾರು ಗ್ರಹಗಳಲ್ಲಿ ಈ ರೀತಿ 'ಯಾದೃಚ್ಛಿಕ' ಘಟನೆಗಳಿಂದ 'ಜೀವ ಉಗಮ'ದ ಸಂಭವನೀಯತೆ ಖಂಡಿತಾ ಇದೆ. ಹಲವು ಗ್ರಹಗಳಲ್ಲಿ ಇದೀಗ ತಾನೇ ಜೀವ ಉಗಮವಾಗಿದ್ದರೆ, ಇನ್ನು ಕೆಲವು ಗ್ರಹಗಳಲ್ಲಿ ಜೀವ ಉಗಮದ ಆರಂಭದ ಕ್ಷಣಗಳಿರ ಬಹುದು. ಇನ್ನು ಕೆಲವಲ್ಲಿ ಜೀವ ಉಗಮವಾಗಿ, ವಿಕಾಸ ಹೊಂದಿರಬಹುದು ಹಾಗೂ ತಾಂತ್ರಿಕತೆಯಲ್ಲಿ ನಮ್ಮಷ್ಟೇ ಅಥವಾ ನಮಗಿಂತಲೂ ಮುಂದಿರಬಹುದು.

ಈ ರೀತಿ ಸಾಧ್ಯತೆಗಳು ಅನೇಕ. ಆದರೆ ಅದನ್ನೆಲ್ಲ ನಿಖರವಾಗಿ ತಿಳಿಯುವುದು ಎಂತು? ಅಲ್ಲಿನ ಜೀವಿಗಳು ವಿಕಾಸದ ಯಾವ ಅವಸ್ಥೆಯಲ್ಲಿರಬಹುದು ಎನ್ನುವುದನ್ನು ಅರಿಯಲು, ನಾವು ಒಂದೋ ಅಲ್ಲಿಗೆ ಪಯಣಿಸಿ ನೋಡಬೇಕಾಗುತ್ತದೆ. ಇಲ್ಲವೇ, ಇಲ್ಲಿಂದಲೇ ತಿಳಿಯುವ ಪ್ರಯತ್ನ ಮಾಡಬೇಕಾಗುತ್ತದೆ. ಅಲ್ಲಿಗೆ ಹೋಗುವುದು ನಮ್ಮ ಸಧ್ಯದ ತಾಂತ್ರಿಕತೆಯಲ್ಲಿ ಅಸಾಧ್ಯ. ಹತ್ತಿರದ ಮಂಗಳ ಗ್ರಹಕ್ಕೆ ಇತ್ತೀಚೆಗೆ 'ಸೋಜರ್ನರ್' ಎಂಬ ಅಂತರಿಕ್ಷ ವಾಹನ ಕಳಿಸಲು ನಮಗೆ ಹೆಚ್ಚು ಕಮ್ಮಿ ೭ ತಿಂಗಳು ಕಾಲ ಬೇಕಾಯಿತು. ಹೀಗಿರುವಾಗ ಶತಕೋಟಿ 'ಜ್ಯೋತಿ ವರ್ಷ'ಗಳ ದೂರದಲ್ಲಿರಬಹುದಾದ ಗ್ರಹವ್ಯೂಹಗಳನ್ನು ನಾವು ಖುದ್ದಾಗಿ ಭೇಟಿ ನೀಡುವುದು ಮತ್ತು ಹಿಂತಿರುಗುವುದು ಕೇವಲ ವೈಜ್ಞಾನಿಕ ಕಲ್ಪನೆಯಲ್ಲಷ್ಟೇ ಸಾಧ್ಯ.

ಇನ್ನೊಂದು ರೀತಿಯಲ್ಲಿ ಅನ್ಯಗ್ರಹಗಳಲ್ಲಿ ಇರಬಹುದಾದ ನಾಗರೀಕತೆಯನ್ನು ಪತ್ತೆ ಹಚ್ಚುವ ಬಗೆಯೆಂದರೆ, ಅವರು ನಮಗೇನಾದರೂ ಸಂದೇಶ ಕಳುಹಿಸುತ್ತಿದ್ದಾರೆಯೇ ಎಂದು ರೇಡಿಯೋ ಟೆಲಿಸ್ಕೋಪ್‌ಗಳಿಗೆ ಕಿವಿಯಿಟ್ಟು ಆಲಿಸುವುದು ಮತ್ತು ನಮ್ಮ ಕಡೆಯಿಂದ ಅವರಿಗೆ ಸಂದೇಶ ಕಳುಹಿಸಿ ಅವರಿಂದ ಮಾರುತ್ತರ ಪಡೆಯಲು ಪ್ರಯತ್ನಿಸುವುದು.

ಆದರೆ, ಈ 'ಸಂಪರ್ಕ' ಬಹಳ ಸುಲಭ ಸಾಧ್ಯವಾದ ಕೆಲಸವಲ್ಲ. ಅನ್ಯಗ್ರಹ ಜೀವಿಗಳಿಗೆ ನಮ್ಮ ಇರುವಿಕೆಯ ಸುದ್ದಿಯನ್ನು ತಿಳಿಸುವುದು ಹೇಗೆ? ಬಳಸುವ ಭಾಷೆ ಎಂತಿರಬೇಕು? ನಮ್ಮ 'ಸಂದೇಶ'ದಲ್ಲಿ ಏನೆಲ್ಲಾ ವಿಷಯಗಳಿರಬೇಕು! ಅದು ಅವರಿಗೆ ಅರ್ಥವಾಗದೆ ಹೋದರೆ, ಸಂದೇಶ ಕಳುಹಿಸಿಯೂ ಪ್ರಯೋಜನವಿಲ್ಲ. ಹೀಗೆ ಇಂತಹ ಹಲವಾರು ಪ್ರಶ್ನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನಮ್ಮ ಭೂಗ್ರಹದ ಸಂದೇಶವನ್ನು ರೂಪಿಸಿ, ರೇಡಿಯೋ ತರಂಗಗಳಾಗಿ ಬಿತ್ತರಿಸಬೇಕಾಗುತ್ತದೆ. ಇಂತಹ ಒಂದು ಸಂದೇಶವನ್ನು ಮೊತ್ತಮೊದಲಿಗೆ ಅಂತರಿಕ್ಷಕ್ಕೆ ಕಳುಹಿಸಿದವರೆಂದರೆ ಕಾರ್ಲ್ ಸಾಗನ್ (Carl Sagan) ಮತ್ತು ಸಂಗಡಿಗರು.

ಇವರು ಭೂಮಿಯಿಂದ ೧೫,೦೦೦ ಜ್ಯೋತಿ ವರ್ಷಗಳ ದೂರದಲ್ಲಿರುವ ಎಂ-೧೩ ಎಂಬ ನಕ್ಷತ್ರ ಸಂಕುಲಕ್ಕೆ ಸಂದೇಶದ ಚಿತ್ರವನ್ನು ಪ್ರಸಾರ ಮಾಡಿದರು. ಇದಕ್ಕಾಗಿ ಇವರು ಬಳಸಿದ್ದು ಯುಗ್ಮಭಾಷೆ (Binary Language). ಇದು ಕಂಪ್ಯೂಟರ್‌ಗಳಲ್ಲಿ ಬಳಸಲ್ಪಡುವ ಭಾಷೆ. ಇದನ್ನು On ಮತ್ತು Off pulseಗಳಾಗಿ ಬಿತ್ತರಿಸಲಾಯಿತು. ಇದರಲ್ಲಿ ಒಟ್ಟು ೧೬೭೯ ಬಿಟ್ಸ್ (Bytes)ಗಳಿವೆ. ಇವುಗಳನ್ನು ೭೩ ಅಡ್ಡ ಪಂಕ್ತಿಗಳಲ್ಲೂ ೨೩ ಸ್ತಂಭ (column)ಗಳಲ್ಲೂ ಕ್ರಮಬದ್ಧವಾಗಿ ವ್ಯವಸ್ಥೆಗೊಳಿಸಿದಾಗ 'ಸಂದೇಶ'ದ ರೂಪ ಸ್ಪಷ್ಟವಾಗುತ್ತದೆ. ಯುಗ್ಮ ಭಾಷೆಯು ಒಂದು (1) ಮತ್ತು ಸೊನ್ನೆಯ (0) ಸರಮಾಲೆ. '0'(ಸೊನ್ನೆ)ಯನ್ನು ಕಪ್ಪು ಚೌಕಗಳಿಂದ ಮತ್ತು 1 (ಒಂದನ್ನು) ಬಿಳಿ ಚೌಕಗಳಿಂದ ವ್ಯಕ್ತಪಡಿಸಿದರೆ ಸಂದೇಶ ಪಡೆದವರಿಗೆ ಇದು ಭೂಗ್ರಹದ ಬಗ್ಗೆ ಅದ್ವಿತೀಯ ಮಾಹಿತಿ ಹಾಗೂ ಚಿತ್ರಣ ನೀಡುತ್ತದೆ. ಈ ಸಂದೇಶವು ಭೂಮಿಯ ಬಗ್ಗೆ ಮತ್ತು ಮಾನವನ ಬಗೆಗೂ ಬಹಳಷ್ಟು ಉಪಯುಕ್ತ ಮಾಹಿತಿ ಹೊಂದಿರುವ 'ಸಂದೇಶ'.

ಯುಗ್ಮ ಭಾಷೆಯಲ್ಲಿ ಈ ಚಿತ್ರವನ್ನು ವಿಶ್ಲೇಷಣೆ ಮಾಡಿದಾಗ ಮೇಲು ಭಾಗ ೧ರಿಂದ ೧೦ರ ವರೆಗಿನ ಸಂಖ್ಯೆಗಳನ್ನು ತೋರುತ್ತದೆ. ಇದು ನಮ್ಮ ಭೂಮಿ ಗ್ರಹದಲ್ಲಿ ೧ರಿಂದ ಹತ್ತರವರೆಗಿನ ಎಣಿಕೆ ಹೇಗೆ ಮಾಡುತ್ತೇವೆ ಎನ್ನುವುದನ್ನು ತಿಳಿಸುವುದು. ಇದರ ಕೆಳಗಿನ ಸಾಲು, ನಮ್ಮ ಭೂಮಿಯ ಜೀವಿಗಳ ಮೂಲಾಧಾರ ಧಾತು (Elements)ಗಳ ಬಗ್ಗೆ (ಅಂದರೆ ಜಲಜನಕ, ಇಂಗಾಲ, ಸಾರಜನಕ,

ಆಮ್ಲಜನಕ ಮತ್ತು ರಂಜಕಗಳ ಪರಮಾಣು ಸಂಖ್ಯೆಗಳ (Atomic Number) ಪಟ್ಟಿ ಮಾಹಿತಿ ನೀಡುವುದು. ಅವುಗಳ ಕೆಳಗೆ ಸಜೀವ ವಸ್ತುಗಳ ಬಹು ಮುಖ್ಯ ಆಧಾರವಸ್ತು ಡಿ.ಎನ್.ಎ. (D.N.A.)ನ ರಾಸಾಯನಿಕ ಸೂತ್ರವನ್ನು ಮತ್ತು ಅದರ 3D image ಅನ್ನು ನೀಡಲಾಗಿದೆ. ಇದಾದ ನಂತರ ಕಡ್ಡಿಯಂತೆ ಕಾಣುವ ಆಕೃತಿಯು ಮಾನವ ಪ್ರಭೇದವನ್ನು ಪ್ರತಿನಿಧಿಸುತ್ತದೆ. ಭೂಗ್ರಹದ ಜನಸಂಖ್ಯೆಯೂ ಇಲ್ಲಿ ಅಡಕವಾಗಿದೆ. ಮಾನವನ ಸರಾಸರಿ ಎತ್ತರವನ್ನು ತರಂಗಾಂತರಗಳ ಗುಣಿತಗಳಲ್ಲಿ ಲಭಿಸುವಂತೆ ವ್ಯಕ್ತಪಡಿಸಲಾಗಿದೆ. ಇಲ್ಲಿ ಒಟ್ಟು ೯ ಗ್ರಹಗಳಿದ್ದು, ಸೂರ್ಯನಿಂದ ೩ನೇ ಗ್ರಹವೇ ಭೂಮಿ ಮತ್ತು ಈ ಭೂಗ್ರಹದಿಂದ ಈ ಸಂಕೇತಗಳನ್ನು ರೇಡಿಯೋ ಟೆಲಿಸ್ಕೋಪ್‌ನ್ನು ಬಳಸಿ (೨,೪೩೦ ತರಂಗಾಂತರ ಅಥವಾ ೩೦೬ ಮೀಟರ್ ವ್ಯಾಸವುಳ್ಳ) ಬಿತ್ತರಿಸಲಾಗಿದೆ ಎಂದು ತಿಳಿಸುತ್ತಾ - 'Yours truly' ಎಂದು 'ಸಂದೇಶ'ವು ಮುಕ್ತಾಯವಾಗುತ್ತದೆ.

ಈ ಸಂದೇಶ ಬಿತ್ತರಿಸಿ ಈಗಾಗಲೇ ೨ ದಶಕಗಳಿಗೂ ಹೆಚ್ಚು ಕಾಲ ಕಳೆದಿದೆ. ಆದರೆ, ಯಾವುದೇ ಮಾರುತ್ತರ ಇಲ್ಲಿಯ ತನಕ ಬಂದಿಲ್ಲ. ಇದರಲ್ಲಿ ನಿರಾಸೆಪಡಬೇಕಾದ್ದು ಏನಿಲ್ಲ. ಯಾಕೆಂದರೆ ನಮ್ಮ 'ಸಂದೇಶ' ಇನ್ನು ಮಾರ್ಗ ಮಧ್ಯದಲ್ಲಿಯೇ ಪಯಣಿಸುತ್ತಿದೆ. ಅದು ತನ್ನ ಗಮ್ಯ ತಲುಪಲು ಬೇಕಾಗುವ ಅವಧಿ ೧೫,೦೦೦ ವರ್ಷಗಳು. ಹೀಗಾಗಿ ಅದು ತಲುಪಿದರೂ, ಅಲ್ಲಿಂದ ಬರುವ ಮಾರುತ್ತರ ಪಡೆಯುವುದು ನಮ್ಮ ಇಂದಿನ ಜನಾಂಗಕ್ಕೆ ಅಸಾಧ್ಯ.

ಹಾಗಿದ್ದಲ್ಲಿ, ಇಲ್ಲಿ ಇನ್ನೊಂದು ಮುಖ್ಯ ಪ್ರಶ್ನೆ ಉದ್ಭವಿಸುತ್ತದೆ. ಅನ್ಯಗ್ರಹ ಜೀವಿಗಳೊಂದಿಗೆ ಸಂಪರ್ಕ ನಮ್ಮ ತಲೆಮಾರಿಗೆ ಅಸಾಧ್ಯವೆಂದಾದ ಮೇಲೆ ಇದರಿಂದ ಪ್ರಯೋಜನ ಯಾರಿಗೆ? ಶತಕೋಟಿ ಡಾಲರ್‌ಗಳಷ್ಟೇ ಹಣ ವ್ಯಯಿಸಬೇಕಾದ ಇಂತಹ ಶೋಧಗಳಿಂದ ಯಾರಿಗೂ ಲಾಭವಿಲ್ಲ ಎಂದು ಮೇಲ್ನೋಟಕ್ಕೆ ಕಂಡರೂ, ಖಗೋಳ ಶಾಸ್ತ್ರಜ್ಞರು ಇದನ್ನು ಕೇವಲ ಲಾಭ ಮತ್ತು ನಷ್ಟಗಳ ಲೆಕ್ಕಾಚಾರದಲ್ಲಿ ನೋಡಬಾರದು ಎನ್ನುತ್ತಾರೆ.

ಬೇರೆ ಗ್ರಹಗಳಲ್ಲಿ ಜೀವಿಗಳಿವೆ ಎನ್ನುವುದೇ ಒಂದು ದೊಡ್ಡ ಸಮಾಧಾನದ ಸಂಗತಿಯಾಗಬೇಕು ಎನ್ನುತ್ತಾರೆ ಅವರು. ಆ ಜೀವಿಗಳು ನಮ್ಮ ಪೂರ್ವಜರೂ ಆಗಿರಬಹುದು. 'ಬ್ರಹ್ಮಾಂಡ'ದಲ್ಲಿ ದೂಳಿನ ಕಣಗಳ ಜೊತೆ ಸೂಕ್ಷ್ಮ ಜೀವಿಗಳು ಬಹು ದೂರಕ್ಕೆ ತೇಲಿ ಹೊಸ ಹೊಸ ಗ್ರಹಗಳಲ್ಲಿ 'ಜೀವ'ದ ಬೀಜವನ್ನು ಬಿತ್ತುತ್ತವೆ ಎನ್ನುವ ವಾದವನ್ನು ಹಲವರು ಮಂಡಿಸಿದ್ದಾರೆ. ಆದ್ದರಿಂದ ನಾವು ಬೇರೆ ಯಾವುದಾದರೂ ಜೀವಂತ ಗ್ರಹದಿಂದ ಇಲ್ಲಿ ಮೊದಲು ಸೂಕ್ಷ್ಮ ಜೀವಾಣುಗಳಾಗಿ ಬಿತ್ತಲ್ಪಟ್ಟು ಕಾಲ ಕ್ರಮೇಣ ಬಹುಕೋಶ ಜೀವಿಗಳಾಗಿ ವಿಕಾಸ ಹೊಂದಿರಬಹುದಾದ ಸಾಧ್ಯತೆಗಳು ಇವೆ ಅಲ್ಲವೇ? ಹೀಗಾಗಿ ನಮ್ಮ ಮೂಲಪುರುಷರು ಅಲ್ಲಿನ ಗ್ರಹಗಳಲ್ಲಿ ಇರಬಾರದೇಕೆ? ಹಾಗೂ ಅವರೊಂದಿಗೆ ಸಂಪರ್ಕ ಸಾಧ್ಯವಾಗುವುದಾದರೆ ಅದೊಂದು ರೋಮಾಂಚಕ ಮತ್ತು ಅವಿಸ್ಮರಣೀಯ ಘಟನೆಯಾಗಲಾರದೆ! ಈ ರೀತಿ ಹಲವಾರು ಸಮಜಾಯಿಷಿಗಳನ್ನು ನೀಡುತ್ತಾರೆ.

ಸುಪ್ರಸಿದ್ಧ ಖಗೋಳ ಶಾಸ್ತ್ರಜ್ಞ ಹಾಗೂ ವಿಶ್ವವಿಖ್ಯಾತ ವಿಜ್ಞಾನ ಲೇಖಕ ಕಾರ್ಲ್ ಸಾಗನ್ (Carl Sagan) ಸಹ ಅನ್ಯಗ್ರಹ ಜೀವಿ ಅನ್ವೇಷಣೆಯ ಬಗ್ಗೆ ಭರವಸೆಯ ಮಾತುಗಳನ್ನು ಹೇಳಿದ್ದಾರೆ. ಅವರ ಪ್ರಕಾರ, ನಮಗಿಂತ ತಾಂತ್ರಿಕವಾಗಿ ಉನ್ನತಿ ಹೊಂದಿದ ನಾಗರೀಕತೆಯೊಂದು ಕತ್ತಲ ಲೋಕದ ಯಾವ ಅಂಚಿನಲ್ಲಿದ್ದರೂ, ಅದು ನಮ್ಮ ಪಾಲಿನ ಆಶಾಕಿರಣವೆಂದು ಪರಿಗಣಿಸಬೇಕು. ಮಾನವ ಇಂದು ಏನೆಲ್ಲಾ ಪ್ರಗತಿಯನ್ನು 'ತಾಂತ್ರಿಕತೆ'ಯಲ್ಲಿ, ವೈಜ್ಞಾನಿಕ ಕ್ಷೇತ್ರದಲ್ಲಿ ಸಾಧಿಸಿದ್ದಾನೆ. ಆದರೆ, ಅವನು ತನ್ನ ಭವಿಷ್ಯದ ಬಗ್ಗೆ ಸದಾ ಚಿಂತಿತನಾಗಿದ್ದಾನೆ. ತಾನು ತನ್ನ ತಾಂತ್ರಿಕತೆಯಿಂದಲೇ (ಉದಾ: ಅಣುಬಾಂಬು) ನಾಶಹೊಂದಬಲ್ಲ ಎಂಬ ಭೀತಿ ಅವನನ್ನು ಬೆಂಬಿಡದೆ ಕಾಡುತ್ತಿದೆ. ಒಂದು ವೇಳೆ ಹಾಗಾದಲ್ಲಿ ನಮ್ಮ ನಾಗರೀಕತೆಯ ಕತೆ ಮುಗಿದಂತೆಯೇ ಅಲ್ಲವೇ? ಇದಕ್ಕಿಂತ ಘೋರ ದುರಂತವೆಂದರೆ ಬ್ರಹ್ಮಾಂಡದಲ್ಲಿ ಜೀವಿಗಳೆಂಬ ಅದ್ಭುತ ಸೃಷ್ಟಿಯು ಕೊನೆಗೊಂಡಂತೆಯೇ. ಆದರೆ, ಭವಿಷ್ಯ ಇಷ್ಟು ಕರಾಳವಾಗಿರಲಾರದು. ಅನ್ಯಗ್ರಹದ ನಾಗರೀಕತೆ ನಮಗಿಂತಲೂ ಉತ್ಕೃಷ್ಟವಾದ ತಂತ್ರಜ್ಞಾನ ಹೊಂದಿಯೂ ಜೀವಿಸುತ್ತಿರುವುದು ನಿಜವಾದರೆ, ನಾವು ಸಹ ಖಂಡಿತವಾಗಿ ಭವಿಷ್ಯವನ್ನು ಹೊಸ ಆಶಾಕಿರಣಗಳಿಂದ ಎದುರು ನೋಡಬಹುದು. ●

## ಜ್ಯೋತಿ ವರ್ಷ

ಜ್ಯೋತಿ ವರ್ಷ ಎನ್ನುವುದು ಬೆಳಕು (ಪ್ರಕಾಶ) ಒಂದು ವರ್ಷದಲ್ಲಿ ಪಯಣಿಸಿದ ದೂರ. ಇದನ್ನು ಪ್ರಕಾಶ ವರ್ಷವೆಂದೂ ಕರೆಯಲಾಗುತ್ತದೆ.

ನಮ್ಮಿಂದ ಒಂದು ನಕ್ಷತ್ರ ೫ ಸಾವಿರ ಪ್ರಕಾಶ ವರ್ಷಗಳಷ್ಟು ದೂರವಿದೆ ಎಂದರೆ, ಇದರರ್ಥವೇನು ಗೊತ್ತೇ? 'ಪ್ರಕಾಶ'ಕ್ಕೂ ಅಲ್ಲಿಂದ ನಮಗೆ ತಲುಪಲು ೫ ಸಾವಿರ ವರ್ಷಗಳು ಬೇಕೆಂದು. ಅಂದರೆ ಒಂದು ಸೆಕೆಂಡಿಗೆ ೨೯೯,೭೯೨.೫ ಕಿ.ಮೀ. ವೇಗದಲ್ಲಿ ಚಲಿಸುವ ಪ್ರಕಾಶಕ್ಕೆ ಇಷ್ಟು ವರ್ಷ ತಗುಲಬಹುದಾದಲ್ಲಿ ನಿಜವಾದ ದೂರ ಎಷ್ಟಿರಬಹುದಲ್ಲವೇ? ಇಲ್ಲಿ ಇನ್ನೊಂದು ಸೋಜಿಗವಿದೆ. ಅದೇನೆಂದರೆ, ಉದಾಹರಣೆಗೆ ನಕ್ಷತ್ರ ಒಂದರಿಂದ ೪೦೦ ವರ್ಷಗಳ ಹಿಂದೆ ಹೊರಟ ಕಿರಣಗಳು ಇಂದು ನಮ್ಮನ್ನು ತಲುಪಿದರೆ, ನಾವು ನೋಡುತ್ತಿರುವುದು ಈ ಕ್ಷಣದ ನಕ್ಷತ್ರವನ್ನಲ್ಲ, ಬದಲಾಗಿ ೪೦೦ ವರ್ಷಗಳ ಹಿಂದಿನ ನಕ್ಷತ್ರವನ್ನು!

ವಿಷಯ ಹೀಗಿರಲು, ಅನ್ಯಗ್ರಹದ ಜೀವಿಗಳು ಕಳುಹಿಸಿದ ಸಂದೇಶವೊಂದು, ನಮಗೆ ಇಂದು ತಲುಪಿದೆ ಎಂದರೆ, ಅದು ಅಲ್ಲಿಂದ ಹೊರಟು ಎಷ್ಟೋ ಸಮಯವಾಯಿತು ಎಂದರರ್ಥ ಮತ್ತು ಅದನ್ನು ಕಳುಹಿಸಿದ ಜೀವಿಗಳು ಇಂದು ಬದುಕಿವೆಯೋ ಅಥವ ಗತಿಸಿವೆಯೋ ಯಾರಿಗೆ ಗೊತ್ತು?!

# ಬಿಜಾಪುರ ಜಿಲ್ಲೆಯ ಸೈಕಲ್ ತಾರೆಗಳು

**ಬಿಜಾಪುರ ಜಿಲ್ಲೆಯ ಸೈಕಲ್ ತಾರೆಗಳ ಸಾಧನೆ ಕಳೆದ ಇಪ್ಪತ್ತು ವರ್ಷಗಳಿಂದಲೂ ಗಮನಾರ್ಹವಾದುದು. ಸ್ಪರ್ಧೆ ಎಲ್ಲಿಯೇ ನಡೆಯಲಿ, ಬಿಜಾಪುರ ಜಿಲ್ಲೆಯ ಸೈಕಲ್ ತಾರೆಗಳು ಕಣದಲ್ಲಿದ್ದಾರೆಂದರೆ ಉಳಿದ ಸ್ಪರ್ಧಾಳುಗಳ ಎದೆ ಬಡಿತ ಮೇರೆದಪ್ಪುವುದು ನಿಶ್ಚಿತ.**

○ ಜಗದೀಶ ಶ. ದುದ್ಗಿ
ಹುನಗುಂದ

ಬಿಜಾಪುರ ಜಿಲ್ಲೆಯ ಸೈಕ್ಲಿಂಗ್ ತಾರೆಗಳ ಅದ್ವಿತೀಯ ಸಾಧನೆ ಕರ್ನಾಟಕಕ್ಕಷ್ಟೇ ಅಲ್ಲ, ಭಾರತಕ್ಕೇ ಅಭಿಮಾನದ ಸಂಗತಿ. ಯಾವಾಗಲೂ ಬರದ ಮುಷ್ಟಿಯಲ್ಲಿ ಸಿಲುಕಿ ನರಳುವ ಬಿಜಾಪುರ ಜಿಲ್ಲೆ ಸೈಕಲ್ ತಾರೆಗಳ ತವರೂರು. ಭಾರತ ಸೈಕ್ಲಿಂಗ್ ಕ್ಷೇತ್ರದಲ್ಲಿನ ಕರ್ನಾಟಕದ ಅದೂ ಬಿಜಾಪುರ ಜಿಲ್ಲೆಯ ಸೈಕಲ್ ತಾರೆಗಳ ಸಾಧನೆ ಕಳೆದ ಇಪ್ಪತ್ತು ವರ್ಷಗಳಿಂದಲೂ ಗಮನಾರ್ಹವಾದುದು. ಸ್ಪರ್ಧೆ ಎಲ್ಲಿಯೇ ನಡೆಯಲಿ, ಬಿಜಾಪುರ ಜಿಲ್ಲೆಯ ಸೈಕಲ್ ತಾರೆಗಳು ಕಣದಲ್ಲಿದ್ದಾರೆಂದರೆ ಉಳಿದ ಸ್ಪರ್ಧಾಳುಗಳ ಎದೆ ಬಡಿತ ಮೇರೆದಪ್ಪುವುದು ನಿಶ್ಚಿತ. ಇದಕ್ಕೆ ಅವರ ನಿರಂತರ ಪರಿಶ್ರಮ, ಛಲ, ಕ್ರೀಡಾ ಮನೋಭಾವ (ಇವರಿಗೆ ಸರಕಾರದ ಉತ್ತೇಜನ, ಸಹಾಯ, ಸಹಕಾರದ ಅಭಾವ)ವೇ ಮೂಲಕಾರಣ.

ಸೂರ್ಯನ ಹೊಂಗಿರಣ ಭೂದೇವಿಯನ್ನು ಆಲಂಗಿಸಿ, ಚುಂಬಿಸುವ ಮುನ್ನವೇ ಬಿಜಾಪುರ-ಸೋಲ್ಲಾಪುರ ಹೊರವಲಯದ (ರಾಷ್ಟ್ರೀಯ ಹೆದ್ದಾರಿ ಸಂ-೧೩) ರಸ್ತೆಯಲ್ಲಿ ಅತೀ ಶಿಸ್ತು, ಹುಮ್ಮಸ್ಸಿನಿಂದ ಅಭ್ಯಾಸದಲ್ಲಿ ತನ್ಮಯರಾಗಿರುವ ಸೈಕ್ಲಿಸ್ಟ್‌ಗಳ ತಂಡ, ಅವರನ್ನು ಎಡೆಬಿಡದೇ ಹಿಂಬಾಲಿಸುತ್ತ ಸೂಕ್ತ ಮಾರ್ಗದರ್ಶನ, ಸಲಹೆ-ಸೂಚನೆ ನೀಡುವ ತರಬೇತುದಾರರನ್ನು ಕಾಣುವುದು ಸರ್ವೇಸಾಮಾನ್ಯ. ಅದರಂತೆ ಸಂಜೆಗೆಂಪಿನ ಸಂಧ್ಯಾಕಾಲದಲ್ಲೂ ಅದರ ಪುನರಾವರ್ತನೆ. ಪ್ರತಿನಿತ್ಯ ಸುಮಾರು ೨೦೦ ಕಿ.ಮೀ. (ಎರಡೂ ಹೊತ್ತು ಸೇರಿ)ನಷ್ಟು ದೂರವನ್ನು ಕ್ರಮಿಸುವ ಕಟ್ಟು-ನಿಟ್ಟಿನ ತರಬೇತಿ ಇದ್ದದ್ದೇ. ಇವರ ಅಹರ್ನಿಶಿ ಪ್ರಯತ್ನದ ಫಲವನ್ನು ನಾವು ಸೈಕ್ಲಿಂಗ್ ಸ್ಪರ್ಧೆಗಳ ಪದಕಗಳ ಪಟ್ಟಿಯತ್ತ ದಿಟ್ಟಿ ನೆಟ್ಟಾಗ ಮನಗಾಣದಿರದು.

ಈಗಾಗಲೇ ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲೂ ತಮ್ಮ ಹಿರಿಮೆ ಮೆರೆದಿರುವ ಚಂದ್ರಪ್ಪ ಕುರುಣಿ, ರಾಜಾಸಾಬ ಅತ್ತಾರ, ಸಾಬು ಸತ್ಯಪ್ಪ ತೇರದಾಳ, ರೇಣುಕಾ ಫಡತಾರೆಯವರಲ್ಲದೇ, ಕೃಷ್ಣಮೂರ್ತಿ, ವೈ.ಹೆಚ್. ಎಂಟೆತ್ತು, ಮುತ್ತಪ್ಪ ಕುಲಿಯರ, ಮುತ್ತಪ್ಪ ಕಾ. ಮಾಳಿ, ಎಸ್.ಎಂ ಕುರುಣಿ, ಸೋಮಲಿಂಗ ಗಾಳಿ, ಲಕ್ಷ್ಮಣ ಬಿ. ಮಾಳಿ, ವಿಜಯಸಿಂಗ್ ರಜಪೂತ, ವಿಠ್ಠಲ ಬುರುಜಿ, ರಾಜು ಬಿರಾದಾರ, ನಿಜಪ್ಪ ಎಂಟೆತ್ತು ಮತ್ತು ರಾಜು ಎಂಟೆತ್ತು, ಮಲ್ಲಪ್ಪ ಹಿರೇಕುರುಬರ, ಸಂದೀಪ ಬ. ಅಥಣಿ, ಲಕ್ಷ್ಮಣ ಜೈನಾಪುರ, ಸಂತೋಷ. ಅಸುಗಡೆ, ಆನಂದ ಬಿರಾದಾರ, ಸಂತೋಷ ಪಾಟೀಲ, ಸಿದ್ದು ಅಂಬಿ, ಸಂಜೀವ ಪದರಾ, ಮಂಜುನಾಥ ನೇಸರಗಿ ಹಾಗೂ ಕುಮಾರಿಯರಾದ ಶ್ರೀ ದೇವಿ ಪಾಟೀಲ, ಶಾರದಾ ವಸ್ತ್ರದ, ವೀಣಾ ಪರ್ವತೀಕರ, ಗಂಗು ಬಿರಾದಾರ, ಶೀಲಾ ಪಾಟೀಲ, ಅಲಕಾ ಫಡತಾರೆ, ಪ್ರೇಮಲತಾ ಸುರೇಬಾನ, ಮಧುರಾ ಮೋದಕ ಪ್ರಮುಖರು.

**೧. ಚಂದ್ರಪ್ಪ ಮಲ್ಲಪ್ಪ ಕುರುಣಿ :** ಜಮಖಂಡಿ ತಾಲೂಕಿನ ಕುಲಬಾರ ಹಳ್ಳಿಯಲ್ಲಿ ದಿ. ೨೨-೭-೧೯೫೦ರಂದು ಜನಿಸಿರುವ ಚಂದ್ರು ೧೯೭೭ರಲ್ಲಿ ಬೆಂಗಳೂರಲ್ಲಿ ೨೦೦ ಕಿ.ಮೀ. ರಾಷ್ಟ್ರಮಟ್ಟದ ಸೈಕಲ್ ಸ್ಪರ್ಧೆಯಲ್ಲಿ ಸಾಮಾನ್ಯ ಸೈಕಲ್‌ನಲ್ಲಿಯೇ ಅತಿರಥ ಮಹಾರಥರನ್ನೂ ಹಿಂದೆ ಹಾಕಿ ಮೊದಲ ಬಹುಮಾನ ತಮ್ಮದಾಗಿಸಿಕೊಂಡರು. ರಾಷ್ಟ್ರ-ಅಂತರ ರಾಷ್ಟ್ರೀಯ ಸೈಕ್ಲಿಂಗ್ ಕ್ರೀಡಾರಂಗದಲ್ಲೂ ತಮ್ಮತನವನ್ನು ಮೆರೆದು ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿರುವ ಸೈಕಲ್ ತೆರೆಯ ಮೇಲಿನ ಹಾಗೂ ಈಗ ತೆರೆಯ ಹಿಂದಿನ ಸರದಾರರಾಗಿರುವ ಚಂದ್ರು ಕುರುಣಿ ೧೯೭೮ರಿಂದ ಕರ್ನಾಟಕ ರಾಜ್ಯ ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆಯಲ್ಲಿ ಸೈಕ್ಲಿಂಗ್ ತರಬೇತುದಾರರಾಗಿ ಸೇವೆ ಸಲ್ಲಿಸುತ್ತಲಿದ್ದಾರೆ. ಇವರ ವಿಶೇಷ ಕಾಳಜಿ, ಪರಿಶ್ರಮದ ಪರಿಣಾಮದಿಂದಲೇ ಸಾಕಷ್ಟು ಸೈಕಲ್ ಪಟುಗಳು ಸೈಕ್ಲಿಂಗ್ ರಂಗದ ಉಜ್ವಲ ತಾರೆಗಳಾಗಿ ಮಿಂಚಿದ್ದಾರೆ, ಮಿಂಚುತ್ತಲಿದ್ದಾರೆ.


ಚಂದ್ರಪ್ಪ ಮಲ್ಲಪ ಕುರುಣಿ


ವಿಠ್ಠಲ್ ವಾಯ್ ಬುರುಜಿ


ಸೋಮಲಿಂಗ ಹೆಚ್.ಗಾಳಿ


ರಾಜು ಬಿರಾದಾರ




ಗಂಗು ಬಿರಾದಾರ, ಅಲಕಾ ಎನ್.ಫಡತರೆ, ಶೀಲಾ ಪಾಟೀಲ, ಪ್ರೇಮಲತಾ ವಿ.ಸುರೇಬಾನ

**೨. ವಿಠ್ಠಲ್ ವಾಯ್ ಬುರುಜಿ :** ೧-೬-೬೫ರಲ್ಲಿ ಜನಿಸಿರುವ ವಿಠ್ಠಲ ೧೯೮೯ರಲ್ಲಿ ಪ್ರಾಮೀಸ್ ಸ್ಟೇಜ್ ರೇಸ್‌ನ ೬೮೦ ಕಿ.ಮೀ. ಯಲ್ಲಿ ದ್ವಿತೀಯ, ೧೦೦ ಕಿ.ಮೀ. ರಸ್ತೆ ಸ್ಪರ್ಧೆಯ ಟೀಂ ಟೈಂ ಟ್ರಯಲ್‌ನಲ್ಲಿ ಪ್ರಥಮ, ತಮಿಳ್ನಾಡಿನ ಕೊಯಮತ್ತೂರಲ್ಲಿ ೨೫ ಕಿ.ಮಿ. ಯಲ್ಲಿ ಪ್ರಥಮ, ಎಪ್ರಿಲ್-೧೯೯೦ ಸೈಕ್ಲಿಂಗ್ ಫೆಡರೇಷನ್ ಆಫ್ ಇಂಡಿಯಾದವರ ಹೈದರಾಬಾದ್‌ನಲ್ಲಿ ನಡೆದ ರಾಷ್ಟ್ರೀಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೧೦೦ ಕಿ.ಮೀಯಲ್ಲಿ ದ್ವಿತೀಯ, ದಕ್ಷಿಣ ವಲಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನಲ್ಲಿ ದ್ವಿತೀಯ, ೧೯೯೦ ಕರ್ನಾಟಕದ ಅಮೆಚೂರ್ ಸೈಕ್ಲಿಂಗ್ ಅಸೋಶಿಯೇಷನ್‌ದ ೧೦೦೦ ಮತ್ತು ೪೦೦೦ ಕಿ.ಮೀ. ಸ್ಪರ್ಧೆಯಲ್ಲಿ ಪ್ರಥಮ, ೧೯೯೪ ರಾಷ್ಟ್ರೀಯ ಸ್ಪರ್ಧೆ ಪೂನಾದಲ್ಲಿ ೧೦೦ ಕಿ.ಮೀ.ಯಲ್ಲಿ ದ್ವಿತೀಯ, ಮದ್ರಾಸ್‌ನಲ್ಲಿ ೧೬೦ ಕಿ.ಮೀ. ರೋಡ್ ರೇಸ್‌ನಲ್ಲಿ ಪ್ರಥಮ, ಬೆಂಗಳೂರಿನಲ್ಲಿ ಮೇ ಮತ್ತು ಜೂನ್ ೯೭ರಲ್ಲಿ ನಡೆದ ೪ನೇ ರಾಷ್ಟ್ರೀಯ ಕ್ರೀಡಾಕೂಟದ ೭೦ ಕಿ.ಮೀ. ರಸ್ತೆ ಟೀಂ ಟೈಂ ಟ್ರಯಲ್‌ನಲ್ಲಿ ಪ್ರಥಮ ಹಾಗೂ ೪೦೦ ಮೀ ವೈಯಕ್ತಿಕ ಪರಸೂಟ್‌ನಲ್ಲಿ ತೃತೀಯ ಸ್ಥಾನ ಪಡೆದಿದ್ದಾರೆ. ಅಕ್ಟೋಬರ್-೯೭ ಚೆನ್ನೈನ ರಾಷ್ಟ್ರೀಯ ಮಟ್ಟದ ಸೈಕ್ಲಿಂಗ್‌ನ ೧೦೦ ಕಿ.ಮೀ.ಯನ್ನು ೨ ತಾ, ೪೩ ನಿ, ೨೪ ಸೆ.ದಲ್ಲಿ ಕ್ರಮಿಸಿ ಸ್ವರ್ಣ ಪದಕ ಪಡೆದಿದ್ದಾರೆ.

**೩. ಸೋಮಲಿಂಗ ಹೆಚ್. ಗಾಳಿ :** ೧-೬-೧೯೬೭ರಂದು ಬಿಜಾಪುರ ಜಿಲ್ಲೆಯಲ್ಲಿ ಜನಿಸಿದ್ದು, ೧೯೮೮-೮೯ರ ಕರ್ನಾಟಕ ಸೈಕ್ಲಿಂಗ್ ಅಸೋಶಿಯೇಷನ್‌ದ ರಾಜ್ಯಮಟ್ಟದ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೫೦ ಕಿ.ಮೀ. ರಸ್ತೆ ರೇಸ್‌ನಲ್ಲಿ ಪ್ರಥಮ, ಸೈಕ್ಲಿಂಗ್ ಫೆಡರೇಷನ್ ಆಫ್ ಇಂಡಿಯಾದವರ ಅಂತರ ರಾಜ್ಯ ಸೈಕ್ಲಿಂಗ್ ಚಾಂಪಿಯನ್ ಶಿಪ್ (ಕೊಯಮತ್ತೂರ)ನ ೧೦೦ ಕಿ.ಮೀ., ಟೀಂ ಟೈಂ ಟ್ರಯಲ್‌ನಲ್ಲಿ ಪ್ರಥಮ, ೧೯೯೧ ಹೈದರಾಬಾದ್‌ದಲ್ಲಿ ಹಿರಿಯರ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೧೦೦ ಕಿ.ಮೀ. ಟೀಂ ಟೈಂ ಟ್ರಯಲ್‌ನಲ್ಲಿ ದ್ವಿತೀಯ, ೧೯೯೨ ಮತ್ತು ೯೩ರಲ್ಲಿ ಚಿಕ್ಕಮಂಗಳೂರಿನಲ್ಲಿ ನಡೆದ ರಾಜ್ಯ ಮಟ್ಟದ ಸೈಕಲ್ ಸ್ಪರ್ಧೆಯ ೨೭ ಕಿ.ಮೀ.ಯ ಮಾಸ್ಪಾರ್ಟ್‌ನಲ್ಲಿ ಎರಡು ಬಾರಿಯೂ ಪ್ರಥಮ, ಕೊಯಮತ್ತೂರಿನ ದಕ್ಷಿಣ ವಲಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೫೦ ಕಿ.ಮೀ.ಯಲ್ಲಿ ಪ್ರಥಮ, ೯೪ರಲ್ಲಿ ಮಹಾರಾಷ್ಟ್ರದ ಪೂನಾದಲ್ಲಿ ನಡೆದ ೩ನೇ ರಾಷ್ಟ್ರೀಯ ಕ್ರೀಡಾಕೂಟದ ೧೦೦ ಕಿ.ಮೀ. ಟೀಂ ಟೈಂ ಟ್ರಯಲ್‌ನಲ್ಲಿ ದ್ವಿತೀಯ ಬೆಂಗಳೂರಿನಲ್ಲಿ ಮೇ ಮತ್ತು ಜೂನ್-೯೭ರಲ್ಲಿ ನಡೆದ ೪ನೇ ರಾಷ್ಟ್ರೀಯ ಕ್ರೀಡಾಕೂಟದ ೭೦ ಕಿ.ಮೀ. ರಸ್ತೆ ಟೀಂ ಟೈಂ ಟ್ರಯಲ್ ಹಾಗೂ ೧೦೦ ಕಿ.ಮೀ. ರಸ್ತೆ ಸ್ಪರ್ಧೆಯಲ್ಲೂ ಪ್ರಥಮ ಸ್ಥಾನ ಗಳಿಸಿದ್ದು ಪ್ರಸ್ತುತ ಪೋಲೀಸ್ ಇಲಾಖೆಯ ಸೇವೆಯಲ್ಲಿದ್ದಾರೆ.

**೪. ರಾಜು ಬಿರಾದಾರ :** ೨೫ನೇ ಮಾರ್ಚ್ ೭೫ರಂದು ಬಿಜಾಪುರ ಜಿಲ್ಲೆಯಲ್ಲಿ ಜನಿಸಿರುವ ರಾಜು ಈಗ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿ. ೧೯೯೦-೯೧ ಚಂಡಿಗಡದಲ್ಲಿ ನಡೆದ ಕಿರಿಯರ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೫೦೦ ಮತ್ತು ೧೦೦ ಮೀ ಮಾಸ್ಪಾರ್ಟ್‌ನಲ್ಲಿ ಪ್ರಥಮ, ೯೧ರಲ್ಲಿ ಮದ್ರಾಸ್‌ನ ಇಂಡಿಯನ್ ಟ್ರಯತ್ಲಾನ್ ಫೆಡರೇಷನ್ ಸ್ಪರ್ಧೆಯಲ್ಲಿ ಪ್ರಥಮ, ೧೯೯೩ ದಕ್ಷಿಣ ವಲಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೮೦ ಕಿ.ಮೀ. ರಸ್ತೆ ರೇಸ್‌ನಲ್ಲಿ ಪ್ರಥಮ, ೫೦ ಕಿ.ಮೀ.ಯಲ್ಲೂ ಪ್ರಥಮ, ೪೦೦೦ ಮೀ., ೧೦೦೦ ಮೀ ಹಾಗೂ ೧೦ ಕಿ.ಮೀ. ವೈಯಕ್ತಿಕ ಪರಸೂಟ್‌ನಲ್ಲಿ ಪ್ರಥಮ, ಮಹಾರಾಷ್ಟ್ರದ ಪೂನಾದಲ್ಲಿ ೧೯೯೪ರಲ್ಲಿ ನಡೆದ ಮೂರನೇ ರಾಷ್ಟ್ರೀಯ ಕ್ರೀಡಾ ಕೂಟದ ೧೦೦ ಕಿ.ಮೀ. ಟೀಂ ಟೈಂ ಟ್ರಯಲ್‌ನಲ್ಲಿ ದ್ವಿತೀಯ ಸ್ಥಾನ ಪಡೆದಿರುವರಲ್ಲದೇ ವಿಶ್ವವಿದ್ಯಾಲಯಗಳ ಮಟ್ಟದ ಸ್ಪರ್ಧೆಗಳಲ್ಲಿ ಪ್ರಥಮರಾಗಿದ್ದು ೧೯೯೩ರಿಂದ ೯೭ರ ವರೆಗೆ ಸೈಕ್ಲಿಂಗ್ ಸ್ಪರ್ಧೆಯಲ್ಲಿ ವೈಯಕ್ತಿಕ ಚಾಂಪಿಯನ್ ಆಗಿರು


ಲಕ್ಷ್ಮಣ ಮಾಳಿ


ಅಲಕಾ ಎನ್. ಫಡತರೆ


ಗಂಗು ಜಿ. ಬಿರಾದಾರ


ಶೀಲಾ ಶಿವನಗೌಡ ಪಾಟೀಲ

ತ್ತಾರೆ.

**೫. ಲಕ್ಷ್ಮಣ ಮಾಳಿ :** ಬಿಜಾಪುರ ಜಿಲ್ಲೆಯ ಕುಂಬಾರ ಹಳ್ಳಿಯವರಾದ ಲಕ್ಷ್ಮಣ ಸಧ್ಯ ಬಿಜಾಪುರ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಸೇವೆಯಲ್ಲಿದ್ದಾರೆ. ಮದ್ರಾಸ್‌ನಲ್ಲಿ ೬-೮-೮೬ರಲ್ಲಿ ನಡೆದ ಕಿರಿಯರ ರಾಷ್ಟ್ರೀಯ ಸೈಕ್ಲಿಂಗ್ ಸ್ಪರ್ಧೆಯ ೭೦ ಕಿ.ಮೀ. ಟೀಂ ಟೈಂ ಟ್ರಯಲ್ ನಲ್ಲಿ ದ್ವಿತೀಯ, ೮೦ ಕಿ.ಮೀ. ವೈಯಕ್ತಿಕ ಪರಸೂಟ್‌ನಲ್ಲಿ ಪ್ರಥಮ, ಚಿಕ್ಕಮಂಗಳೂರು-ಬೆಂಗಳೂರಿನ ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ದ್ವಿತೀಯ, ೨೫-೨-೮೮ರಲ್ಲಿ ಸಿಕಂದರಾಬಾದ್ ನಲ್ಲಿ ನಡೆದ ೪೩ನೇ ರಾಷ್ಟ್ರೀಯ ಮಟ್ಟದ ಸ್ಪರ್ಧೆಯ ೧೦೦ ಕಿ.ಮೀ. ಟೀಂ ಟೈಂ ಟ್ರಯಲ್‌ನಲ್ಲಿ ದ್ವಿತೀಯ, ೧೯೯೧-ಬೆಂಗಳೂರಿನ ರಾಜ್ಯಮಟ್ಟದ ಸೈಕ್ಲಿಂಗ್ ಸ್ಪರ್ಧೆಯಲ್ಲಿ ಪ್ರಥಮ ಹಾಗೂ ಮದ್ರಾಸ್ ಮತ್ತು ಮುಂಬೈಯ ರಾಷ್ಟ್ರಮಟ್ಟದ ಸೈಕ್ಲಿಂಗ್‌ನಲ್ಲಿ ದ್ವಿತೀಯ ಮತ್ತು ತೃತೀಯ, ೨೫-೧-೯೪ ರಾಜಸ್ಥಾನದ ಬಿಕಾನೇರ್‌ನಲ್ಲಿ ಜರುಗಿದ ರಾಷ್ಟ್ರಮಟ್ಟದ ಸೈಕ್ಲಿಂಗ್ ಸ್ಪರ್ಧೆಯಲ್ಲಿ ದ್ವಿತೀಯ, ೧೯೯೪ ಮತ್ತು ೯೬ರ ಮದ್ರಾಸ್-ಮುಂಬೈಯ ರಾಷ್ಟ್ರೀಯ ಮಟ್ಟದ ಸೈಕ್ಲಿಂಗ್ ಸ್ಪರ್ಧೆಯ ೧೬೦ ಕಿ.ಮೀ.ಯಲ್ಲಿ ಪ್ರಥಮ, ೯೭ರಲ್ಲಿ ನಡೆದ ೪ನೇ ರಾಷ್ಟ್ರೀಯ ಕ್ರೀಡಾಕೂಟದ ೭೦ ಕಿ.ಮೀ.ಯಲ್ಲಿ ಪ್ರಥಮ ಹಾಗೂ ೧೨೦ ಕಿ.ಮೀ.ಯಲ್ಲಿ ತೃತೀಯ ಸ್ಥಾನ ಪಡೆದಿದ್ದು ೨೬-೬-೯೦ರಂದು ಪೊಲೀಸ್ ಇಲಾಖೆ ಸೇರಿದ್ದು ಇಲಾಖಾ ಸ್ಪರ್ಧೆಗಳಲ್ಲೂ ಸಹ ಬಹುಮಾನ ಗಳಿಸಿದ್ದಾರೆ.

**೬. ಅಲಕಾ ಎನ್. ಘಡತರೆ:** ೨೨ನೇ ಜುಲೈ ೭೧ರಂದು ಬಿಜಾಪುರದಲ್ಲಿ ಜನಿಸಿರುವ ತಮ್ಮ ಪ್ರತಿಭೆ-ಪ್ರಯತ್ನದಿಂದ ಪದಕಗಳ ರಾಣಿಯಾಗಿದ್ದು ಈಗ ಪಂಜಾಬ್‌ನ ಪಾಟಿಯಾಲಾದಲ್ಲಿ ಎನ್‌ಐಎಸ್ ಡಿಪ್ಲೋಮಾ (ಸೈಕ್ಲಿಂಗ್) ತರಬೇತಿಯಲ್ಲಿದ್ದಾರೆ. ೧೯೮೭ರ ೬ನೇ ಸಬ್-ಜ್ಯೂನಿಯರ್ ರಾಷ್ಟ್ರೀಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೨೦೦೦ ಮೀ ಮತ್ತು ೨೫ ಕಿ.ಮೀ. ಮಾಸ್ಟಾರ್ಟ್‌ನಲ್ಲಿ ಕಂಚಿನ ಪದಕ, ೧೯೮೯ರ ೯ನೇ ಅಂತರರಾಜ್ಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೩೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ಬೆಳ್ಳಿ, ೧೯೯೦ರ ದಕ್ಷಿಣ ವಲಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೩೬ ಕಿ.ಮೀ. ಮತ್ತು ೧೬ ಕಿ.ಮೀ. ಮಾಸ್ಟಾರ್ಟ್‌ನಲ್ಲಿ ಸ್ವರ್ಣ, ೧೦೦೦ ಮೀ. ಮಾಸ್ಟಾರ್ಟ್, ೨೦೦೦ ಮೀ ವೈಯಕ್ತಿಕ ಪರಸೂಟ್, ೩೦೦೦ ಮೀ. ಟೀಂ ಪರ್‌ಸೂಟ್, ೩೦೦೦ ಮೀ. ವೈಯಕ್ತಿಕ ಪರಸೂಟ್‌ನಲ್ಲಿ ರಜತ, ೮ನೇ ರಾಷ್ಟ್ರೀಯ ಸಬ್-ಜ್ಯೂನಿಯರ್ ರಾಷ್ಟ್ರೀಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೪೪ ಕಿ.ಮೀ. ಮಾಸ್ಟಾರ್ಟ್, ೨೦೦೦ ಕಿ.ಮೀ. ಟೀಂ ಪರ್‌ಸೂಟ್ ಮತ್ತು ೧೦೦೦ ಮೀ. ಮಾಸ್ಟಾರ್ಟ್‌ಗಳಲ್ಲಿ ಸ್ವರ್ಣ, ೧೯೯೨ ರಾಷ್ಟ್ರೀಯ ಟ್ರಯತ್ಲಾನ್ ಚಾಂಪಿಯನ್‌ಶಿಪ್‌ನ ಟೀಂ ಟ್ರಯತ್ಲಾನ್‌ನಲ್ಲಿ ರಜತ, ೧೯೯೩ರ ದಕ್ಷಿಣ ವಲಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ಟೀಂನ ೩೦ ಕಿ.ಮೀ. ಮಾಸ್ಟಾರ್ಟ್‌ನಲ್ಲಿ ಸ್ವರ್ಣ, ೧೬೦೦ ಮೀ. ಮಾಸ್ಟಾರ್ಟ್, ೧೦೦೦ ಮೀ. ಟೀಂ ಟೈಂ ಟ್ರಯಲ್‌ನಲ್ಲಿ ರಜತ, ೧೯೯೪ರ ಪೂನಾ-ಬಾಂಬೆಯ ೩ನೇ ರಾಷ್ಟ್ರೀಯ ಕ್ರೀಡಾಕೂಟದ ಟೀಂ ಟ್ರಯತ್ಲಾನ್‌ನಲ್ಲಿ ಸ್ವರ್ಣ, ೪ನೇ ಹಿರಿಯರ ಟ್ರಯತ್ಲಾನ್ ಚಾಂಪಿಯನ್‌ಶಿಪ್ ಮತ್ತು ೧ನೇ ಏಶಿಯನ್ ಟ್ರಯತ್ಲಾನ್ ಕಪ್ ಸಿರೀಸ್‌ನ ಟೀಂ ಟ್ರಯತ್ಲಾನ್‌ನಲ್ಲಿ ರಜತ, ರಾಜಸ್ಥಾನದ ಬಿಕಾನೇರದಲ್ಲಿ ನಡೆದ ೧೮ನೇ ಹಿರಿಯರ ರಾಷ್ಟ್ರೀಯ ಸೈಕ್ಲಿಂಗ್ ಚಾಂಪಿಯನ್ ಶಿಪ್‌ನಲ್ಲಿ ಬೆಳ್ಳಿ ಮತ್ತು ಕಂಚು, ೧೯೯೭ ಬೆಂಗಳೂರಿನಲ್ಲಿ ನಡೆದ ೪ನೇ ರಾಷ್ಟ್ರೀಯ ಕ್ರೀಡೆಗಳ ೩೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ಸ್ವರ್ಣ ಪಡೆದಿರುವರಲ್ಲದೇ ೧೯೯೪-೯೫ರ ಅಂತರ ವಿಶ್ವವಿದ್ಯಾಲಯ ಸೈಕ್ಲಿಂಗ್ ಸ್ಪರ್ಧೆಗಳಲ್ಲಿ ಸ್ವರ್ಣ, ರಜತ ಪದಕಗಳನ್ನು ಪಡೆದಿದ್ದು, ಸೈಕ್ಲಿಂಗ್ ರಂಗದ ಅಪ್ರತಿಮ ಸಾಧನೆಗಾಗಿ ಕ್ರೀಡಾ ಪ್ರಾಧಿಕಾರದಿಂದ ಸನ್ಮಾನಿತರಾಗಿದ್ದಾರಲ್ಲದೇ ದಸರಾ ಪ್ರಶಸ್ತಿಯನ್ನೂ ತಮ್ಮದಾಗಿಸಿಕೊಂಡಿದ್ದಾರೆ.

**೭. ಗಂಗು ಜಿ. ಬಿರಾದಾರ :** ಬಿಜಾಪುರ ಜಿಲ್ಲೆಯಲ್ಲಿ ೨೫ನೇ ಜೂನ್, ೧೯೮೦ರಂದು ಜನಿಸಿರುವ ಗಂಗು ಶ್ರೀ ಜಗಜ್ಯೋತಿ ಬಸವೇಶ್ವರ ಪ್ರೌಢಶಾಲೆಯ ಹತ್ತನೆ ವರ್ಗದ ವಿದ್ಯಾರ್ಥಿನಿ. ೧೯೯೪-ಬೆಂಗಳೂರಿನಲ್ಲಿ ಜರುಗಿದ ಭಾರತ ಟ್ರಯತ್ಲಾನ್ ಫೆಡರೇಷನ್‌ದ ೬ ಕಿ.ಮೀ. ರಸ್ತೆ ರೇಸ್‌ನಲ್ಲಿ ಪ್ರಥಮ, ಡಿಸೆಂಬರ್-೯೪ ಮಂಡ್ಯದಲ್ಲಿ ಅಮೆಚೂರ್ ಸೈಕ್ಲಿಂಗ್ ಅಸೋಶಿಯೇಷನ್ ಕ್ರೀಡಾ ಕ್ಲಬ್‌ನವರು ನಡೆಸಿದ ರಾಜ್ಯ ಮಟ್ಟದ ೧೦೦೦ ಮೀ., ೨೦೦೦ ಮೀ. ವೈಯಕ್ತಿಕ ಪರ್‌ಸೂಟ್ ನಲ್ಲಿ ಹಾಗೂ ೧೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ಪ್ರಥಮ, ೧೯೯೬ ಚಿಕ್ಕಮಂಗಳೂರಿನಲ್ಲಿ ನಡೆದ ೩೬ನೇ ರಾಜ್ಯ ಮಟ್ಟದ ಸೈಕ್ಲಿಂಗ್ ಸ್ಪರ್ಧೆಯ ರಸ್ತೆ ರೇಸಲ್ಲಿ ಪ್ರಥಮ ೧೯೯೭ ಕಲ್ಕತ್ತದ ಬರಕ್‌ಪೂರ್‌ನ ೨ನೇ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೨೦ ಕಿ.ಮೀ. ಟೀಂ ಟ್ರಯತ್ಲಾನ್ ಹಾಗೂ ೧೦ ಕಿ.ಮೀ. ರಸ್ತೆ ರೇಸ್‌ನಲ್ಲಿ ದ್ವಿತೀಯ ಹಾಗೂ ೫ ಕಿ.ಮೀ. ವೈಯಕ್ತಿಕ ಪರ್‌ಸೂಟ್‌ನಲ್ಲಿ ತೃತೀಯ, ೧೯೯೭-ಬೆಂಗಳೂರು ಮೈಸೂರಿನ [illegible]ನೇ ರಾಷ್ಟ್ರೀಯ ಕ್ರೀಡಾಕೂಟದ ಸೈಕ್ಲಿಂಗ್ ಸ್ಪರ್ಧೆಯ ೩೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ಚಿನ್ನ, ೫ ಕಿ.ಮೀ. ರಸ್ತೆ ರೇಸಲ್ಲಿ ವೈಯಕ್ತಿಕ ಪರ್‌ಸೂಟಲ್ಲಿ ಕಂಚು. ಸಂಬಂಧಿತ ಶಾಲೆ, ಸಾರ್ವಜನಿಕರು, ಇಲಾಖೆಯವರು ಸನ್ಮಾನಿಸಿದ್ದು ರಾಜ್ಯೋತ್ಸವ ಹಾಗೂ ೫೦ನೇ ಸುವರ್ಣ ಮಹೋತ್ಸವದ ಅಂಗವಾಗಿ ಸನ್ಮಾನಿತರಾಗಿದ್ದಾರೆ. ಈ ಬಾರಿಯ (೧೯೯೭) ದಸರಾ ಕ್ರೀಡಾಕೂಟದ ಸೈಕ್ಲಿಂಗ್‌ನ ೪೦ ಕಿ.ಮೀ.ಯಲ್ಲಿ ಹಾಗೂ ಚೆನ್ನೈನ ರಾಷ್ಟ್ರೀಯ ಸೈಕ್ಲಿಂಗ್ ಸ್ಪರ್ಧೆಯ ೨೦ ಕಿ.ಮೀ.ಯಲ್ಲೂ ರಜತ ಪದಕ ಪಡೆದಿದ್ದಾರೆ.

**೮. ಶೀಲಾ ಶಿವನಗೌಡ ಪಾಟೀಲ :** ಬಿಜಾಪುರ ಜಿಲ್ಲೆಯಲ್ಲಿ ದಿ. ೧-೭-೧೯೭೮ರಂದು ಜನಿಸಿರುವ ಶೀಲಾ ಬಿಜಾಪುರದ ಬಂಜಾರಾ ಕಿರಿಯ ಮಹಾವಿದ್ಯಾಲಯದ ದ್ವಿತೀಯ ಪಿ.ಯು.ಸಿ.ಯ ವಿದ್ಯಾರ್ಥಿನಿ.

೧೩-೯-೯೩ರಂದು ಬೆಂಗಳೂರಲ್ಲಿ ನಡೆದ ರಾಷ್ಟ್ರೀಯ ಮಟ್ಟದ ಸೈಕ್ಲಿಂಗ್ ಸ್ಪರ್ಧೆಯ ೨೫ ಕಿ.ಮೀ. ಪ್ರಥಮ, ೧೨ನೇ ಕಿರಿಯರ ಸೈಕ್ಲಿಂಗ್ ಚಾಂಪಿಯನ್‌ಶಿಪ್ (ಪಂಜಾಬ್‌ದ ಲೂಧಿ


ಪ್ರೇಮಲತಾ ವೀರಪ್ಪ ಸುರೇಬಾನ


ನಿಜಪ್ಪ ಭೀಮಪ್ಪ ಎಂಟಿತ್ತು


ಶ್ರೀಧರ ಗೋರೆ

ಯಾನಾದಲ್ಲಿ)ನ ೨೫ ಕಿ.ಮೀ. ರಸ್ತೆ ರೇಸ್‌ನಲ್ಲಿ ದ್ವಿತೀಯ, ೧೯೯೪ ಮಂಡ್ಯದಲ್ಲಿ ನಡೆದ ಕರ್ನಾಟಕ ಅಮೆಚೂರ್ ಸೈಕ್ಲಿಂಗ್ ಅಸೋಶಿಯೇಷನ್‌ದ ಸ್ಪೋರ್ಟ್ಸ್ ಕ್ಲಬ್‌ನವರು ನಡೆಸಿದ ರಾಜ್ಯಮಟ್ಟದ ೩೦೦೦ ಮೀ. ಟೀಂ ಪರ್‌ಸೂಟ್ ಹಾಗೂ ೨೦೦೦ ಮೀ. ವೈಯಕ್ತಿಕ ಸ್ಪರ್ಧೆಯಲ್ಲಿ ಪ್ರಥಮ, ಮಾರ್ಚ್-೯೪ ರಾಜಸ್ಥಾನದ ಬಿಕಾನೇರಲ್ಲಿ ನಡೆದ ೪೮ನೇ ರಾಷ್ಟ್ರೀಯ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೩೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ತೃತೀಯ, ನವೆಂಬರ್-೯೪ ಬೆಂಗಳೂರಲ್ಲಿ ಭಾರತೀಯ ಟ್ರಯತ್ಲಾನ್ ಫೆಡರೇಷನ್ ೨೫ ಕಿ.ಮೀ. ರಸ್ತೆ ರೇಸಲ್ಲಿ ಪ್ರಥಮ, ಕಲ್ಕತ್ತಾದ ೨ನೇ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೨೦ ಕಿ.ಮೀ. ರಸ್ತೆ ರೇಸಲ್ಲಿ ದ್ವಿತೀಯ ಹಾಗೂ ೧೦ ಕಿ.ಮೀ. ವೈಯಕ್ತಿಕ ರೇಸಲ್ಲಿ ಪ್ರಥಮ, ಪೂನಾದಲ್ಲಿ ೫೦ನೇ ಹಿರಿಯರ ರಾಷ್ಟ್ರೀಯ ಟ್ರ್ಯಾಕ್ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೩೦೦೦ ಮೀ. ಟೀಂ ಪರ್‌ಸೂಟ್‌ದಲ್ಲಿ ದ್ವಿತೀಯ, ನವೆಂಬರ್-೯೪ ಬೆಂಗಳೂರಲ್ಲಿ ನಡೆದ ಭಾರತೀಯ ಟ್ರಯತ್ಲಾನ್ ಫೆಡರೇಷನ್‌ಶಿಪ್‌ನ ೨೫ ಕಿ.ಮೀ. ರಸ್ತೆ ರೇಸಲ್ಲಿ ಪ್ರಥಮ, ಜನವರಿ-೯೭ ಕಲ್ಕತ್ತಾದ ಬರಕಪೂರಲ್ಲಿ ನಡೆದ ೨ನೇ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೧೦ ಕಿ.ಮೀ. ವೈಯಕ್ತಿಕ ಪರ್‌ಸೂಟ್-ಪ್ರಥಮ, ೩೦೦೦ ಮೀ. ಟೀಂ ಪರ್‌ಸೂಟ್‌ದಲ್ಲಿ ದ್ವಿತೀಯ ಹಾಗೂ ೧೦ ಕಿ.ಮೀ. ವೈಯಕ್ತಿಕ ಟ್ರಯತ್ಲಾನ್‌ನಲ್ಲಿ ಪ್ರಥಮ, ಜೂನ್-೯೭ ಬೆಂಗಳೂರು-ಮೈಸೂರಲ್ಲಿ ನಡೆದ ೪ನೇ ರಾಷ್ಟ್ರೀಯ ಕ್ರೀಡಾಕೂಟದ ಸೈಕ್ಲಿಂಗ್ ಸ್ಪರ್ಧೆಯ ೩೦೦೦ ಮೀ. ಟೀಂ ಪರ್‌ಸೂಟ್‌ನಲ್ಲಿ ಚಿನ್ನ, ೯೬-೯೭ ಕರ್ನಾಟಕ ಅಮೆಚೂರ್ ಸೈಕ್ಲಿಂಗ್ ಅಸೋಶಿಯೇಷನ್‌ದವರು ಬಿಜಾಪುರದಲ್ಲಿ ನಡೆಸಿದ ೪೦೦೦ ಮೀ. ವೈಯಕ್ತಿಕ ಪರ್‌ಸೂಟ್‌ಲ್ಲಿ ಪ್ರಥಮ ಹಾಗೂ ೨೫ ಕಿ.ಮೀ. ಮಾಸ್ಸ್ಟಾರ್ಟ್‌ನಲ್ಲೂ ಪ್ರಥಮಳಾದ

**ಬಂಧ**

ವೀರಪ್ಪನ್‌ಗೂ
ಕಾಡಿನ ಆನೆಗಳಿಗೂ
ಬಿಡಿಸಲಾರದ 'ದಂತ'
ದ ಬಂಧ

– ಸಾವಿತ್ರಿ ಹೆಬ್ಬಾರ್



ಶೀಲಾ ಸಂಬಂಧಿತ ಶಿಕ್ಷಣ ಸಂಸ್ಥೆ, ಸಾರ್ವಜನಿಕರು ಹಾಗೂ ಇಲಾಖೆಗಳಿಂದ, ರಾಜ್ಯೋತ್ಸವ ಹಾಗೂ ೫೦ನೇ ಸುವರ್ಣ ಸ್ವಾತಂತ್ರ್ಯೋತ್ಸವದ ಅಂಗವಾಗಿ ಸನ್ಮಾನಿತರಾಗಿರುತ್ತಾರೆ. ಅಲ್ಲದೇ ಈ ಬಾರಿಯ ದಸರಾ ಕ್ರೀಡಾಕೂಟ (ಅಕ್ಟೋಬರ್-೯೭)ದ ೪೦ ಕಿ.ಮೀ.ಯಲ್ಲಿ ಕಂಚು ಹಾಗೂ ಅಕ್ಟೋಬರ್-೯೭ ಚೆನ್ನೈದಲ್ಲಿ ಮುಕ್ತಾಯಗೊಂಡ ರಾಷ್ಟ್ರಮಟ್ಟದ ಸೈಕ್ಲಿಂಗ್ ಸ್ಪರ್ಧೆಯ ೪೦ ಕಿ.ಮೀ.ಯಲ್ಲಿಯ ಕಂಚಿನ ಪದಕವನ್ನು ತನ್ನದಾಗಿಸಿಕೊಂಡಿದ್ದಾಳೆ.

**೯. ಪ್ರೇಮಲತಾ ವೀರಪ್ಪ ಸುರೇಬಾನ :** ಬಿಜಾಪುರದಲ್ಲಿ ದಿ. ೨೮-೧೧-೧೯೮೧ರಂದು ಜನಿಸಿರುವ ಪ್ರೇಮಲತಾ ವಿ.ಬಿ. ದರಬಾರ ಪ್ರೌಢಶಾಲೆಯ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿನಿ. ೧೯೯೬ ಸಿಕಂದರಾಬಾದ್‌ನ ೨೭ನೇ ಬ್ಯಾಂಕರ್ ಹಾಗೂ ೧೩ನೇ ಸಬ್-ಜೂನಿಯರ್ ರಾಷ್ಟ್ರೀಯ ಟ್ರ್ಯಾಕ್ ಚಾಂಪಿಯನ್‌ಶಿಪ್‌ನ ೧೦೦೦ ಮೀ. ಮಾಸ್ಸ್ಟಾರ್ಟ್‌ದಲ್ಲಿ ಪ್ರಥಮ ಹಾಗೂ ೫ ಕಿ.ಮೀ. ಪಾಯಿಂಟ್ ರೇಸದಲ್ಲಿ ದ್ವಿತೀಯ, ೧೯೯೬ ಜನರಲ್ ತಿಮ್ಮಯ್ಯ ಸಾಹಸ ಅಕಾಡೆಮಿ, ಬೆಂಗಳೂರು ಇವರು ಮೈಸೂರಲ್ಲಿ ಸಂಯೋಜಿಸಿದ ರಾಜ್ಯಮಟ್ಟದ ದಸರಾ ಕ್ರೀಡಾಕೂಟದ ರಸ್ತೆ ರೇಸಲ್ಲಿ ಪ್ರಥಮ, ಕರ್ನಾಟಕ ಅಮೆಚೂರ್ ಸೈಕ್ಲಿಂಗ್ ಅಸೋಶಿಯೇಷನ್ ಮತ್ತು ಬಿಜಾಪುರ ಜಿಲ್ಲಾ ಸೈಕ್ಲಿಂಗ್ ಅಸೋಶಿಯೇಷನ್‌ದ ಸಹಯೋಗದಲ್ಲಿ ಬಿಜಾಪುರದಲ್ಲಿ ನಡೆದ ೨೫ ಕಿ.ಮೀ. ರಸ್ತೆ ರೇಸ್, ೨೦೦೦ ಮೀ. ವೈಯಕ್ತಿಕ ಪರಸೂಟ್, ೧೬೦೦ ಮೀ. ಮಾಸ್ಸ್ಟಾರ್ಟ್ ಹಾಗೂ ೫೦೦ ಮೀ. ತಂಡ ಡ್ರಿಲ್ಸ್‌ಗಳಲ್ಲಿ ಪ್ರಥಮ ಸ್ಥಾನ ಗಳಿಸಿದ್ದಲ್ಲದೇ ಆ ಬಾರಿಯ ವೈಯಕ್ತಿಕ ಚಾಂಪಿಯನ್‌ಶಿಪ್ ಗಳಿಸಿದ್ದಾಳೆ. ಈ ಬಾರಿ ಮೈಸೂರಲ್ಲಿ ಜರುಗಿದ ದಸರಾ ಕ್ರೀಡೆಗಳ ಸೈಕ್ಲಿಂಗ್ ವಿಭಾಗದ ೪೦ ಕಿ.ಮೀ. (ಹುಣಸೂರಿನಿಂದ ಮೈಸೂರವರೆಗೆ) ರಸ್ತೆ ರೇಸಲ್ಲಿ ಸ್ವರ್ಣ- (ಪೂರೈಸಿದ ಅವಧಿ ೧ ತಾ ೧೦ ನಿಮಿಷ) ಮತ್ತು ಇದೀಗ ಚೆನ್ನೈದಲ್ಲಿ ಮುಕ್ತಾಯಗೊಂಡ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೧೦ ಕಿ.ಮೀ. ಸ್ಪರ್ಧೆಯಲ್ಲಿ ಸ್ವರ್ಣ ಪದಕ ಪಡೆದಿರುವ ಪ್ರೇಮಲತಾ ಜಿಲ್ಲಾ ಆಡಳಿತ, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಹಾಗೂ ಪಟ್ಟದಕಲ್ಲ ನವರಸ ಉತ್ಸವದ ಅಂಗವಾಗಿ ನಡೆಸಿದ ರಾಜ್ಯಮಟ್ಟದ ೫೧ ಕಿ.ಮೀ. ರಸ್ತೆ ಸ್ಪರ್ಧೆಯಲ್ಲಿ ಪ್ರಥಮ, ಚಿಕ್ಕಮಂಗಳೂರಿನ (೧೯೯೭) ೩೭ನೇ ರಾಜ್ಯಮಟ್ಟದ ರಸ್ತೆ ರೇಸ್‌ಲ್ಲಿ ಪ್ರಥಮ, ಕಲ್ಕತ್ತದ ಬರಕಪುರದಲ್ಲಿ ಸೈಕ್ಲಿಂಗ್ ಫೆಡರೇಷನ್ ಆಫ್ ಇಂಡಿಯಾರವರ ೨ನೇ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ರಸ್ತೆ ರೇಸ್‌ದಲ್ಲಿ ಪ್ರಥಮ ಹಾಗೂ ೫ ಕಿ.ಮೀ. ವೈಯಕ್ತಿಕ ಟೀಂ ಟ್ರಯಲ್ಸ್‌ದಲ್ಲಿ ದ್ವಿತೀಯ, ಬೆಂಗಳೂರು-ಮೈಸೂರು (೧೯೯೭)ರಲ್ಲಿ ಜರುಗಿದ ೪ನೇ ರಾಷ್ಟ್ರೀಯ ಕ್ರೀಡೆಯ ಸೈಕ್ಲಿಂಗ್ ಸ್ಪರ್ಧೆಯ ೩೦೦೦ ಮೀ. ತಂಡ ಪರ್‌ಸೂಟ್‌ದಲ್ಲಿ ಸ್ವರ್ಣ ಹಾಗೂ ೧೦೦೦ ಮೀ. ಟೀಂ ಟ್ರಯಲ್ಸ್‌ದಲ್ಲಿ ಕಂಚು ಪಡೆದಿದ್ದು ಸಂಬಂಧಿತ ಶಾಲೆ, ಇಲಾಖೆ, ಸಾರ್ವಜನಿಕರಿಂದ, ರಾಜ್ಯೋತ್ಸವ ಹಾಗೂ ೫೦ನೇ ಸ್ವಾತಂತ್ರ್ಯೋತ್ಸವದ ಸುವರ್ಣ

ಮಹೋತ್ಸವದ ಅಂಗವಾಗಿ ಸನ್ಮಾನಿತಳಾಗಿರುತ್ತಾಳೆ.

**೧೦. ನಿಜಪ್ಪ ಭೀಮಪ್ಪ ಎಂಟೆತ್ತು :** ೨೨-೭-೧೯೮೦ರಲ್ಲಿ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕಿನ ಕುಂಬಾರಹಳ್ಳಿಯಲ್ಲಿ ಜನಿಸಿರುವ ನಿಜಪ್ಪ ಶ್ರೀ ಸಿದ್ದೇಶ್ವರ ಪದವಿ ಪೂರ್ವ ವಿದ್ಯಾಲಯದ ದ್ವಿತೀಯ ವಾಣಿಜ್ಯ ವಿದ್ಯಾರ್ಥಿ.

ಮೇ, ೧೯೯೬ರ ಲೂಧಿಯಾನಾದ ಕಿರಿಯರ ಸೈಕ್ಲಿಂಗ್ ಸ್ಪರ್ಧೆಯಲ್ಲಿ ದ್ವಿತೀಯ, ಸಿಕಂದರಾಬಾದ್ (ಡಿಸೆಂಬರ್-೯೬)ದಲ್ಲಿ ೨೭ನೇ ಕಿರಿಯರ ಮತ್ತು ೧೩ನೇ ಸಬ್ ಜ್ಯೂನಿಯರ್ ರಾಷ್ಟ್ರೀಯ ಟ್ರ್ಯಾಕ್ ಚಾಂಪಿಯನ್‌ಶಿಪ್‌ನಲ್ಲಿ ಪ್ರಥಮ, ಕಲ್ಕತ್ತದ ಬರಕಪುರ (೧೯೯೭)ಲ್ಲಿ ಭಾರತೀಯ ಸೈಕ್ಲಿಂಗ್ ಫೆಡರೇಷನ್‌ದವರ ೨ನೇ ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್‌ನ ೧೦ ಕಿ.ಮೀ. ಟೀಂ ಟೈಂ ಟ್ರಯಲ್‌ನಲ್ಲಿ ಕಂಚು ಪಡೆದಿರುವ ನಿಜಪ್ಪ ೨೨ನೇ ನವೆಂಬರ್, ೯೭ರಿಂದ ಪಾಕಿಸ್ತಾನದಲ್ಲಿ ನಡೆಯಲಿರುವ ಅಂತರ ರಾಷ್ಟ್ರೀಯ ಸೈಕ್ಲಿಂಗ್ ಸ್ಪರ್ಧೆಗೆ ಆಯ್ಕೆಯಾಗಿರುವ ಕರ್ನಾಟಕದ ಏಕೈಕ ಪ್ರತಿಭೆಯಾಗಿದ್ದು ಈ ಬಾರಿಯ (ಅಕ್ಟೋಬರ್-೯೭) ದಸರಾ ಕ್ರೀಡೆಗಳ ಸೈಕ್ಲಿಂಗ್ ಸ್ಪರ್ಧೆಯ ೧೦೩ ಕಿ.ಮೀ. (ಕುಶಾಲ ನಗರದಿಂದ ಮೈಸೂರ ವರೆಗೆ)ಯನ್ನು ೨ ತಾಸು ೨೩ ನಿಮಿಷದಲ್ಲಿ ಕ್ರಮಿಸಿ ಸ್ವರ್ಣ ಪದಕವನ್ನು ಪಡೆದಿರುತ್ತಾರೆ. ಅಲ್ಲದೇ ಅಕ್ಟೋಬರ್-೯೭ ಚೆನ್ನೈನಲ್ಲಿ ನಡೆದ ರಾಷ್ಟ್ರೀಯ ಮಟ್ಟದ ಸೈಕ್ಲಿಂಗ್ ಸ್ಪರ್ಧೆಯ ೨೦ ಕಿ.ಮೀ.ಯನ್ನು ೩೦ ನಿಮಿಷ ೩೦.೪೯ ಸೆ.ಯಲ್ಲಿ ಕ್ರಮಿಸಿ ಸ್ವರ್ಣ ಪದಕವನ್ನು ಪಡೆದಿದ್ದಾರೆ.

ಭವಿಷ್ಯದಲ್ಲಿ ಇನ್ನೂ ಹೆಚ್ಚಿನ ಸಾಧನೆ ಮಾಡುವ ಭರವಸೆ ಮೂಡಿಸಿರುವ ಪ್ರತಿಭೆಗಳಾದ ರಾಮಪ್ಪ ಬಿ. ಎಂಟೆತ್ತು (ಅಕ್ಟೋಬರ್-೯೭ ಚೆನ್ನೈನ ರಾಷ್ಟ್ರೀಯ ಸೈಕ್ಲಿಂಗ್‌ನ ೧೦೦ ಕಿ.ಮೀ.ಯಲ್ಲಿ ಕಂಚು) ರಾಜು ವಾಯ್ ಎಂಟೆತ್ತು, ಸಂದೀಪ ಬ. ಅಥಣಿ, ಮಲ್ಲಪ್ಪ ಹ. ಹಿರೇಕುರುಬರ, ಲಕ್ಷ್ಮಣ ರಾ. ಜೈನಾಪೂರ (ಅಕ್ಟೋಬರ್-೯೭ರ ದಸರಾ ಕ್ರೀಡಾಕೂಟದ ಸೈಕ್ಲಿಂಗ್‌ನ ೧೦೩ ಕಿ.ಮಿ.ಯಲ್ಲಿ ಕಂಚು ಪಡೆದಿರುವ) ಸಂತೋಷ ಸೊ. ಅಸುಗಡೆ, ಆನಂದ ಕೃ. ಬಿರಾದಾರ, ಸಂತೋಷ ಕೃ. ಪಾಟೀಲ, ಸಿದ್ದು ಹ. ಅಂಬಿ, ಸಂಜೀವ ಬ. ಪದರಾ, ಡಿ.ಕೆ. ಅರವಿಂದ ಕುಲದೀಪ, ಮಂಜುನಾಥ ಗಂ. ನೇಸರಗಿ ಹಾಗೂ ಕುಮಾರಿ ಮಾಧುರಿ ಭಾನುದಾಸ, ಮೋದಕ ವಿಜಾಪುರ ಸೈಕ್ಲಿಂಗ್ ನಿಲಯದಲ್ಲಿ ವಾಸಿಸುತ್ತಿದ್ದು ತಮ್ಮ ಸತತ ಅಭ್ಯಾಸ, ಪರಿಶ್ರಮ ಕೆಲವು ರಾಜ್ಯ-ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಲ್ಲಿನ ಸಾಧನೆಗಳಿಂದ ಗಮನ ಸೆಳೆದಿದ್ದು ನಾಳಿನ ಸೈಕ್ಲಿಂಗ್ ಕ್ಷೇತ್ರದ ಉಜ್ವಲ ತಾರೆಗಳಾಗುವುದರಲ್ಲಿ ಸಂಶಯವಿಲ್ಲ.

ಬೇರೆ ಕ್ರೀಡೆಗಳಿಗೆ ಅದರಲ್ಲೂ ಕ್ರಿಕೆಟ್‌ಗೆ ಹೋಲಿಸಿದಲ್ಲಿ ಸೈಕ್ಲಿಂಗ್‌ಗೆ ದೊರೆಯುತ್ತಿರುವ ಪ್ರಾತಿನಿಧ್ಯ, ಸೌಲಭ್ಯ, ಪ್ರಚಾರ ಅತ್ಯಲ್ಪ ಎನ್ನಬಹುದು. ಈ ದಿಸೆಯಲ್ಲಿ ನಮ್ಮ ರಾಜ್ಯ ಸರಕಾರ ಕೂಡ ರಾಜ್ಯದ ಅಷ್ಟೇ ಏಕೆ ಭಾರತದ ಹೆಸರನ್ನು ಎಲ್ಲೆಡೆ ಬೀರುತ್ತಿರುವ ಸೈಕ್ಲಿಂಗ್ ತಾರೆಗಳತ್ತ ಗಮನಹರಿಸಿ ಇನ್ನೂ ಹೆಚ್ಚಿನ ಸೌಲಭ್ಯ, ಸೌಕರ್ಯ, ಸಹಾಯ ಹಸ್ತ ನೀಡುವತ್ತ ಆದ್ಯತೆ ನೀಡುವುದು ಅತ್ಯಗತ್ಯ.

ಇದೂ ಕೂಡ ಶ್ರೀಮಂತ ಕ್ರೀಡೆ. ಸ್ಪರ್ಧೆಗೆ ಅತೀ ಹಗುರ ಸೈಕಲ್ ಮುಖ್ಯ. ಸ್ಪರ್ಧೆಗಳಲ್ಲಿ ಭಾಗವಹಿಸುವ ಸೈಕಲ್‌ನ ಬೆಲೆ ಸುಮಾರು ರೂ. ೬೦ ಸಾವಿರ. ಅದರ ಬಿಡಿ ಭಾಗಗಳು ಬಿಜಾಪುರ ಅಷ್ಟೇ ಏಕೆ ಬೆಂಗಳೂರಲ್ಲಿ ದೊರಕುವುದೂ ದುರ್ಲಭ. ಏಕೆಂದರೆ ಸೈಕಲ್‌ನ ಫ್ರೇಮ್ ಮಾತ್ರ ಭಾರತದಲ್ಲಿ ತಯಾರಾಗುತ್ತಿದ್ದು ಗಾಲಿ, ಟ್ಯೂಬ್ಲರ್ (ಟೈರ್‌ನಲ್ಲಿಯೇ ಟ್ಯೂಬ್ ಇರುವ), ಚೈನ್, ಉಳಿದೆಲ್ಲವೂ ತಯಾರಾಗುವುದು ಸಿಂಗಾಪೂರ, ಚೈನಾ, ಜಪಾನ್, ರಷ್ಯಾ, ಅಮೇರಿಕಾದಂಥ ತಾಂತ್ರಿಕ ಕ್ಷೇತ್ರದಲ್ಲಿ ಅದ್ಭುತ ಪ್ರಗತಿ ಸಾಧಿಸಿರುವ ದೇಶಗಳಲ್ಲಿ ಮಾತ್ರ. ಅಂತರ ರಾಷ್ಟ್ರೀಯ ಮಟ್ಟದ ಸೈಕ್ಲಿಂಗ್ ಸ್ಪರ್ಧೆಯಲ್ಲಿ ಉಪಯೋಗಿಸುವ ಅತ್ಯಾಧುನಿಕ ಸೈಕಲ್ ಬೆಲೆ ಸುಮಾರು ರೂ. ಏಳು ಲಕ್ಷ ಎಂದರೆ ಅಚ್ಚರಿಯನ್ನಿಸಬಹುದಲ್ಲವೇ? ಆದರೂ ಸತ್ಯ. ಇಲ್ಲಿಯವರೆಗೆ ಬರೀ ಸಾಮಾನ್ಯ ಸೈಕಲ್‌ಗಳಿಂದಲೇ ಅದ್ವಿತೀಯ ಸಾಧನೆ ಮಾಡಿರುವ ನಮ್ಮ ಸೈಕಲ್ ತಾರೆಗಳಿಗೆ ಅತ್ಯಾಧುನಿಕ ಸೈಕಲ್ ದೊರೆಯುವಂತಿದ್ದರೆ? ಮಾಡಬಹುದಾಗಿದ್ದ ಸಾಧನೆ, ಮುರಿಯಬಹುದಾಗಿದ್ದ ದಾಖಲೆಗಳು ಓದುಗರ ಊಹೆಗೇ ಬಿಟ್ಟಿದ್ದು. ಸುಸಜ್ಜಿತ ವೇಲೊಡ್ರೋಮ್‌ನ ಸೌಕರ್ಯ ನಮ್ಮ ರಾಜ್ಯದಲ್ಲಿಲ್ಲ. ಆದರೂ ಅದರಲ್ಲೂ (ಅದರ ದಿನ ನಿತ್ಯದ ಅಭ್ಯಾಸ ವಿರದಿದ್ದರೂ) ನಮ್ಮವರು ಹಿಂದೆ ಬಿದ್ದಿಲ್ಲ. ಲೂಧಿಯಾನಾ (ಜೂನ್-೯೭)ದ ಸ್ಪರ್ಧೆಯ ಅವಘಡದಲ್ಲಿ ಕುಮಾರಿ ಪ್ರೇಮಲತಾ ಸುರೇಬಾನ್ ಅನುಭವಿಸಿದ ನೋವು ಎಲ್ಲರಿಗೂ ತಿಳಿದಿರುವ ವಿಷಯ. ಸೈಕ್ಲಿಸ್ಟ್‌ಗಳ ತವರೂರಾಗಿರುವ ಬಿಜಾಪುರದಲ್ಲಿಯೇ ಸುಸಜ್ಜಿತ ವೆಲೋಡ್ರಾಂ ನಿರ್ಮಿಸುವತ್ತ ನಮ್ಮ ಘನ ರಾಜ್ಯ ಸರಕಾರ ಇನ್ನು ಮುಂದಾದರೂ ಕಾರ್ಯಪ್ರವೃತ್ತರಾಗುವುದು ಅತ್ಯಗತ್ಯ.

ಬಿಜಾಪೂರ ಜಿಲ್ಲಾ ಸೈಕ್ಲಿಂಗ್ ಸಂಸ್ಥೆಯ ಅಧ್ಯಕ್ಷರು, ಬೆಂಗಳೂರು ಸೈಕ್ಲಿಂಗ್ ಸಂಸ್ಥೆಯ ಉಪಾಧ್ಯಕ್ಷರೂ ಆಗಿರುವ ಶ್ರೀಧರ

ವಿ.ಪಿ.ಸಿಂಗ್ ಚಿತ್ರಪ್ರದರ್ಶನ

ರಂಗನಿರ್ಕಾರ... ದಳದ ಸ್ಟ್ರೈಕ್‌ಗಳೇ ಈ ಚಿತ್ರಗಳಲ್ಲಿ ಒಡಮೂಡಿವೆ ಅಂತಿದ್ರಾ ಸಾರ್!

ಗೋರೆಯವರು ಈ ದಿಸೆಯಲ್ಲಿನ ತನು-ಮನ-ಧನ ನೀಡಿ ಸಲ್ಲಿಸುತ್ತಿರುವ ಸೇವೆಯ ಬಗೆಗೆ ಎಷ್ಟೇ ಬರೆದರೂ ಕಡಿಮೆಯೇ. ಸಂಸ್ಥೆಯ ಬೆನ್ನೆಲುಬಾಗಿರುವ ಗೋರೆಯವರೊಡನೆ ಉಪಾಧ್ಯಕ್ಷರುಗಳಾದ ವಾಯ್.ಹೆಚ್. ಎಂಟೆತ್ತು, ಸುಂದರ ಸಾಲಿಯನ್, ಮುತ್ತಪ್ಪ ಕೆ. ಮಾಲಿ, ಕೆ.ಕೆ. ಬಿರಾದಾರ, ಪಿ.ಎಸ್. ಗಚ್ಚಿನಕಟ್ಟಿ ಹಾಗೂ ಭೀಮಸಿ ಕಟಕನಹಳ್ಳಿ, ಕಾರ್ಯದರ್ಶಿ ಟಿ.ಎನ್. ಫಡತರೆ, ಉಪಕಾರ್ಯದರ್ಶಿಗಳಾದ ಸಿದ್ದು ಎಂ. ಗೊರ್‍ನಾಳ, ಸಂಜೀವ ಎನ್. ಫಡತರೆ ಹಾಗೂ ಕೋಶಾಧಿಕಾರಿ ರಮೇಶ, ಪಾಟೀಲರು ಹೆಜ್ಜೆಯೊಡನೆ ಹೆಜ್ಜೆ ಬೆರೆಸಿ, ಸಹಕಾರ, ಸಮನ್ವಯದಿಂದ ನಡೆಯುತ್ತಿರುವುದರಿಂದಲೇ ಈ ಅದ್ಭುತ ಸಾಧನೆ, ಪ್ರಗತಿ ಸಾಧ್ಯವಾಗಿದೆ ಎಂದರೂ ಸುಳ್ಳಲ್ಲ.

ತಮ್ಮ ವಕೀಲ ವೃತ್ತಿಯ ಮಧ್ಯದಲ್ಲಿಯೂ ಬಿಡುವು ದೊರಕಿಸಿಕೊಂಡು ಸೈಕ್ಲಿಂಗ್ ಸಂಸ್ಥೆಯ ಅಭಿವೃದ್ಧಿಗೆ ಹೆಗಲು ಕೊಟ್ಟಿರುವ ಟಿ.ಎನ್. ಫಡತರೆಯವರ ಕಾಣಿಕೆಯೂ ಕಡಿಮೆಯೇನಲ್ಲ.

ತರಬೇತುದಾರರಾಗಿರುವ ಮೋಹನ ಪತ್ತಾರ, ದುಂಡಪ್ಪ ಅಥಣಿ, ಚಂದ್ರು ಕುರಣಿಯವರ ಸೇವಾ ಮನೋಭಾವ, ಕಾರ್ಯ ತತ್ಪರತೆ, ಶ್ರಮದ ಬೆಲೆಯನ್ನು ಅಳೆಯಲಾಗದು. ಸೈಕ್ಲಿಂಗ್‌ನ ಪಿತಾಮಹ ಎನ್ನಿಸಿರುವ ಚಂದ್ರು ಕುರಣಿಯವರು ಒಂದು ಹೊಸ ಆಯಾಮವನ್ನೇ ಸೃಷ್ಟಿಸಿದ್ದು, ತಮ್ಮ ಜೀವನದ ಅಚ್ಚು-ಮೆಚ್ಚಿನ ಕ್ರೀಡೆಗಾಗಿ ದಿನವಿಡೀ ಶ್ರಮಿಸುತ್ತ ಹತ್ತು-ಹಲವು ಪ್ರತಿಭೆಗಳು ಹೊರ ಹೊಮ್ಮಿ ರಾಷ್ಟ್ರೀಯ, ಅಂತರ ರಾಷ್ಟ್ರೀಯ ಮಟ್ಟದಲ್ಲಿ ಮಿನುಗಲು ಕಾರಣೀಭೂತರಾಗಿದ್ದಾರೆ. ''ಪ್ರತಿಭೆ ಪ್ರಯತ್ನಕ್ಕೆ ಮನ್ನಣೆ ಇದ್ದೇ ಇದೆ'' ಎನ್ನುವುದಕ್ಕೆ ಚಂದ್ರು ಅವರು ಒಂದು ನಿದರ್ಶನ.

ಸೈಕಲ್ ತಾರೆಗಳಿಗೆ ನೀಡುವ ದಿನ ಭತ್ಯೆ, ಇತರೇ ಸೌಕರ್ಯ ಕಡಿಮೆ. ಉತ್ತಮ ವೈದ್ಯಕೀಯ ಸೇವೆ ಬೇಕೇ ಬೇಕು. ಸ್ಪರ್ಧೆಗಾಗಿ ಇನ್ನೊಂದೆಡೆ ತೆರಳಲು ವಾಹನ ಸೌಲಭ್ಯ ಬೇಕು. ಕ್ರೀಡಾ ಸಚಿವರಾದ ಅಜಯಕುಮಾರ ಸರನಾಯಕ ಹಾಗೂ ರಾಜ್ಯ ಸರಕಾರ ಇವೆಲ್ಲವುಗಳನ್ನೂ ಒದಗಿಸುವ ನಿಟ್ಟಿನತ್ತ ತೀವ್ರ ಕಾರ್ಯಮಗ್ನರಾಗಬೇಕು. ಅಂದಾಗಲೇ ಕ್ರೀಡಾಳುಗಳಿಂದ ಇನ್ನೂ ಹೆಚ್ಚಿನ ಸಾಧನೆ, ದಾಖಲೆ ನಿರ್ಮಾಣವಾಗಲು ಸಾಧ್ಯ. ●

# ಸೈಕ್ಲಿಂಗ್ : ಲಕ್ಷ್ಮೇಶ್ವರದ ಸಾಧನೆ

**'ಪು**ಲಿಗೆರೆ' ಎಂಬ ಹೆಸರಿನಿಂದಲೇ ಪ್ರಚಲಿತವಾಗಿ, ಪ್ರಖ್ಯಾತಿಯನ್ನು ಪಡೆದಿದ್ದ ಐತಿಹಾಸಿಕ ನಗರ ಲಕ್ಷ್ಮೇಶ್ವರದ ಇತಿಹಾಸದಲ್ಲಿ ಇದೇ ಅಕ್ಟೋಬರ್ ೨೧ ಒಂದು ಮಹತ್ವದ ದಿನ. ಮೊಟ್ಟ ಮೊದಲ ಸಲ ರಾಜ್ಯ ರಸ್ತೆ ಸೈಕ್ಲಿಂಗ್ ಚಾಂಪಿಯನ್‌ಶಿಪ್ಪನ್ನು ಯಶಸ್ವಿಯಾಗಿ ಸಂಘಟಿಸಿದ ಅದು ಗೋಲಗುಮ್ಮಟ ಖ್ಯಾತಿಯ ವಿಜಾಪುರದಂತೆ 'ಸೈಕ್ಲಿಂಗ್ ಕಾಶಿ'ಯಾಗುವ ಪ್ರಯತ್ನದಲ್ಲಿ ಮಹತ್ವದ ಹೆಜ್ಜೆಯಿಟ್ಟಿರುವುದೂ ಖಚಿತ.

ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ,

ಚಿತ್ರ: ಶಿವಲಿಂಗ ಪಾಟೀಲ



ಲಕ್ಷ್ಮಣ ಮಾಳಿ

ವಾಣಿಜ್ಯ ಕೇಂದ್ರವಾಗಿ, ಹೆಸರು ಮಾಡಿರುವ ಈ ಊರಿನ ಸೋಮನಾಥ ಮಂದಿರ, ಅನೆಪಜ್ಜೆ ಬಸದಿ, ಮುಕ್ತಿ ಮಂದಿರ ತಪೋಭೂಮಿ, ಅಗಸ್ತ್ಯ ತೀರ್ಥ, ದೂದಪೀರಾಂ ಆಸಾರ ಮುಂತಾದವು ಅಸಂಖ್ಯಾತ ಭಕ್ತರನ್ನು ಆಕರ್ಷಿಸುತ್ತಿರುವಂತೆ ಮುಂದಿನ ದಿನಗಳಲ್ಲಿ ಹಿರಿ-ಕಿರಿಯ ಸೈಕ್ಲಿಸ್ಟ್‌ಗಳನ್ನೂ ಆಕರ್ಷಿಸುವಂತಾದರೆ ಅಚ್ಚರಿ ಪಡಬೇಕಿಲ್ಲ.

ಲಕ್ಷ್ಮೇಶ್ವರ ಕ್ರೀಡಾಕ್ಷೇತ್ರದಲ್ಲಿ ಹೊಸ ಹೆಸರೇನೂ ಅಲ್ಲ. ರಾಜ್ಯದಲ್ಲಷ್ಟೇ ಏಕೆ, ರಾಷ್ಟ್ರ ಮಟ್ಟದಲ್ಲಿಯೂ ಅದು ಮಲ್ಲಕಂಬದಲ್ಲಿ ಹೆಸರು ಮಾಡಿದೆ. ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಪಾಲ್ಗೊಂಡಿರುವ 60ಕ್ಕೂ ಹೆಚ್ಚು ಪಟುಗಳು ಈ ಊರಲ್ಲಿರುವುದರ ಹಿನ್ನೆಲೆಯಲ್ಲಿ 'ಮಲ್ಲಕಂಬ ಎಂದರೇ ಲಕ್ಷ್ಮೇಶ್ವರ' ಎನ್ನುವಂತಾಗಿದೆ. ಇಲ್ಲಿನ ಪಕ್ಕದ ಗ್ರಾಮಗಳಾದ ಆಡರಕಟ್ಟಿ ಹಾಗೂ ಶಿಗ್ಲಿಯಿಂದ ಮೂವರು ಆಟ್ಯಾ-ಪಟ್ಯಾ ಪಟುಗಳು ರಷ್ಯಾಕ್ಕೂ ಹೋಗಿ ಬಂದ ಸಾಧನೆಗೈದಿದ್ದಾರೆ.

ಲಕ್ಷ್ಮೇಶ್ವರದ ಸೈಕ್ಲಿಂಗ್ ಮೋಹ ಮಾತ್ರ ಇತ್ತೀಚಿನದು. ಅದೂ ರಾಷ್ಟ್ರೀಯ ಖ್ಯಾತಿಯ ಸೈಕ್ಲಿಂಗ್ ಪಟು ಶ್ರೀಶೈಲ ಕುರಣಿ ಅವರು ಪಕ್ಕದ ಮಾಡಳ್ಳಿ ಗ್ರಾಮಕ್ಕೆ ಹೈಸ್ಕೂಲು ದೈಹಿಕ ಶಿಕ್ಷಕರಾಗಿ ಬಂದಾಗಿನಿಂದ ಈ 'ಸೈಕ್ಲಿಂಗ್ ಹುಚ್ಚು' ಇಲ್ಲಿಯೂ ಹಬ್ಬಿಕೊಂಡಂತಿದೆ.

ಮಾಡಳ್ಳಿಯವರೇ ಆದ ಗೋವಿಂದಗೌಡ ಪಾಟೀಲ ಇದಕ್ಕೆ ಬೆನ್ನೆಲುಬಾದರು. ಇಲ್ಲಿ ದೈಹಿಕ ಶಿಕ್ಷಕ ಶಿಕ್ಷಣ ಕಾಲೇಜಿನಿಂದ ಅವರಿಗೆ ಬೇಕಿದ್ದ ಸೌಲಭ್ಯವನ್ನು ಕಲ್ಪಿಸಿ ಕೊಟ್ಟಾಗ, ಆಗಿನ ಪ್ರಾಚಾರ್ಯ ಸಿ.ಕೆ. ಚೆನಾಳ ಅವರು ತೋರಿಸಿದ ಆಸ್ಥೆಯಿಂದ ಸೈಕ್ಲಿಂಗ್ ಈ ಊರಲ್ಲಿ ಗಟ್ಟಿಯಾಗಿಯೇ ನೆಲೆಯೂರುವ ಸರ್ವ ಲಕ್ಷಣಗಳನ್ನೂ ತೋರಿಸಿದೆ. ಈ ಸ್ವಲ್ಪ ಸಮಯದಲ್ಲಿಯೇ ದಾನಮ್ಮ ಬಾಳಿಯಂತಹ ಸೈಕ್ಲಿಸ್ಟ್ ಸುದ್ದಿ ಮಾಡಿರುವುದು, ಅಷ್ಟೇ ಅಲ್ಲ, ಆಕೆಯೊಡನೆ ಇಲ್ಲಿಯವರೇ ಆದ ಜಯಶ್ರೀ ಪಾಟೀಲ, ಇಂದಿರಾ ಚಿಂಚಲಿಯಂತವರು ಕರ್ನಾಟಕ ವಿಶ್ವವಿದ್ಯಾಲಯ ತಂಡದಲ್ಲಿ ಸ್ಥಾನ ಪಡೆದು, ಚಂಡೀಗಢದಲ್ಲಿ ನಡೆದ ಅಖಿಲ ಭಾರತ ಅಂತರ ವಿಶ್ವವಿದ್ಯಾಲಯ ಸ್ಪರ್ಧೆಯ ಸಾಂಘಿಕ ವಿಭಾಗದಲ್ಲಿ ತೃತೀಯ ಸ್ಥಾನವನ್ನೂ ಸಂಪಾದಿಸಿದ್ದು ಇದಕ್ಕೊಂದು ನಿದರ್ಶನ.

ಸುಮಾರು ೭೦ ಸಾವಿರ ರೂಪಾಯಿಗಳ ವೆಚ್ಚದಲ್ಲಿ ಧಾರವಾಡ ಜಿಲ್ಲಾ ಹವ್ಯಾಸಿ ಸೈಕ್ಲಿಂಗ್ ಸಂಸ್ಥೆಯ ಆಶ್ರಯದಲ್ಲಿ ನಡೆದ ಈ



ಪ್ರೇಮಲತಾ ಸುರೇಬಾನ್

ಚಾಂಪಿಯನ್‌ಶಿಪ್‌ನ ಯಶಸ್ವೀ ಸಂಘಟನೆಯ ಬಗ್ಗೆ ಎರಡು ಮಾತಿಲ್ಲ. ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳೂ ಸಹ ಇಷ್ಟು ವ್ಯವಸ್ಥಿತವಾಗಿ ನಡೆಯುವುದಿಲ್ಲವೆಂದು ಅಂತಾರಾಷ್ಟ್ರೀಯ ಖ್ಯಾತಿಯ ಸೈಕ್ಲಿಸ್ಟ್ ಚಂದ್ರು ಕುರಣಿ ಹೇಳಿದ್ದಕ್ಕಿಂತ ಬೇರೆ 'ಸರ್ಟಿಫಿಕೇಟ್' ಸಂಘಟಕರಿಗೆ ಬೇಕಿಲ್ಲ. ಸ್ಪರ್ಧೆಯ ಸಂಘಟನೆಯಲ್ಲಿ ಲಕ್ಷ್ಮೇಶ್ವರದ ಜನ ತೋರಿಸಿದ ಕ್ರೀಡಾ ಪ್ರೇಮ ಬಹಳ ದಿನ ನೆನಪಿನಲ್ಲಿಡುವಂತಹುದು. ಸೈಕ್ಲಿಸ್ಟ್‌ಗಳಿಗಾಗಿ ತುಟ್ಟಿ ಹಣ್ಣುಗಳನ್ನು ಹಣ್ಣಿನ ವ್ಯಾಪಾರಿಗಳು ಪುಕ್ಕಟೆಯಾಗಿಯೇ ಕೊಟ್ಟರು. ಮೂರು ಸ್ಪರ್ಧೆಗಳಿಗೆ ಪ್ರಾರಂಭದ ಸ್ಥಳವಾಗಿದ್ದ ರಾಮಗೇರಿಯಲ್ಲಂತೂ ಹಬ್ಬದ ವಾತಾವರಣ ಏರ್ಪಟ್ಟಿತ್ತು. ಮುಂಜಾನೆ ಸ್ಪರ್ಧೆಯ ಪ್ರಾರಂಭಕ್ಕೆ ಮೊದಲು ಸ್ಪರ್ಧಿಗಳಿಗೆ ಬೆಳಗಿನ ಉಪಹಾರ ನೀಡಲು ಇಡೀ ಊರೇ ಸಿದ್ಧವಾಗಿ ನಿಂತಿತ್ತು. ಮಧ್ಯಾಹ್ನದ ಹೊತ್ತಿಗಂತೂ ಊರಿನಿಂದ ಮಜ್ಜಿಗೆಯ ಹೊಳೆಯೇ ಹರಿಯಿತು. ರಾಮಗಿರಿಯಲ್ಲಿ ಸ್ಪರ್ಧೆಯ ಪ್ರಾರಂಭದ ಸ್ಥಳದಲ್ಲಿ ಹಾಕಿದ್ದ ಚಪ್ಪರದ ಕಥೆಯೇ ವೈಶಿಷ್ಟ್ಯಪೂರ್ಣ. ಹುಡುಗರೇ ಊರಲ್ಲಿ ಬಿದ್ದಿದ್ದ ನಾಲ್ಕು ಟೆಲಿಫೋನ್ ಕಂಬಗಳನ್ನು ತಂದು, ನಿಲ್ಲಿಸಿ, ಮೇಲೆ ಚಪ್ಪರ ಹಾಕಿ ಮುಗಿಸಿದಾಗ ನಸುಕಿನ ಮೂರು ಗಂಟೆಯಾಗಿತ್ತಂತೆ.

ಪೈಲೆಟ್‌ಗಳ ಕೆಲಸವನ್ನೂ ಹುಡುಗರೇ ಅಚ್ಚುಕಟ್ಟಾಗಿ ಮಾಡಿ ಮುಗಿಸಿದರು. ದೈಹಿಕ ಶಿಕ್ಷಣ ಮಹಾವಿದ್ಯಾಲಯದ ವಿದ್ಯಾರ್ಥಿಗಳು, ಕ್ರೀಡಾ ಉತ್ತೇಜನ ಅಭಿವೃದ್ಧಿ ಸಂಘದವರಂತೂ ಮೂರ್‍ನಾಲ್ಕು ದಿನ ನಿದ್ದೆಗೆಟ್ಟು ದುಡಿದಿರಲೇಬೇಕು. ಸಂಘಟನೆಗೆ ಬೇಕಾದ ಹಣವೂ ಊರವರಿಂದ ಉದಾರವಾಗಿ ಹರಿದು ಬಂತು. ಧಾರವಾಡ ಜಿಲ್ಲಾ ಸೈಕ್ಲಿಂಗ್ ಸಂಸ್ಥೆಯ ಉಪಾಧ್ಯಕ್ಷರೂ ಆಗಿರುವ, ಧಾರವಾಡದ ಜೆ.ಎಸ್.ಎಸ್. ಕಾಲೇಜಿನ ದೈಹಿಕ ಶಿಕ್ಷಣ ನಿರ್ದೇಶಕ ಕೆ.ಎಸ್. ಭೀಮಣ್ಣವರ ಅವರು ತಾವೇ ಐದು ಸಾವಿರ ರೂಪಾಯಿಗಳಷ್ಟು ನೀಡಿ ಉಳಿದವರಿಗೆ ಮೇಲ್ಪಂಕ್ತಿ ಹಾಕಿಕೊಟ್ಟರು.

ಮೇಲೆಯೇ ಬರೆದಿರುವಂತೆ ಶ್ರೀಶೈಲ ಕುರಣಿ ಅವರು ಮಾಡಳ್ಳಿಗೆ ಬಂದ ನಂತರವೇ ಲಕ್ಷ್ಮೇಶ್ವರದಲ್ಲೂ 'ಸೈಕ್ಲಿಂಗ್ ಜ್ವರ' ಏರಲಾರಂಭಿಸಿದ್ದು. ಅಣ್ಣ ಚಂದ್ರು ಅವರಂತೆ ಸೈಕಲ್ ತುಳಿಯುವದರಲ್ಲಿ ರಾಷ್ಟ್ರಮಟ್ಟದಲ್ಲೂ ಹೆಸರು ಮಾಡಿದ ಅವರು ಪಾಟಿಯಾಲಾದಲ್ಲಿ ಎನ್.ಐ.ಎಸ್.ನಲ್ಲಿ ಪಡೆದ ತರಬೇತಿಯ ಪೂರ್ಣ ಪ್ರಯೋಜನವನ್ನು ಈ ಊರಲ್ಲಿ ಮಾಡಿಕೊಂಡರು. ತಮ್ಮ ಊರಿಂದ ತಂದ ಹಳೆಯ ಸೈಕಲ್‌ಗಳಿಂದಲೇ ಮಕ್ಕಳಿಗೆ ಸೈಕ್ಲಿಂಗ್ ಹೇಳಿಕೊಡಲಾರಂಭಿಸಿದರು. ನಂತರದ ಅಲ್ಪಾವಧಿಯಲ್ಲಿ ಬಂದ ಫಲಿತಾಂಶವನ್ನು ಮತ್ತೆ ಹೇಳಬೇಕಿಲ್ಲ ತಾನೇ? ಅವರ ಪ್ರಯತ್ನಕ್ಕೆ ನೆರವಾದವರು ದೈಹಿಕ ಶಿಕ್ಷಣ ಕಾಲೇಜಿನ ಕಾರ್ಯದರ್ಶಿಗಳೂ ಆಗಿರುವ ಎನ್.ಎಸ್. ಪಾಟೀಲ. ತಮ್ಮ ಕಾಲೇಜು ಹಾಗೂ ಮುನಿಸಿಪಲ್ ಆರ್ಟ್ಸ್ ಕಾಲೇಜಿನಿಂದ ತಲಾ ಎರಡೆರಡು ಸೈಕಲ್ ತೆಗೆಸಿಕೊಟ್ಟ ಅವರು ಲಕ್ಷ್ಮೇಶ್ವರದಲ್ಲಿ 'ಸೈಕ್ಲಿಂಗ್ ಕ್ರಾಂತಿ'ಯ ಇನ್ನೊಬ್ಬ ಹರಿಕಾರರಾದರು. ದೈಹಿಕ ಶಿಕ್ಷಣ ಕಾಲೇಜಿನ ಈಗಿನ ಪ್ರಾಚಾರ್ಯ ಆರ್.ಬಿ. ಮಾಳಿ ಅವರೂ ಇದರಲ್ಲಿ ಸಾಕಷ್ಟು ಆಸಕ್ತಿ ತೋರಿದ್ದಾರೆ. ಇವರೆಲ್ಲರ ಪ್ರಯತ್ನದಿಂದ ಮುಂದಿನ ಮೂರ್‍ನಾಲ್ಕು ವರ್ಷಗಳಲ್ಲಿ ಲಕ್ಷ್ಮೇಶ್ವರ ರಾಷ್ಟ್ರೀಯ ಮಟ್ಟದ ಸೈಕ್ಲಿಸ್ಟ್‌ಗಳನ್ನು ತಯಾರಿಸಿದರೆ ಅಚ್ಚರಿ ಪಡಬೇಕಿಲ್ಲ.

**ಮಿಂಚಿದ ಪ್ರೇಮಲತಾ :** ಈ ಸಲದ ಸ್ಪರ್ಧೆಯಲ್ಲಿ ಮಿಂಚಿದವರು ಪ್ರೇಮಲತಾ ಸುರೇಬಾನ. ೧೬ ಹಾಗೂ ೧೮ಕ್ಕಿಂತ ಕಿರಿಯರ ಅಷ್ಟೇ ಅಲ್ಲದೇ ಮಹಿಳೆಯರ ವಿಭಾಗದ ಸ್ಪರ್ಧೆಯನ್ನೂ ಸುಲಭವಾಗಿ ಗೆದ್ದ ಈ ಹುಡುಗಿ ಸನಿಹದಲ್ಲೇ ಅಂತಾರಾಷ್ಟ್ರೀಯ ಮಟ್ಟಕ್ಕೇರಬಲ್ಲ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡಿದ್ದಾಳೆ. ಗುರಿ ಸಾಧಿಸಲೇಬೇಕೆಂಬ ಛಲಬೇಕಷ್ಟೇ. ಆದರೆ ಇಲ್ಲದ ವಿಚಾರಗಳಿಗೆ ಅವಕಾಶ ಮಾಡಿಕೊಟ್ಟವರು ಗಂಗೂ ಬಿರಾದಾರ. ಸ್ಪರ್ಧೆಯಲ್ಲಿ ಪಾಲ್ಗೊಳ್ಳುವ ಉದ್ದೇಶದಿಂದಲೇ ಲಕ್ಷ್ಮೇಶ್ವರಕ್ಕೆ ಬಂದಿದ್ದ ಅವರು ಕೊನೆಯ ಕ್ಷಣದಲ್ಲಿ ಸ್ಪರ್ಧೆಯಿಂದ ಹಿಂತೆಗೆದುಕೊಂಡಿದ್ದು ಅಚ್ಚರಿಯ ವಿಷಯವೇ. ರಾಷ್ಟ್ರೀಯ ರಸ್ತೆ ಸೈಕ್ಲಿಂಗ್ ಸ್ಪರ್ಧೆ ಚೆನ್ನೈನಲ್ಲಿ ಎರಡು ವಾರದಷ್ಟೇ

*ಬಿಜಾಪುರದವರೇ ಆದ ರಾಜ್ಯ ಕ್ರೀಡಾ ಸಚಿವ ಅಜಯಕುಮಾರ ಸರನಾಯಕರಲ್ಲಿ ಅಂತಹ ಕಳಕಳಿ ಇದ್ದಿದ್ದೇ ಆದರೆ, ೪ನೇ ರಾಷ್ಟ್ರೀಯ ಕ್ರೀಡಾಕೂಟದ ಸಮಯದಲ್ಲಿ ಎಲ್ಲ ತಂಡಗಳ ಸ್ಪರ್ಧಿಗಳನ್ನು ಲೂಧಿಯಾನಾಕ್ಕೆ ವಿಮಾನದಲ್ಲಿ ಕರೆದೊಯ್ದ ಖರ್ಚಿನ ಹಣ (೩೫ ಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲದಷ್ಟು) ಉಳಿಸಿ ಬಳಸಿದ್ದೇ ಆದರೆ ವಿಜಾಪುರದಲ್ಲೇ ವೆಲೋಡ್ರೋಮ್ ನಿರ್ಮಿಸಿಬಿಡಬಹುದಾಗಿತ್ತು ಎನ್ನುವುದು ನಗ್ನ ಸತ್ಯ!*

ಮೊದಲು ಮುಗಿದುಹೋಗಿದ್ದರಿಂದ ಇಲ್ಲಿ ಪಾಲ್ಗೊಳ್ಳದಿದ್ದರೂ ನಡೆಯುತ್ತದೆ ಎಂಬ ಉದಾಸೀನತೆಯೂ ಇದಕ್ಕೆ ಕಾರಣ ಇರಬಹುದು. ರಾಷ್ಟ್ರೀಯ ಸ್ಪರ್ಧೆಯ ನಂತರ ರಾಜ್ಯ ಸ್ಪರ್ಧೆ ಏರ್ಪಡಿಸಿದ್ದ ರಾಜ್ಯ ಸೈಕ್ಲಿಂಗ್ ಸಂಸ್ಥೆಯ ನಿರ್ಣಯವೂ ಅರ್ಥಹೀನ. ಮುಂದಾದರೂ ಹೀಗಾಗದಂತೆ ಅದು ನೋಡಿಕೊಳ್ಳಬೇಕು.

ರಾಜ್ಯ ಸೈಕ್ಲಿಂಗ್ ಸಂಸ್ಥೆ ಇರುವುದು ಬೆಂಗಳೂರಿನಲ್ಲಾದರೂ ಅದರ ಜೀವವಿರುವುದು ಉತ್ತರ ಕರ್ನಾಟಕದಲ್ಲಿ ಎನ್ನುವುದನ್ನು ಅದು ಮರೆಯಬಾರದು. ಕಾರಣ ಬರೀ ಸ್ಪರ್ಧೆಯ ದಿನ ಬಂದು ಸಂಘಟಕರ ಖರ್ಚಿನಲ್ಲಿ ಕಾರಿನಲ್ಲಿ ಅಡ್ಡಾಡಿ ಹೋಗುವದಕ್ಕಿಂತ ಲಕ್ಷ್ಮೇಶ್ವರದಂತಹ ಕೇಂದ್ರಗಳಲ್ಲಿ ಈ ಕ್ರೀಡೆಯ ಅಭಿವೃದ್ಧಿಗೆ ಪ್ರಯತ್ನಿಸುವುದು ಅದರ ಜವಾಬ್ದಾರಿ. ಇದರ ಬಗ್ಗೆ ಅವರಲ್ಲಿಯ ಕಳಕಳಿಯ ಕೊರತೆಯೇ ನಮ್ಮ ಸೈಕ್ಲಿಸ್ಟ್‌ಗಳ ಪಾಲಿಗೆ ವೆಲೋಡ್ರೋಮ್ ಅನ್ನು 'ಮರೀಚಿಕೆ'ಯನ್ನಾಗಿಸಿದೆ. ನಿಜಕ್ಕೂ ರಾಜ್ಯ ಸಂಸ್ಥೆ ಹಾಗೂ ಸ್ವತಃ ಬಿಜಾಪುರದವರೇ ಆದ ರಾಜ್ಯ ಕ್ರೀಡಾ ಸಚಿವ ಅಜಯಕುಮಾರ ಸರನಾಯಕರಲ್ಲಿ ಅಂತಹ ಕಳಕಳಿ ಇದ್ದಿದ್ದೇ ಆದರೆ, ೪ನೇ ರಾಷ್ಟ್ರೀಯ ಕ್ರೀಡಾಕೂಟದ ಸಮಯದಲ್ಲಿ ಎಲ್ಲ ತಂಡಗಳ ಸ್ಪರ್ಧಿಗಳನ್ನು ಲೂಧಿಯಾನಾಕ್ಕೆ ವಿಮಾನದಲ್ಲಿ ಕರೆದೊಯ್ದು ಖರ್ಚಿನ ಹಣ (೩೫ ಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲದಷ್ಟು) ಉಳಿಸಿ ಬಳಸಿದ್ದೇ ಆದರೆ ವಿಜಾಪುರದಲ್ಲೇ ವೆಲೋಡ್ರೋಮ್ ನಿರ್ಮಿಸಿಬಿಡಬಹುದಾಗಿತ್ತು ಎನ್ನುವುದು ನಗ್ನ ಸತ್ಯ!

ಪುರುಷರ ವಿಭಾಗದಲ್ಲಿ ವಿಜಾಪುರ ಪೊಲೀಸ್ ಕಾನ್ಸಟೇಬಲ್ ಲಕ್ಷ್ಮಣ ಮಾಳಿ, ಹನುಮಂತ ಚಿಕ್ಕೂರ, ಪರಶುರಾಮ ಕಟಬರ, ಬಾಲಕರ ವಿಭಾಗದಲ್ಲಿ ವಿಜಾಪುರದ ರಾಜು ಎಂಟೆತ್ತ, ಸಂತೋಷ ಪಾಟೀಲ, ಧಾರವಾಡದ ಚಂದ್ರಶೇಖರ ಕಿನ್ನಾಳ, ಬಾಲಕಿಯರ ವಿಭಾಗದಲ್ಲಿ ವಿಜಾಪುರದ ಶೀಲಾ ಪಾಟೀಲ, ಸವಿತಾ ಅಣ್ಣಪ್ಪನವರ, ಶೋಭಾ ದುಂಡಿ, ಬೆಳಗಾವಿಯ ಅನಿತಾ ಹಾಗೂ ಕವಿತಾ ಚೌಗುಲೆ, ಮದುರಾ ಮೋಡಕ, ರುಕ್ಸಾನಾ ಶೇಖ್, ಲಕ್ಷ್ಮೇಶ್ವರದ ದಾನಮ್ಮಾ ಬಾಳಿ ಮಿಂಚಿ ಮುಂಬರುವ ದಿನಗಳಲ್ಲಿ ಸುದ್ದಿ ಮಾಡುವ ಭರವಸೆ ಮೂಡಿಸಿದರು.

○ ವಸಂತ ಮುರ್ದೇಶ್ವರ
ಧಾರವಾಡ

# ಜಾನಪದ ಸಾಹಿತ್ಯದ ಸಾಧಕ
# ಜಿ.ಬಿ. ಖಾಡೆ



ವಿಜಾಪುರ ಜಿಲ್ಲೆಯ ಹಿರಿಯ ಜನಪದ ಸಾಹಿತಿಗಳಲ್ಲಿ ಒಬ್ಬರಾಗಿರುವ ಜಿ.ಬಿ. ಖಾಡೆಯರದು ಜನಪದ ಸಾಹಿತ್ಯ ಸಂಗ್ರಹ ಮತ್ತು ಸಂಪಾದನೆಯಲ್ಲಿ ಸದ್ದಿಲ್ಲದ ಸಾಧನೆ. ಇವರು ದೀರ್ಘಕಾಲ ಹಳ್ಳಿ-ಹಳ್ಳಿಗಳಲ್ಲಿ ಸುತ್ತಿ ಶ್ರಮವಹಿಸಿ ಸಂಪಾದಿಸಿರುವ ಜನಪದ ಸಾಹಿತ್ಯದ ಕೆಲಸ ಜಿಲ್ಲೆಯಲ್ಲಿ ಹಲಸಂಗಿ ಗೆಳೆಯರ ಮತ್ತು ಸಿಂಪಿ ಲಿಂಗಣ್ಣನವರ ತರುವಾಯ ಮಾಡಿದ ಉತ್ತಮ ಕೆಲಸವಾಗಿದೆ.

ಸದ್ಯ ಮುಧೋಳ ತಾಲೂಕಿನ ಭಂಟನೂರ ಗ್ರಾಮದ ಲೆಕ್ಕಾಧಿಕಾರಿಗಳಾಗಿರುವ ಗಣಪತಿ ಬಾಪು ಖಾಡೆಯವರು ಜಮಖಂಡಿ ತಾಲೂಕಿನ ತೊದಲ ಬಾಗಿಯಲ್ಲಿ ೧೯೪೩ರಲ್ಲಿ ಜನಿಸಿದರು. ಜನಸಂಪರ್ಕವನ್ನು ವಿಶೇಷವಾಗಿ ಹೊಂದಿರುವ ಮತ್ತು ಜಾನಪದದ ಬಗೆಗೆ ಮೂಲಭೂತ ಕಾಳಜಿ ಹಾಗೂ ತಿಳುವಳಿಕೆ ಹೊಂದಿರುವ ಖಾಡೆಯವರು ಸಂಪಾದಿಸಿದ ಜನಪದ ಸಾಹಿತ್ಯ ಮುಂದಿನ ಪೀಳಿಗೆಗೆ ಅಮೂಲ್ಯ ದಾಖಲೆಯಾಗಿ ಉಳಿಯಲಿದೆ. ಮೈಸೂರ ವಿಶ್ವವಿದ್ಯಾಲಯ ತನ್ನ ಜಾನಪದ ಮಾಲೆಯಲ್ಲಿ ಖಾಡೆಯವರ ''ಕಾಡು ಹೂಗಳು'' (೧೯೭೩) ಕೃತಿಯನ್ನು, ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತು ತನ್ನ ''ಬೆಳ್ಳಿ ಬಟ್ಟಬಳ್ಳಿ'' ಮಾಲೆಯಲ್ಲಿ 'ಹಳ್ಳಿ ಹಬ್ಬಿಸಿದ ಹೂಬಳ್ಳಿ' ಮತ್ತು 'ಬೆಳವಲದ ಬೆಳಕು' ಕೃತಿಗಳನ್ನು ಪ್ರಕಟಿಸಿದೆ. ಈ ಕೃತಿಗಳಲ್ಲಿ ವಿಜಾಪುರ ಜಿಲ್ಲೆಯ ರಿವಾಯತ್ ಪದಗಳು, ಲಾವಣಿಯ ಪದಗಳು, ಬೀಸುವ ಕಲ್ಲಿನ ಪದಗಳು, ಕೋಲಾಟದ ಪದಗಳು ಹಾಗೂ ಕಥೆಗಳು ಅಪ್ಪಟ ಜಾನಪದ ಸತ್ವದಲ್ಲಿ ಪ್ರಕಟಗೊಂಡಿವೆ.

ಖಾಡೆಯವರ 'ಕಾಡು ಹೂಗಳು' ಕೃತಿಯಲ್ಲಿ ಕೃಷ್ಣಾ ತೀರದ ಜನಜೀವನದ ಸಾಂಸ್ಕೃತಿಕ ಬದುಕನ್ನು ಜನಪದ ಗೀತೆಗಳ ಮೂಲಕ ಕಾಣಬಹುದು. ಈ ಕೃತಿಯ ಬಗ್ಗೆ ಡಾ. ಜಿ.ಶಂ. ಪರಮಶಿವಯ್ಯನವರು ಜಿ.ಬಿ. ಖಾಡೆಯವರ ಕಾಡು ಹೂಗಳು ಕೃತಿ ಪ್ರಾದೇಶಿಕ ಸಾದೃಶ್ಯ ಮತ್ತು ವೈದೃಶ್ಯಗಳನ್ನು ಅರಿತುಕೊಳ್ಳಲು ತುಂಬಾ ಸಹಾಯಕಾರಿಯಾಗಿದೆ ಎನ್ನುತ್ತಾರೆ.

ಕನ್ನಡದಲ್ಲಿ ಕರ್ಬಲಾ ಪದಗಳನ್ನು ಕುರಿತು ಅಧ್ಯಯನ ಮತ್ತು ಅಧ್ಯಾಪನಕ್ಕೆ ಈ ವರೆಗೆ ಪ್ರಕಟವಾದ ಕೃತಿಗಳಲ್ಲೇ ಖಾಡೆಯವರ 'ಹಳ್ಳಿ ಹಬ್ಬಿಸಿದ ಹೂಬಳ್ಳಿ' ಅತ್ಯಂತ ಮಹತ್ವವಾದುದೆನ್ನಬಹುದು. ಮುಸ್ಲಿಂ ಬಾಂಧವರು ಮೋಹರಂ ತಿಂಗಳಲ್ಲಿ ಆಚರಿಸುವ ಹಬ್ಬದ ಸಂದರ್ಭದಲ್ಲಿ ಹೇಳುವ ಕರ್ಬಲಾ ಹಾಡುಗಳನ್ನು ಇಲ್ಲಿ ಅಧಿಕ ಪ್ರಮಾಣದಲ್ಲಿ ಸಂಗ್ರಹಿಸಲಾಗಿದೆ. ಡೊಳ್ಳಿನ ಮೇಳದೊಂದಿಗೆ ಸಂಗ್ರಹಿಸಿದ ಕಥೆಗಳ ಸಂಕಲನ 'ಬೆಳವಲದ ಬೆಳಕು' ಜಿಲ್ಲೆಯ ಆಡು ಭಾಷೆ ಇಲ್ಲಿಯ ಕಥೆಗಳಿಗೆ ವಿಶೇಷ ಮೆರುಗು ಕೊಟ್ಟಿದೆ. ಈ ಪ್ರದೇಶದ ಭಾಷೆ ವೈಶಿಷ್ಟ್ಯ, ನುಡಿಗಟ್ಟು ಮಾತಿನ ವರಸೆಗಳನ್ನು ಅಧ್ಯಯನ ಮಾಡುವುದಕ್ಕೆ ಈ ಸಂಕಲನ ಬಹು ಉಪಯುಕ್ತವಾಗಿದೆ.

ಹೀಗೆ ಜನಪದ ಸಾಹಿತ್ಯ ಸಂಗ್ರಹ ಮತ್ತು ಸಂಪಾದನೆಯೊಂದಿಗೆ ರಾಜ್ಯ ಕಂದಾಯ ಇಲಾಖೆ ಪ್ರಕಟಿಸಿರುವ 'ಜಾಗೃತ ಸಂಗಮ' ಮತ್ತು 'ರಾಜಸ್ಮೃತಿ' ಸ್ಮರಣ ಸಂಚಿಕೆಗಳ ಸಂಪಾದಕರಾಗಿಯೂ ಸ್ಮರಣೀಯ ಕಾರ್ಯ ಮಾಡಿದ್ದಾರೆ. ಇವರ ನೇಗಿಲ ಯೋಗಿ ಮತ್ತು 'ಶಿವಭಕ್ತ ಸಿರಿಯಾಳ' ನಾಟಕಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ. ಇವರಂತೆ ಇವರ ಪುತ್ರರಾದ ಪ್ರಕಾಶ್ ಖಾಡೆ, ಅಶೋಕ ಖಾಡೆ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡರೆ ಇವರ ಇನ್ನೊರ್ವ ಪುತ್ರ ಬಾಪು ಖಾಡೆಯವರೂ ತಂದೆ ಹಾಗೂ ಸಹೋದರರನ್ನು ಹಿಂಬಾಲಿಸಿದ್ದಾರೆ. ಹೀಗೆ ತಮ್ಮೊಂದಿಗೆ ತಮ್ಮ ಬಳಗವನ್ನು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಳ್ಳಲು ಪ್ರೇರಣೆಯಾದ ಜಿ.ಬಿ. ಖಾಡೆಯವರು ಈಗಲೂ ಲೋಕಾಪುರದಲ್ಲಿ ಜಾನಪದ ಚಟುವಟಿಕೆಗಳು ನಿರಂತರವಾಗಿ ನಡೆದುಕೊಂಡು ಬರಲು 'ರಾಜ್ಯ ಜಾನಪದ ಉಳಿಸಿ ವೇದಿಕೆ' ಜನ್ಮ ತಳೆಯಲು ಕಾರಣರಾಗಿದ್ದಾರೆ.

○ ದೊಡ್ಡಣ್ಣ ಗದ್ದನಕೇರಿ



# ನಮ್ಮದು ಪ್ರಾಮಾಣಿಕ ಪ್ರತಿಭಾವಂತ ಕುಟುಂಬ

**- ಮಂತ್ರಿ ಎಂ.ಪಿ. ಪ್ರಕಾಶ್**

ಬೇಸರ ಹಾಗೂ ನೋವಿನ ಸಂಗತಿಯೆಂದರೆ ಇಡೀ ಜಿಲ್ಲೆಯಲ್ಲಿ ಏಕೆ ಇಡೀ ರಾಜ್ಯದಲ್ಲಿ ಹಿಂದಿನ ತಲೆಮಾರಿನ ಒಬ್ಬ ಸ್ವಾತಂತ್ರ್ಯ ಹೋರಾಟಗಾರನಾಗಿ, ನಿಷ್ಠೂರಿಯಾಗಿ, ಪ್ರಾಮಾಣಿಕನಾಗಿ ಸಾರ್ವಜನಿಕ ಬದುಕನ್ನು ನಡೆಸಿಕೊಂಡು ಹೋಗಿದ್ದ ನಮ್ಮ ತಂದೆಯವರ ಬಗ್ಗೆ ಕೂಡ ಕೆಟ್ಟ ಮಾತನ್ನು ಬರೆದಿದ್ದೀರಿ. ಈ ರೀತಿ ಬರೆಯಲು ನಿಮಗೆ ಯಾವ ನೈತಿಕ ಹಕ್ಕೂ ಇಲ್ಲ. ಜಗದ್ಗುರು ತೋಂಟದಾರ್ಯ ಮಠದವರು ಹೊರತರುತ್ತಿರುವ ''ವೀರಶೈವ ಪುಣ್ಯ ಪುರುಷರ ಮಾಲಿಕೆ'' ಯಲ್ಲಿ ನನ್ನ ತಂದೆಯವರ ಜೀವನ ಚರಿತ್ರೆಯನ್ನು ಬರೆಯಬೇಕೆಂದು ನನಗೆ ತಿಳಿಸಿದ್ದರು. ದಿವಂಗತ ಚನ್ನಬಸವನಗೌಡರ ಜೀವನ ಚರಿತ್ರೆ ಪ್ರಕಟವಾದ ಆಜುಬಾಜಿನಲ್ಲಿ ಇವರ ಜೀವನ ಚರಿತ್ರೆಯನ್ನು ಪ್ರಕಟಿಸಬೇಕೆಂದು ಅವರು ಯೋಚಿಸಿದ್ದರು. ಆದರೆ, ನನ್ನ ಬರಹ ವಸ್ತುನಿಷ್ಠವಾಗಿರಲಾರದು ಎಂದು ನಮ್ಮ ತಂದೆಯವರ ಕಿರಿಯ ಗೆಳೆಯರು ಹಾಗೂ ಖ್ಯಾತ ಲೇಖಕರಾದ ಧ್ರುವನಾರಾಯಣರವರಿಗೆ ಈ ಕೆಲಸವನ್ನು ಶ್ರೀ ಮಠದ ಒಪ್ಪಿಗೆ ಪಡೆದು ವಹಿಸಿಕೊಡಲಾಯಿತು.

ದಕ್ಷಿಣಾಮೂರ್ತಿಯವರ ವಿದ್ಯಾಸಂಸ್ಥೆಯ ಬಗ್ಗೆ ನಾನು ಎಂದೂ ಪ್ರೋತ್ಸಾಹ ಕೊಟ್ಟಿಲ್ಲ. ಅವರ ಸಂಸ್ಥೆಯ ಅವ್ಯವಹಾರವನ್ನು ತನಿಖೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಶಿಕ್ಷಣ ಸಚಿವರಾದ ಗೋವಿಂದೇಗೌಡರಿಗೆ ನಾನು ಅನೇಕ ಬಾರಿ ಪತ್ರ ಬರೆದಿದ್ದೇನೆ. ಎಂ.ಎಂ. ಸದ್ಯೋಜಾತ, ಮಾಜಿ ವಿದ್ಯಾ ಸಚಿವರು, ವೀರಭದ್ರಪ್ಪ, ಮಾಜಿ ಶಾಸಕರು ಮತ್ತಿತರ ಹಿರಿಯರನ್ನು ಕರೆದುಕೊಂಡು ಆ ಸಂಸ್ಥೆಯ ಬಗ್ಗೆ ಕ್ರಮ ಜರುಗಿಸಬೇಕೆಂದು ಶಿಕ್ಷಣ ಸಚಿವರಿಗೆ ಮನವಿ ಮಾಡಿಕೊಂಡಿದ್ದೇನೆ. ಹೀಗಿರುವಾಗ, ನೀವು ನಿಜ ಸಂಗತಿಯನ್ನು ಅರಿಯದೇ ನಿಮ್ಮ ಹೊಟ್ಟೆಕಿಚ್ಚು ಪ್ರಕಟ ಮಾಡಿದ್ದೀರಿ. ಅಷ್ಟೇ ಅಲ್ಲದೆ ಉಜ್ಜಯಿನಿ ಪೀಠಕ್ಕೆ ದಕ್ಷಿಣಾಮೂರ್ತಿ ತನ್ನ ಮಗನನ್ನು ಉತ್ತರಾಧಿಕಾರಿಯಾಗಿ ಮಾಡಬೇಕೆಂದು ಹುನ್ನಾರ ನಡೆಸಿದ್ದಾಗ ನಾನು ಅದನ್ನು ತಡೆದು ಈಗ ಈ ಪೀಠವನ್ನು ಅಲಂಕರಿಸಿರುವ ಜಗದ್ಗುರುಗಳವರನ್ನು ಪೀಠಸ್ಥರನ್ನಾಗಿಸಲು ಹಾಗೂ ಆ ಸಮಾರಂಭದ ಉದ್ಘಾಟಕರನ್ನಾಗಿ ಅಂದಿನ ಮುಖ್ಯಮಂತ್ರಿಗಳಾದ ಹೆಚ್. ಡಿ. ದೇವೇಗೌಡರವರನ್ನು ಕರೆದುಕೊಂಡು ಹೋಗಿದ್ದೆ. ವಸ್ತುಸ್ಥಿತಿ ಹೀಗಿರುವಾಗ ನಾನು ದಕ್ಷಿಣಾಮೂರ್ತಿ ಅವರಿಗೆ ಸಹಾಯ ಮಾಡುತ್ತಿದ್ದೇನೆ ಎಂದು ಬರೆಯುವ ನಿಮ್ಮ ಬಾಲಿಶತನಕ್ಕೆ ಮರುಗುತ್ತೇನೆ.

ಜಿಂದಲ್ ಕಾರ್ಖಾನೆಗೆ ಅರ್ಜಿಯನ್ನು ಸಲ್ಲಿಸಿರುವ ಎಲ್ಲಾ ನಿರುದ್ಯೋಗಿಗಳ ಮನವಿಯನ್ನು ನಾನು ಶಿಫಾರಸ್ಸು ಮಾಡಿದ್ದೇನೆ. ಶಿಫಾರಸ್ಸು ಮಾಡಿದ ಎಲ್ಲಾ ಮನವಿಗಳ ನಕಲನ್ನು ಸಂಬಂಧಿಸಿದ ಎಲ್ಲಾ ಅರ್ಜಿದಾರ

**ಕಳೆದ ಸಂಚಿಕೆಯಲ್ಲಿ ಪ್ರಕಟವಾದ ''ಮಂತ್ರಿ ಎಂ.ಪಿ. ಪ್ರಕಾಶರ ಕುಟುಂಬ ಕಲ್ಯಾಣ ನೀತಿ'' ಲೇಖನಕ್ಕೆ ಪ್ರತಿಕ್ರಿಯಿಸಿರುವ ಎಂ.ಪಿ. ಪ್ರಕಾಶರು ಈ ವರದಿಯಲ್ಲಿ ಸಂಪಾದಕರ ಸಣ್ಣತನ, ಸ್ವಾರ್ಥ ಇತ್ಯಾದಿಗಳನ್ನು ಸಂಶೋಧಿಸುತ್ತ ತಮ್ಮ ಹಾಗೂ ತಮ್ಮ ಕುಟುಂಬದವರ 'ಅರ್ಹತೆ'ಗಳನ್ನು ಕೊಚ್ಚಿಕೊಂಡಿದ್ದಾರೆ. ಅವರು ನೀಡಿದ ಈ ಅತಿ ಜಾಣತನದ ಸ್ಪಷ್ಟೀಕರಣ ನಿಜಕ್ಕೂ ಅರ್ಹತೆಯುಳ್ಳ (ಆದರೆ ಮಂತ್ರಿವರ್ಯರ ಕುಟುಂಬ ವರ್ಗಕ್ಕೆ ಸೇರದ!) ಲಕ್ಷಾಂತರ ಅವಕಾಶ ವಂಚಿತ ಯುವಕ-ಯುವತಿಯರಿಗೆ ಅವಮಾನ ಮಾಡುವಂತಿದೆ. ಹಾಗೆಯೇ ಕಳೆದ ತಿಂಗಳು ಪ್ರಕಟವಾದ ಲೇಖನ ಹಾಗೂ ಈಗಿನ ಅವರ ಸ್ಪಷ್ಟೀಕರಣ ಎರಡನ್ನೂ ಗಮನಿಸಿದ ಓದುಗರೇ ಈ ಮಾಜಿ ಸಮಾಜವಾದಿಯ 'ಯೋಗ್ಯತೆ'ಯನ್ನು ನಿರ್ಣಯಿಸಬಲ್ಲರಾದ್ದರಿಂದ ಹೆಚ್ಚೇನನ್ನೂ ಹೇಳುವ ಅಗತ್ಯವಿಲ್ಲ.**

ರಿಗೂ ಕಳುಹಿಸಿ ಕೊಡಲಾಗಿದೆ. ಹೀಗೆ ನಿರುದ್ಯೋಗಿಗಳಿಗೆ ಉದ್ಯೋಗ ದೊರಕಿಸಿ ಕೊಡಲು ನಾನು ಮಾಡಿದ ಪ್ರಯತ್ನವೇ ನಿಮ್ಮ ಕಣ್ಣಿಗೆ ವಿಕೃತವಾಗಿ ಕಂಡರೆ ಅದಕ್ಕೆ ಉಪಾಯ ವಿಲ್ಲ. ಎಲ್ಲಾ ಅರ್ಹತೆ ಪಡೆದ ನನ್ನ ಆಪ್ತ ಕಾರ್ಯದರ್ಶಿಯವರ ಮಗಳಿಗೆ ಆ ಕಾರ್ಖಾನೆಯಲ್ಲಿ ಉದ್ಯೋಗ ದೊರೆತರೆ ಅದನ್ನು ಅಪರಾಧವೆಂದು ಭಾವಿಸುತ್ತಿದ್ದೀರಿ. ನಿಮ್ಮ ಲೇಖನದಲ್ಲಿ ಈ ಆಪ್ತ ಕಾರ್ಯದರ್ಶಿಯವರು ದಕ್ಷರಿದ್ದು, ನಮ್ಮ ಕುಟುಂಬದವರ ಹಸ್ತಕ್ಷೇಪಕ್ಕೆ ನೊಂದು ರಾಜಿನಾಮೆ ಕೊಡಲು ಹೋಗಿದ್ದರು ಎಂಬ ಕಪೋಲ ಕಲ್ಪಿತ ಕತೆ ಬರೆದಿದ್ದೀರಿ. ಹಾಗೆ ಅವರ ಮಗಳಿಗೆ ಕೆಲಸ ಸಿಕ್ಕಿದೆಯೆಂದು ವಿರೋಧಾಭಾಸದ ಲೇಖನ ಬರೆದಿದ್ದೀರಿ.

ಹಾಗೆಯೇ ನನ್ನ ಮಗಳು ಮಾಯಾರಾವ್ ನೃತ್ಯ ತಂಡದಲ್ಲಿ ವಿದೇಶಕ್ಕೆ ಹೋಗುತ್ತಿದ್ದಾರೆಂದೂ, ಇದು ಮಹಾ ಅಪರಾಧವೆಂದು ಬರೆದಿದ್ದೀರಿ. ನಾನು ಅಧಿಕಾರದಲ್ಲಿ ಇಲ್ಲದಿದ್ದ ಸಮಯದಲ್ಲೂ ಸಹ ಅನೇಕ ದೇಶ ವಿದೇಶಗಳಿಗೆ ಈ ನೃತ್ಯ ತಂಡದ ಮೂಲಕ ಆ ತಂಡ ಪ್ರದರ್ಶನವನ್ನು ಕೊಟ್ಟಿದೆ. ಹಾಗೆಯೇ ತನ್ನ ಪ್ರತಿಭೆಯಿಂದ ಅನೇಕ ನೃತ್ಯ ರೂಪಕಗಳನ್ನು ಸಂಯೋಜಿಸಿ ನಾಡಿನ ಉದ್ದಗಲಗಳಲ್ಲಿ ಪ್ರದರ್ಶನ ಮಾಡಿದ್ದಾಳೆ. ಮಂತ್ರಿಯವರ ಮಗಳು ಎಂಬ ಕಾರಣಕ್ಕೆ ಅವಳ ಪ್ರತಿಭೆಯನ್ನು

## ರೈತ ವಿರೋಧಿ Empty ಪ್ರಕಾಶ್!

ಬೃಹತ್ ಕಾರ್ಖಾನೆ ಸ್ಥಾಪಿಸಿ ಲಕ್ಷಾಂತರ ಜನರಿಗೆ ಉದ್ಯೋಗ ಒದಗಿಸುತ್ತೇವೆ ಎಂದು ಭ್ರಮೆ ಹುಟ್ಟಿಸಿ ತೋರಣಗಲ್ಲು ಭಾಗದ ರೈತಾಪಿ ಜನರಿಂದ ಸಾವಿರಾರು ಎಕರೆ ಭೂಮಿ ವಶಪಡಿಸಿಕೊಂಡ ಸರ್ಕಾರ ಈಗ ಭೂಮಿಯನ್ನು ಖಾಸಗಿ ಕಾರ್ಖಾನೆಗಳ ಪಾಲಾಗಿಸಿದೆ. ಕೆಲವೇ ನೂರು ಜನರಿಗೆ ಉದ್ಯೋಗ ಒದಗಿಸಿರುವ ಜಿಂದಲ್ ಕಾರ್ಖಾನೆಯಿಂದ ಪ್ರಕಾಶರಂತಹ ಸೋಗಲಾಡಿ ರಾಜಕಾರಣಿಗಳು ತಮಗೆ ಬೇಕಾದವರಿಗೆ ಉದ್ಯೋಗ ಕೊಡಿಸಲು ಮಾತ್ರ ಪ್ರಯೋಜನವಾಗಿದೆ.

ಈ ಹಿಂದೆ ಜಿಂದಲ್ ಕಾರ್ಖಾನೆ ವಿರುದ್ಧ ಪ್ರತಿಭಟಿಸಿದ ಅಮಾಯಕ ರೈತರ ಮೇಲೆ ಕಾರ್ಖಾನೆಯವರ ಚಿತಾವಣಿಯಿಂದ ಹಲವಾರು ಕ್ರಿಮಿನಲ್ ಕೇಸುಗಳನ್ನು ಹಾಕಿ ಅವರ ಬದುಕನ್ನು ಅಯೋಮಯಗೊಳಿಸಲಾಗಿದೆ. ಜಿಲ್ಲಾ ಉಸ್ತುವಾರಿ ಮಂತ್ರಿಗಳೂ ಆದ ಎಂ.ಪಿ. ಪ್ರಕಾಶರು ಇತ್ತ ಬಂದಾಗಲೆಲ್ಲಾ ''ನಾನು ನಿಮ್ಮ ವಿಷಯವನ್ನು ಕ್ಯಾಬಿನೆಟ್ ಮೀಟಿಂಗ್‌ನಲ್ಲಿರಿಸಿ ಕೇಸ್‌ಗಳನ್ನು ಹಿಂತೆಗೆದುಕೊಳ್ಳುವಂತೆ ಮಾಡ್ತೇನೆ'' ಎಂದು ಭರವಸೆ ಉದುರಿಸುತ್ತಾರೆ. ಆದರೆ ಕಾರ್ಖಾನೆಯವರೊಂದಿಗೆ ಶಾಮೀಲಾಗಿರುವ ಪ್ರಕಾಶರಂತಹ ನಾಟಕಕಾರ ಮಂತ್ರಿಗಳಿಂದ ತಮಗೆ ಒಳಿತಾಗುವುದೆಂಬ ಭರವಸೆಯನ್ನು ರೈತರು ಕಳೆದುಕೊಂಡಿದ್ದಾರೆ.

ಎಂ.ಪಿ. ಪ್ರಕಾಶರು ತಮ್ಮ ಇಂಥ ಸುಳ್ಳು ಭರವಸೆಗಳಿಂದಾಗಿ ಬಳ್ಳಾರಿ ಜಿಲ್ಲೆಯಲ್ಲಿ Empty ಪ್ರಕಾಶ್ ಎಂದೇ ಖ್ಯಾತರಾಗಿದ್ದಾರೆ.

○ **ಎಂ. ಖಾಜಾ ಹುಸೇನ್, ಹೊಸಪೇಟೆ**

## ತಂದೆಯ ಕರ್ತವ್ಯ

**ಸಚಿವ ಎಂ.ಪಿ. ಪ್ರಕಾಶರ ಆಪ್ತ ಕಾರ್ಯದರ್ಶಿ ಕೊಟ್ರಪ್ಪನವರನ್ನು ''ಪ್ರಖರ ಪ್ರಾಮಾಣಿಕತೆ'', ''ಹಸ್ತಕ್ಷೇಪಕ್ಕೆ ಬೇಸತ್ತು ರಾಜಿನಾಮೆ'' ಹೀಗೆ ಹಲವು ಭಿನ್ನ ಮುಖಗಳಿಂದ ಗುರುತಿಸಿರುವುದು ಹೆಮ್ಮೆಯ ವಿಷಯ. ಆದರೆ ಕುಟುಂಬ ಕಲ್ಯಾಣ ನೀತಿಗೆ ಬಲಿಯಾಗಿರುವುದು ದುರಂತ ಎಂಬುದು ಅಪ್ಪಟ ಸುಳ್ಳು.**

**ಕೊಟ್ರಪ್ಪನವರ ಮಗಳು ಓದಿದ್ದು ಟೆಲಿಕಮ್ಯೂನಿಕೇಷನ್‌ನಲ್ಲಿ ಡಿಪ್ಲೊಮಾ ಆದರೂ ಜಿಂದಲ್‌ನಲ್ಲಿ ಸಿಕ್ಕಿರುವುದು ಯಕಃಶ್ಚಿತ ಗುಮಾಸ್ತಗಿರಿ ಕೆಲಸ.**

**ಅಳಿಯನ ನಿರುದ್ಯೋಗ ಮಗಳ ಸ್ವಾಭಿಮಾನದ ನಡುವೆ ಮೊಮ್ಮಕ್ಕಳಿಬ್ಬರೂ ತುತ್ತು ಅನ್ನಕ್ಕಾಗಿ ಪರದಾಡುವ ಸ್ಥಿತಿ ಇತ್ತು. ಅವರ ಕುಟುಂಬ ದುರಂತಕ್ಕೀಡಾಗುವ (೩ ಬಾರಿ ಆತ್ಮಹತ್ಯೆಯತ್ನ) ಸಂದರ್ಭದಲ್ಲಿ ಕೊಟ್ರಪ್ಪನವರು ತಮ್ಮ ಸೇವಾ ಅವಧಿಯಲ್ಲಿ ಯಾರ ಬಳಿಯಲ್ಲೂ ಕೈಚಾಚದ ತಮ್ಮ ಸ್ವಾಭಿಮಾನವನ್ನು ಧಿಕ್ಕರಿಸಿ, ಮಗಳನ್ನು ಅನಿವಾರ್ಯವಾಗಿ ಜಿಂದಲ್ ಕಾರ್ಖಾನೆ ಸೇರಿಸಿದ್ದನ್ನು ಬಿಟ್ಟರೆ ಅವರ 'ಕುಟುಂಬ ಕಲ್ಯಾಣ ನೀತಿ' ಬಗ್ಗೆ ಯಾವುದೇ ರೀತಿಯ ತನಿಖೆ ನಡೆದರೂ ಸ್ವಾಗತವಿದೆ.**

**ಅಳಿಯ ಈಗಲೂ ನಿರುದ್ಯೋಗಿಯಾಗಿದ್ದು ಮಗಳ ಹಾಗೂ ಆಕೆಯ ಸಣ್ಣ ಮಕ್ಕಳಿಗೆ ಎರಡು ಹೊತ್ತಿನ ಊಟಕ್ಕಾಗಿ ತಂದೆಯಾದವ ತನ್ನ ಕರ್ತವ್ಯ ನಿರ್ವಹಿಸಿದ್ದನ್ನೇ ಪ್ರಶ್ನಿಸಿ ಸಮಾಜದ ಕಟಕಟೆಯಲ್ಲಿ ನಿಲ್ಲಿಸಿರುವಂತಹ ದುರಂತ ಇನ್ನೊಂದಿರಲಾರದೆಂದೇ ನನ್ನ ಅಭಿಪ್ರಾಯ.**

**ಭ್ರಷ್ಟಾಚಾರದ ಕಬಂಧ ಬಾಹುಗಳು ರಾಜ್ಯಾದ್ಯಂತ ವ್ಯಾಪಿಸಿರುವಾಗ ಸಣ್ಣ ವಿಷಯವನ್ನು ದೊಡ್ಡದಾಗಿ ಚಿತ್ರಿಸುವುದನ್ನು ಕೈಬಿಟ್ಟು ಲೇಖಕರು ತಮ್ಮ ಬರವಣಿಗೆಯಲ್ಲಿ ವಿಶಾಲತೆಯನ್ನು ಬೆಳೆಸಿಕೊಂಡು ಸಂಚಿಕೆಯ ಹೆಸರನ್ನು ಸಾರ್ಥಕ ಪಡಿಸಿಕೊಳ್ಳಲಿ ಎಂದು ಆಶಿಸುವೆ.**

○ **ಮಲ್ಲಿಕಾರ್ಜುನ ಕನ್ನಿಹಳ್ಳಿ**
ಪ್ರಜಾವಾಣಿ ವರದಿಗಾರರು, ಹರಪನಹಳ್ಳಿ

### ಅಭಿನಂದನೆಗಳು

**ಹೇಗಿದ್ದರೂ ಅಧಿಕಾರವನ್ನಷ್ಟೇ ಓಲೈಸುವ ಈ ದಿನಮಾನಗಳಲ್ಲಿ ವಾಸ್ತವದ ಕಡೆ ಬೆರಳು ತೋರಿಸುವ ಲೇಖನ ಪ್ರಕಟಿಸುವ ಧೈರ್ಯ ಮಾಡಿದ್ದಕ್ಕೆ ವಿಶೇಷ ಅಭಿನಂದನೆಗಳಿಗೆ ಪಾತ್ರರಾಗಿದ್ದೀರಿ.**

**– ಮೇಟಿ ಕೊಟ್ರಪ್ಪ**, ಬಸರಕೋಡು

### ಬುದ್ಧಿ ಕಲಿಸಬೇಕು

ಇಂಥ ಗ್ರಾಮೀಣಾಭಿವೃದ್ಧಿ ಮಂತ್ರಿಗಳಿರುವುದರಿಂದಲೇ ನಮ್ಮ ಹಳ್ಳಿಗಳು ಇನ್ನೂ ಅದೇ ಸ್ಥಿತಿಯಲ್ಲಿವೆ. ಇಂತಹ ರಾಜಕಾರಣಿಗಳಿಗೆ ಬುದ್ಧಿ ಕಲಿಸುವವರೆಗೂ ನಮ್ಮ ದೇಶ ಸುಧಾರಿಸಲು ಸಾಧ್ಯವಿಲ್ಲ

**– ಸ್ಫೂರ್ತಿ ಬೆಟ್ಟದೂರು**, ಮಾನ್ವಿ

## ನಬಿ ಕೂಡಾ ಭ್ರಷ್ಟರೇ!

ನವೆಂಬರ್ ತಿಂಗಳ 'ಬಿಸಿಲ ಬದುಕು' ಈಗಷ್ಟೇ ಓದಿದೆ. ಶ್ರೀ ಎಂ.ಪಿ. ಪ್ರಕಾಶರನ್ನು ಕುರಿತು ಬರೆದ ಲೇಖನದಲ್ಲಿ ಪ್ರಕಾಶರನ್ನು ಹೀಗಳೆಯುವ ನೆಪದಲ್ಲಿ ಎನ್.ಎಂ. ನಬಿ ಅವರನ್ನು "ಅಲ್ಪ ಸಂಖ್ಯಾತ ಜನಾಂಗದ ಕ್ರಿಯಾಶೀಲ ರಾಜಕಾರಣಿ" ಎಂದಿದ್ದೀರಿ. ನಬಿಯವರ ಕೂಡ್ಲಿಗಿ ಕ್ಷೇತ್ರದ ಮತದಾರನಾದ ನಾನು ಬಲ್ಲಂತೆ ನಬಿಸಾಬ್‌ರು ಕ್ರಿಯಾಶೀಲ ರಾಜಕಾರಣಿಗಳೇನೂ ಅಲ್ಲ. ಇವರೂ ಕೂಡ ಥೇಟ್ ಭ್ರಷ್ಟರೇ!! ಆದ್ದರಿಂದ ಒಬ್ಬ ರಾಜಕಾರಣಿಯನ್ನು ತೆಗಳಲು ಹೋಗಿ ಮತ್ತೊಬ್ಬ ರಾಜಕಾರಣಿಯ ಬಗ್ಗೆ ಈ ರೀತಿ ಮೆಚ್ಚುಗೆಯ ಮಾತನಾಡುವುದರ ಹಿಂದಿನ 'ಲಾಭಾಕಾಂಕ್ಷೆ' ನನ್ನಂಥವರಿಗೆ ಅನುಮಾನ ಹುಟ್ಟಿಸಿದೆ.

**– ಹುರುಕಡ್ಲಿ ಶಿವಕುಮಾರ,**
ಬಾಚಿಗೊಂಡನಹಳ್ಳಿ

ಹೀಗಳೆಯಬೇಕೆ? ಹಾಗೆಯೇ ಇನ್ನೊಬ್ಬ ಮಗಳು ಕನ್ನಡ ವಿಶ್ವವಿದ್ಯಾನಿಲಯದಲ್ಲಿ ನಿರುಪದ್ರವಿಯಾಗಿ ಸರಳವಾಗಿ ತನ್ನ ಪಿ.ಹೆಚ್.ಡಿ. ಯನ್ನು ಅಧ್ಯಯನ ಮಾಡುತ್ತ, ಎರಡು ವರ್ಷಗಳ ನಂತರ ಎಂ.ಫಿಲ್. ಮುಗಿಸಿದ್ದಾಳೆ. ಅವಳು ನಮ್ಮ ಜಿಲ್ಲೆಯ ಅಪ್ರಕಟಿತ ಶಿಲಾ ಶಾಸನಗಳ ಬಗ್ಗೆ, ವಿಜಯನಗರ ಹಾಗೂ ಹಡಗಲಿ ಬಗ್ಗೆ, ಚಾಲುಕ್ಯರ ದೇವಾಲಯಗಳ ಬಗ್ಗೆ ಬರೆದ ಲೇಖನಗಳು ಪ್ರಕಟವಾಗಿವೆ. ಹಾಗೆಯೇ ಇತಿಹಾಸ ಕಾಂಗ್ರೆಸ್ ಅಧಿವೇಶನಗಳಲ್ಲಿ ಅವಳು ಕಳೆದ ಮೂರು ವರ್ಷದಿಂದ ಆಹ್ವಾನಿತ ಸದಸ್ಯಳಾಗಿ ಪ್ರಬಂಧ ಮಂಡಿಸಿದ್ದಾಳೆ. ಹೀಗೆ ನಾನು ಅನೇಕ ವಿಷಯಗಳನ್ನು ಬರೆಯಬಹುದು. ಈ ನನ್ನ ಉತ್ತರವನ್ನು ನೀವು ಪ್ರಕಟಿಸುತ್ತೀರೋ, ಇಲ್ಲವೋ ಎನ್ನುವ ಬಗ್ಗೆ ನನಗೆ ಸಂಶಯವಿದೆ. ಒಟ್ಟಿನಲ್ಲಿ ಈ ಲೇಖನ ಸತ್ಯಕ್ಕೆ ದೂರವಾದ, ಅತಿರಂಜಿತವಾದ, ವಸ್ತುನಿಷ್ಠವಲ್ಲದ, ನನ್ನನ್ನು ಹಾಗೂ ನನ್ನ ಕುಟುಂಬದವರ ತೇಜೋವಧೆ ಮಾಡಲು ಮಾತ್ರ ಬರೆದ ಲೇಖನವಾಗಿದೆ. ವಸ್ತುಸ್ಥಿತಿಯನ್ನು ವಿವರಿಸಿ ಬರೆದ ಈ ಉತ್ತರವನ್ನು ಪ್ರಕಟಿಸುವಿರೆಂದು ನಂಬಿರುವೆ.

## ದೀಪಾವಳಿ ವಿಶೇಷಾಂಕಗಳು

# ಹೇಗಿವೆ? ಹೇಗಿರಬೇಕು?

ಪ್ರತಿ ಸಲದಂತೆ ಈ ವರ್ಷವೂ ನಾಡಿನ ಹಲವಾರು ಪ್ರಮುಖ ಪತ್ರಿಕೆಗಳು ದೀಪಾವಳಿ ವಿಶೇಷಾಂಕಗಳನ್ನು ಹೊರ ತಂದಿವೆ. ನೀವು ಈ ಬಾರಿ ಯಾವ ವಿಶೇಷಾಂಕ ಕೊಂಡಿದ್ದೀರಿ? ಈ ವಿಶೇಷಾಂಕವನ್ನು ಏಕೆ ಕೊಂಡುಕೊಂಡಿರಿ?

ನೀವು ಕೊಂಡ ವಿಶೇಷಾಂಕದ ಬೆಲೆ ಬಗ್ಗೆ ನಿಮ್ಮ ಅನ್ನಿಸಿಕೆಯೇನು? ಸಂಪೂರ್ಣವಾಗಿ ಓದಿದ್ದೀರಾ?

ವಿಶೇಷಾಂಕದ ಬಗ್ಗೆ ನಿಮ್ಮ ಕುಟುಂಬದ ಸದಸ್ಯರ ಅಭಿಪ್ರಾಯಗಳೇನು?

ನಿಮಗೆ ಯಾವ ಅಂಕಣ, ಕಥೆ, ನಾಟಕ, ಲೇಖನ.... ಹಿಡಿಸಿದವು?

ಪ್ರತಿ ವರ್ಷದಂತೆ ಈ ವರ್ಷವೂ ಅದೇ ಹಳೆಯ ಲೇಖಕರ ಬರಹಗಳಿವೆಯೆಂದು ಅಸಮಾಧಾನವಾಯಿತೇ?

ವಿವಿಧ ವಿಶೇಷಾಂಕಗಳ ಮುದ್ರಣ, ವಿನ್ಯಾಸ ನಿಮಗೆ ಮುದ ನೀಡಿವೆಯೇ?

ನಿಮ್ಮ ದೃಷ್ಟಿಯಲ್ಲಿ 'ಮಾದರಿ' ವಿಶೇಷಾಂಕ ಹೇಗಿರಬೇಕು?

ಈ ಮೇಲಿನ ಪ್ರಶ್ನೆಗಳ ಬಗ್ಗೆ ಶ್ರದ್ಧೆಯಿಂದ ಆಲೋಚಿಸಿ ನಿಮ್ಮ ಗಂಭೀರ ಅಭಿಪ್ರಾಯವನ್ನು ಬರೆದು ನಮಗೆ ಕಳುಹಿಸಿಕೊಡಿ. ಮುಂದಿನ ಸಂಚಿಕೆಯಲ್ಲಿ ನಿಮ್ಮ ಅಭಿಪ್ರಾಯಗಳು ಪ್ರಕಟಗೊಳ್ಳುತ್ತದೆ. ಹಾಗೆಯೇ ನಿಮ್ಮದೊಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಕಳಿಸಲು ಮರೆಯಬೇಡಿ.

ಮೊದಲು ತಲುಪುವ ಬರಹಗಳು ಆದ್ಯತೆಯ ಮೇಲೆ ಪ್ರಕಟಗೊಳ್ಳುವುದರಿಂದ ನಿಮ್ಮ ಅಭಿಪ್ರಾಯ ರವಾನಿಸಲು ವಿಳಂಬಿಸಬೇಡಿ.

ವಿಳಾಸ :
ಸಂಪಾದಕರು,
ಬಿಸಿಲ ಬದುಕು,
ಅಂಚೆ ಪೆಟ್ಟಿಗೆ 7951, ಬಸವೇಶ್ವರ ನಗರ,
ಬೆಂಗಳೂರು - 560 079

# ಸಿಹಿಮೂತ್ರರೋಗ : ಲಕ್ಷಣ–ಚಿಕಿತ್ಸೆ

ಇದು ಅನುವಂಶಿಕ ರೋಗ. ತಂದೆ ಅಥವಾ ತಾಯಿಗೆ ಈ ರೋಗವಿದ್ದರೆ ಶೇ ೫೦ ಮಕ್ಕಳಿಗೆ ಬರುತ್ತದೆ. ಇಬ್ಬರಿಗೂ ಈ ಕಾಯಿಲೆಯಿದ್ದರೆ ಶೇ. ೧೦೦ ಕಾಣಿಸಿಕೊಳ್ಳುತ್ತದೆ. ಸ್ಥೂಲಕಾಯರಾದ, ಸಿಹಿ ಮತ್ತು ಕೊಬ್ಬುಗಳನ್ನು ಅತಿಯಾಗಿ ಸೇವಿಸುವವರಲ್ಲಿ ಈ ರೋಗ ಬೇಗ ಕಾಣಿಸಿಕೊಳ್ಳುತ್ತದೆ.

ಮೂತ್ರದಲ್ಲಿ ಸಕ್ಕರೆ ವಿಸರ್ಜನೆಯಾಗುವುದು ಮುಖ್ಯ ಅಂಶವಾಗಿರುತ್ತದೆ. ಆದರೆ ದೇಹದ ಜೀವವಸ್ತುಕರಣದ ಏರುಪೇರಾಗುವಿಕೆಯೇ ಈ ಕಾಯಿಲೆಗೆ ಮೂಲ. ಇದರಿಂದಾಗಿ ಮೂತ್ರದಲ್ಲಲ್ಲದೇ ರಕ್ತದಲ್ಲಿಯೂ ಸಕ್ಕರೆಯ ಅಂಶ ಏರುತ್ತದೆ. ರಕ್ತದಲ್ಲಿ ಗ್ಲುಕೋಸ್ ಅಂಶ ನಿರ್ದಿಷ್ಟ ಪ್ರಮಾಣದಲ್ಲಿ ಮಾತ್ರ ಇರಬೇಕು. ಆ ಮಟ್ಟಕ್ಕಿಂತ ಏರಿಕೆಯಾದರೆ ಅದು ಸಿಹಿಮೂತ್ರ ರೋಗ ಎನಿಸುತ್ತದೆ.

ನಾವು ಸೇವಿಸುವ ಆಹಾರದಲ್ಲಿ ಪಿಷ್ಟ, ಸಸಾರಜನಕ ಹಾಗೂ ಕೊಬ್ಬುಗಳಿರುತ್ತವೆ. ಪಿಷ್ಟವು ಕರುಳುಗಳಲ್ಲಿ ಪಚನವಾಗಿ ಗ್ಲುಕೋಸ್ ರೂಪದಲ್ಲಿ ಪೋರ್ಟಲ್ ಅಭಿಧಮನಿಯ ಮೂಲಕ ಯಕೃತ್ತಿಗೆ ಹೋಗುತ್ತದೆ. ಯಕೃತ್ತಿನ ಜೀವಕೋಶಗಳು ಗ್ಲುಕೋಸ್‌ನ್ನು ಗ್ಲೈಕೋಜನ್ ಆಗಿ ಪರಿವರ್ತಿಸಿ ತಮ್ಮಲ್ಲಿ ಶೇಖರಿಸಿಟ್ಟುಕೊಳ್ಳುತ್ತವೆ. ಯಕೃತ್ತಿನಿಂದ ಹೊರ ಹೋಗುವ ರಕ್ತದಲ್ಲಿ ಇತರ ಅಂಗಾಂಶಗಳಿಗೆ ಎಷ್ಟು ಬೇಕೋ ಅಷ್ಟು ಮಾತ್ರ ಗ್ಲುಕೋಸ್ ಇರುತ್ತದೆ. ಆಹಾರದ ಸಸಾರಜನಕಗಳು ಅಮೈನೋ ಆಮ್ಲಗಳಾಗಿ ಪರಿವರ್ತಿಸಿಕೊಂಡು ಯಕೃತ್ತನ್ನು ಸೇರುವವು. ಕೊಬ್ಬು ದುಗ್ಧನಾಳಗಳ ಮೂಲಕ ಕೊಬ್ಬಿನ ಅಂಗಾಂಶಗಳಲ್ಲಿ ನೆಲೆಗೊಳ್ಳುತ್ತದೆ. ದೇಹದಲ್ಲಿರುವ ಎಲ್ಲ ಅಂಗ, ಅಂಗಾಂಶ ಮತ್ತು ಜೀವಕಣಗಳು ರಕ್ತದಲ್ಲಿರುವ ಗ್ಲುಕೋಸ್‌ನ್ನು ಹೀರಿಕೊಂಡು ತಮ್ಮ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳುತ್ತವೆ. ರಕ್ತದಲ್ಲಿ ಗ್ಲುಕೋಸ್ ಅಂಶ ಕಡಿಮೆಯಾದಾಗ ಯಕೃತ್ತಿನಲ್ಲಿ ಶೇಖರಗೊಂಡಿರುವ ಗ್ಲೈಕೋಜನ್, ಗ್ಲುಕೋಸ್ ಆಗಿ ಪರಿವರ್ತನೆಗೊಂಡು ರಕ್ತಪರಿಚಲನೆಯಲ್ಲಿ ಸೇರುತ್ತದೆ. ಹೀಗೆ ಜೀವಕಣಗಳು ಗ್ಲುಕೋಸ್‌ನ್ನು ಹೀರಿಕೊಳ್ಳುವುದಕ್ಕೂ, ಅದನ್ನು ಶೇಖರ ಮಾಡಿಕೊಳ್ಳುವುದಕ್ಕೂ ವಿಶಿಷ್ಟ ಹಾರ್ಮೋನ್‌ನ ಅಗತ್ಯವಿದೆ. ಈ ಹಾರ್ಮೋನಿಗೆ 'ಇನ್‌ಸ್ಸುಲಿನ್' ಎನ್ನುತ್ತಾರೆ.

ಸಿಹಿಮೂತ್ರರೋಗಿಗಳಲ್ಲಿ ಮೇದೋಜೀರಕದಿಂದ ಸಾಕಷ್ಟು ಇನ್‌ಸ್ಸುಲಿನ್ ಉತ್ಪತ್ತಿಯಾಗುವುದಿಲ್ಲ. ಇನ್‌ಸ್ಸುಲಿನ್ ಕೊರತೆಯಿರುವುದರಿಂದ ರಕ್ತದಲ್ಲಿರುವ ಗ್ಲುಕೋಸ್ ಅಂಗಾಂಶಗಳಿಂದ ಸರಿಯಾದ ಪ್ರಮಾಣದಲ್ಲಿ ಹೀರಿಕೊಳ್ಳಲ್ಪಡುವುದಿಲ್ಲ. ಇದರಿಂದಾಗಿ ರಕ್ತದಲ್ಲಿರುವ ಗ್ಲುಕೋಸ್ ಪ್ರಮಾಣ ಏರುತ್ತಾ ಹೋಗುತ್ತದೆ. ರಕ್ತಕ್ಕೆ ಅನಗತ್ಯವಾದ ಅಂಶಗಳೆಲ್ಲ ಮೂತ್ರದಲ್ಲಿ ವಿಸರ್ಜನೆ ಆಗುವುವು. ಮೂತ್ರದಲ್ಲಿ ಹೀಗೆ ಗ್ಲುಕೋಸ್ ಕಾಣಿಸಿಕೊಳ್ಳುವುದು. ಈ ರೀತಿ ರಕ್ತ ಮತ್ತು ಮೂತ್ರದಲ್ಲಿ ಹೆಚ್ಚು ಗ್ಲುಕೋಸ್ ಕಾಣಿಸಿಕೊಳ್ಳುವುದು. ರೋಗ ಇಷ್ಟಕ್ಕೇ ನಿಲ್ಲುವುದಿಲ್ಲ. ಅಂಗಾಂಶಗಳಿಂದ ಒಂದೇ ಸಮನೆ ಗ್ಲುಕೋಸ್‌ಗೆ ಬೇಡಿಕೆ ಬರುವುದರಿಂದ ದೇಹದಲ್ಲಿರುವ ಸಸಾರಜನಕ ಹಾಗೂ ಕೊಬ್ಬುಗಳು ಗ್ಲುಕೋಸ್ ಆಗಿ ಪರಿವರ್ತಿತವಾಗಿ ಕಿಟೋನುಗಳು ವಿಷಗಳನ್ನು ರಕ್ತದಲ್ಲಿ ಬೆರಸುತ್ತವೆ. ಈ ಕಿಟೋನುಗಳು ರಕ್ತಕ್ಕೆ ಬಹು ಅಪಾಯಕಾರಿಯಾದವು. ಇವು ಮೂತ್ರದಲ್ಲಿಯೂ ವಿಸರ್ಜಿತಗೊಳ್ಳುತ್ತವೆ. ಸಿಹಿಮೂತ್ರ ರೋಗದ ಅನೇಕ ತೊಂದರೆಗಳಿಗೆ ಈ ಕಿಟೋನುಗಳೇ ಕಾರಣಗಳಾಗುತ್ತವೆ.

## ಲಕ್ಷಣಗಳು

ಬಾಯಾರಿಕೆ, ಹಸಿವು ಅತಿಯಾಗಿದ್ದು ಶರೀರದ ಬಲವು ದಿನದಿನಕ್ಕೆ ಕುಗ್ಗುತ್ತ ಹೋಗುತ್ತದೆ. ಪದೇ ಪದೇ ಮೂತ್ರವಿಸರ್ಜಿಸುವುದು, ರಾತ್ರಿಯ ಹೊತ್ತು ಎರಡು ಮೂರು ಬಾರಿ ಮೂತ್ರವಿಸರ್ಜನೆಗೆ ಎಚ್ಚರವಾಗುವುದು, ತಲೆಸುತ್ತುವುದು ಮುಂತಾದ ಲಕ್ಷಣಗಳು ಕಂಡು ಬರುತ್ತವೆ.

ಮೂತ್ರ ಹಾಗೂ ರಕ್ತ ಪರೀಕ್ಷೆ ಮಾಡುವುದರಿಂದ ಕಾಯಿಲೆಯ ಪತ್ತೆಯಾಗುತ್ತದೆ. ಮೂತ್ರಪರೀಕ್ಷೆಯನ್ನು ಮನೆಯಲ್ಲೇ ಮಾಡಿಕೊಳ್ಳಬಹುದು. ಬೆನಿಡಿಕ್ಟ್ಸ್ ದ್ರಾವಣವನ್ನು ಟೆಸ್ಟ್‌ಟ್ಯೂಬಿನಲ್ಲಿ ಹಾಕಿ ಚೆನ್ನಾಗಿ ಕುದಿಸಬೇಕು. ಅನಂತರ ಹತ್ತು ಹನಿ ಮೂತ್ರವನ್ನು ಹಾಕಿ ಮತ್ತೆ ಕುದಿಸಬೇಕು. ಮೂತ್ರದಲ್ಲಿ ಸಕ್ಕರೆ ಇಲ್ಲದಿದ್ದರೆ ದ್ರಾವಣ ನೀಲಿಬಣ್ಣವಾಗಿಯೇ ಉಳಿಯುತ್ತದೆ. ಅರ್ಧ ಪರ್‌ಸೆಂಟ್ ಸಕ್ಕರೆಯಿದ್ದರೆ ಹಸಿರಾಗಿಯೂ, ಒಂದು ಪರ್‌ಸೆಂಟ್ ಇದ್ದರೆ ಹಳದಿಯಾಗಿಯೂ, ಒಂದೂವರೆ ಪರ್‌ಸೆಂಟ್ ಇದ್ದರೆ ಕೇಸರಿ ಬಣ್ಣದ್ದಾಗಿಯೂ, ಎರಡು ಪರ್ಸೆಂಟ್ ಇದ್ದರೆ ಇಟ್ಟಿಗೆ ಬಣ್ಣದ್ದಾಗಿಯೂ ಇರುತ್ತದೆ. ಈಗ ಪರೀಕ್ಷಿಸಲು ಇನ್ನೂ ಸುಲಭವಾದ ವಿಧಾನವೂ ಇದೆ. ಕಡ್ಡಿಯನ್ನು ಮೂತ್ರದಲ್ಲಿ ಅದ್ದಿದರೆ ಅದರ ತುದಿಯಲ್ಲಿ ಕಾಣುವ ಬಣ್ಣದ ಬದಲಾವಣೆಯಿಂದ ಸಕ್ಕರೆಯ ಅಂಶ ಎಷ್ಟಿದೆ ಎಂಬುದು ತಿಳಿಯಬಹುದು.

ರಕ್ತದಲ್ಲಿರುವ ಗ್ಲುಕೋಸ್ ಅಂಶದ ಪರೀಕ್ಷೆಯನ್ನು ಲ್ಯಾಬೋರೇಟರಿಯಲ್ಲಿ ಮಾಡಿಸಬೇಕು. ಸಾಮಾನ್ಯವಾಗಿ ರಕ್ತದಲ್ಲಿ ೧೨೦ ಮಿ. ಗ್ರಾಂ/೧೦೦ ಮಿಲಿಯಷ್ಟು ಗ್ಲುಕೋಸ್ ಇರುತ್ತದೆ. ಕರಾರುವಕ್ಕಾದ ಪರೀಕ್ಷೆಯೆಂದರೆ ಗ್ಲುಕೋಸ್ ಟಾಲರೆನ್ಸ್ ಟೆಸ್ಟ್. ಗ್ಲುಕೋಸ್ ಬೆರೆಸಿದ ನೀರನ್ನು ಕುಡಿಯಲು ಕೊಟ್ಟು ಪ್ರತಿ ಅರ್ಧ ಗಂಟೆಗೊಮ್ಮೆ ರಕ್ತ ಪರೀಕ್ಷೆ ಮಾಡುತ್ತಾರೆ.

ಶರೀರಕ್ಕೆ ಯಾವ ವ್ಯಾಯಾಮವೂ ಇಲ್ಲದೇ ಕುಳಿತಲ್ಲೇ ಕುಳಿತಿರುವವರಿಗೆ ಈ ಕಾಯಿಲೆ ಬಹುಬೇಗ ಅಂಟಿಕೊಳ್ಳುತ್ತದೆ.

ಔಷಧಿ ಚಿಕಿತ್ಸೆಯ ಜೊತೆಗೆ ಯೋಗ ಸಾಧನೆ, ವ್ಯಾಯಾಮ ಮಾಡಿದರೆ ಸಿಹಿಮೂತ್ರರೋಗವನ್ನು ಹತೋಟಿಯಲ್ಲಿಡಲು ಸಾಧ್ಯ.

## ಚಿಕಿತ್ಸೆ

೧. ಅರಶಿನದ ನುಣ್ಣಗಿನ ಪುಡಿ ಒಂದು ಚಮಚ ಮತ್ತು ನೆಲ್ಲಿಕಾಯಿ ಪುಡಿ ಒಂದು ಚಮಚ, ಬಿಸಿನೀರಿನಲ್ಲಿ ಸೇರಿಸಿ ಬೆಳಿಗ್ಗೆ, ರಾತ್ರಿ ಸೇವನೆ ಮಾಡಬೇಕು.

೨. ಹಾಗಲ ಸೊಪ್ಪಿನ ರಸ ಇಲ್ಲವೇ ಹಾಗಲಕಾಯಿಯ ರಸ ಹೊತ್ತಿಗೆ ನಾಲ್ಕು ಚಮಚೆಯಷ್ಟು ದಿನಕ್ಕೆ ಮೂರು ಬಾರಿ ಸೇವಿಸಬೇಕು.

೩. ಒಂದು ಹಿಡಿ ಬೇವಿನ ಸೊಪ್ಪನ್ನು ಬೆಳಿಗ್ಗೆ, ರಾತ್ರಿ ಚೆನ್ನಾಗಿ ಅಗಿದು ತಿನ್ನಬೇಕು.

೪. ನೇರಳೆ ಬೀಜ ಹಾಗೂ ನೆಲ್ಲಿಕಾಯಿಯ

○ ಡಾ. ವಸುಂಧರಾ ಭೂಪತಿ

ಸಮಭಾಗ ಪುಡಿ ಮಾಡಿ ಇದನ್ನು ಒಂದು ಚಮಚದಷ್ಟನ್ನು ಬೆಳಿಗ್ಗೆ ಹಾಗೂ ರಾತ್ರಿ ಬಿಸಿನೀರಿನಲ್ಲಿ ಸೇವನೆ ಮಾಡಬೇಕು.

೫. ಅಮೃತಬಳ್ಳಿ ಸತ್ವ ಎರಡು ಚಿಟಿಕೆ, ನೇರಳೆ ಬೀಜದ ಪುಡಿ ಎರಡು ಚಮಚದಷ್ಟು ತೆಗೆದುಕೊಂಡು ಪ್ರತಿದಿನ ಬೆಳಿಗ್ಗೆ ಬಿಲ್ವಪತ್ರೆ ರಸದಲ್ಲಿ ಸೇರಿಸಿ ತಿನ್ನುವುದರಿಂದ ಸಿಹಿಮೂತ್ರ ರೋಗವನ್ನು ನಿಯಂತ್ರಣದಲ್ಲಿರಿಸಲು ಸಾಧ್ಯವಾಗುತ್ತದೆ.

೬. ಒಂದು ಹಿಡಿಯಷ್ಟು ಬಿಲ್ವಪತ್ರೆ ಎಲೆಯನ್ನು ಬೆಳಿಗ್ಗೆ, ರಾತ್ರಿ ಚೆನ್ನಾಗಿ ಅಗಿದು ತಿನ್ನಬೇಕು.

೭. ರಾತ್ರಿಯ ಹೊತ್ತು ಸ್ವಲ್ಪ ಮೆಂತ್ಯವನ್ನು ನೀರಲ್ಲಿ ನೋಸಿಟ್ಟು ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ಸೇವಿಸಬೇಕು.

೮. ಹೊಂಗೆಯ ಒಣಗಿದ ಹೂವು, ನೇರಳೆ ಬೀಜ ಮತ್ತು ಒಣಗಿದ ಹಾಗಲ ಕಾಯಿ ಸಮಪ್ರಮಾಣದಲ್ಲಿ ಸೇರಿಸಿ ಪುಡಿ ಮಾಡಿಕೊಂಡು ಪ್ರತಿದಿನ ಬೆಳಿಗ್ಗೆ, ರಾತ್ರಿ ೫ ಗ್ರಾಂ ನಷ್ಟು ಬಿಸಿನೀರಿನಲ್ಲಿ ಸೇವಿಸಬೇಕು.

೯. ಬೇವಿನ ಎಲೆ ೮, ಕರಿಬೇವಿನ ಎಲೆ ೪, ತುಂಬೆ ಎಲೆ ೪ ಎಲ್ಲವನ್ನು ಸೇರಿಸಿ ಚೆನ್ನಾಗಿ ಅಗಿದು ತಿನ್ನಬೇಕು. ಇದನ್ನು ಖಾಲಿ ಹೊಟ್ಟೆಯಲ್ಲಿ ಸೇವಿಸಬೇಕು.

೧೦. ತುಂಬೆಯ ಎಲೆ ೧೦ ಗ್ರಾಂನಷ್ಟು ತೆಗೆದುಕೊಂಡು ಅದಕ್ಕೆ ಎರಡು ಮೆಣಸಿನ ಕಾಳನ್ನು (ಕರಿಮೆಣಸು) ಸೇರಿಸಿ ನುಣ್ಣಗೆ ಅರೆದು ಪ್ರತಿದಿನ ಬೆಳಿಗ್ಗೆ ಸೇವಿಸಬೇಕು.

**ಪಥ್ಯ**

ಆಹಾರದಲ್ಲಿ ಸಿಹಿಯ ಅಂಶವನ್ನು ಆದಷ್ಟು ಕಡಿಮೆ ಮಾಡಬೇಕು. ಸಿಹಿ ತಿಂದಷ್ಟೂ ಅದು ನೇರವಾಗಿ ರಕ್ತಕ್ಕೆ ಸೇರಿ ರಕ್ತದಲ್ಲಿ ಗ್ಲುಕೋಸ್ ಅಂಶ ಹೆಚ್ಚಾಗುವುದು. ಚಪಾತಿ, ಜೋಳದ ರೊಟ್ಟಿ, ರಾಗಿಮುದ್ದೆ ಇವನ್ನು ಹೆಚ್ಚಾಗಿ ಬಳಸಬೇಕು. ಕಡಲೆಕಾಯಿ ಎಣ್ಣೆ, ತುಪ್ಪ, ಕೊಬ್ಬರಿ ಎಣ್ಣೆಯನ್ನು ಹೆಚ್ಚು ಉಪಯೋಗಿಸಬಾರದು. ತರಕಾರಿ, ಸೊಪ್ಪುಗಳ ಸೇವನೆ ಅಧಿಕವಾಗಿರಬೇಕು.

ದೇಹದಲ್ಲಿ ಬೊಜ್ಜು ಬರದ ಹಾಗೆ ಜಾಗ್ರತೆ ವಹಿಸಬೇಕು. ಇಲ್ಲದಿದ್ದರೆ ಸಿಹಿಮೂತ್ರರೋಗ ಬೇರೂರಿದ ಹಾಗೆ ರಕ್ತದಲ್ಲಿ ಕೊಲೆಸ್ಟೆರಾಲ್ ಪ್ರಮಾಣವೂ ಏರುತ್ತದೆ. ಇದರಿಂದಾಗಿ ಬೇರೆ ಇನ್ನಿತರ ತೊಂದರೆಗಳು ಕಾಣಿಸಿಕೊಳ್ಳುತ್ತದೆ. ●

# ಮದಗದ ಕೆರೆ ಪ್ರವಾಸಿ ತಾಣವಾಗಲಿ

"ಮಾಯದಂಥಾ ಮಳೆ ಬಂತಣ್ಣಾ ಮದಗಾದ ಕೆರೆಗೆ"

ಈ ಇಂಪಾದ ಹಾಡನ್ನು ಯಾರು ಕೇಳಿಲ್ಲ? ಆದರೆ ಯಾವುದೀ ಮದಗದ ಕೆರೆ? ಎಲ್ಲಿದೆ? ಎಂಬುದೇ ಅನೇಕರಿಗೆ ಗೊತ್ತಿಲ್ಲ.

ಓರ್ವ ಗರತಿಯ ತ್ಯಾಗದ ಪ್ರತೀಕವಾಗಿರುವ ಈ ಕೆರೆ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿದೆ. ಬೆಂಗಳೂರು ಪುಣೆ ಹೆದ್ದಾರಿಯಲ್ಲಿ ರಾಣೆಬೆನ್ನೂರಿನಿಂದ ದಕ್ಷಿಣಕ್ಕೆ ೪೦ ಕಿ.ಮಿ. ಹೋದರೆ ಸರ್ವಜ್ಞನ ಜನ್ಮಸ್ಥಳ ಮಾಸೂರಿನಿಂದ ೪ ಕಿ.ಮೀ. ದೂರದಲ್ಲಿರುವುದೇ ಮದಗ ಅಥವಾ ಮದಗ ಮಾಸೂರು.

ಮಾಸೂರಿನವರೆಗೂ ಬಯಲು ಸೀಮೆಯ ಅನುಭವವಾಗುವ ನಮಗೆ ಅಲ್ಲಿಂದ ಎರಡು ಕಿ.ಮಿ. ಮುಂದೆ ಚಲಿಸಿದರೆ ಮಲೆನಾಡಿನ ಸುಳಿವು ಪ್ರಾರಂಭವಾಗುತ್ತದೆ. ಸುತ್ತಲೂ ಗುಡ್ಡಬೆಟ್ಟಗಳು, ಕಣ್ಣು ಹಾಯಿಸಿದಷ್ಟು ದೂರ ಹಸುರು ಗದ್ದೆಗಳು ಅಲ್ಲೇ ಎಡಬದಿಗೆ ಲೋಕೋಪಯೋಗಿ ಇಲಾಖೆಯ ಮಾಸಿಹೋದ ಫಲಕ 'ಮದಗ ಜಲಪಾತ ೩ ಕಿ.ಮಿ.' ಎಂದು ಸೂಚಿಸುತ್ತದೆ.

ಕೆಂಚಮ್ಮ (ಭಾಗೀರತಿ) ರಟ್ಟೀಹಳ್ಳಿ ಪುಟ್ಟನಗೌಡರ ಮಗಳು ಅವಳನ್ನು ಪಕ್ಕದ ಮಾಸೂರಿನ ಮಲ್ಲನಗೌಡರ ಮಗನಿಗೆ ವಿವಾಹ ಮಾಡಿಕೊಡಲಾಗುತ್ತದೆ. ಇವಳೇ ಕಿರಿಯ ಸೊಸೆ. ಮಲ್ಲನಗೌಡ ಊರಿಗೆ ಉಪಕಾರವಾಗುವಂಥ ಕೆರೆ ಕಟ್ಟಿಸುತ್ತಾನೆ. ಆದರೆ ನೀರು ಬರುವುದೇ ಇಲ್ಲ. ಜ್ಯೋತಿಷಿಯನ್ನು ಕೇಳಲಾಗಿ ಕಿರಿಸೊಸೆ ಭಾಗೀರತಿಯನ್ನು ಬಲಿಕೊಟ್ಟರೆ ಮಾತ್ರ ಕೆರೆಗೆ ನೀರು ಬರುವುದಾಗಿ ಹೇಳುತ್ತಾರೆ. ಇದರಂತೆ ಇವಳ ಪತಿ ದೇಶ ಪರ್ಯಟನೆಗೆ ಹೋದಾಗ ಭಾಗೀರತಿ 'ಕೆರೆಗೆ ಹಾರ'ವಾಗುತ್ತಾಳೆ, ಕೆರೆ ತುಂಬುತ್ತದೆ.

**ಐತಿಹಾಸಿಕ ಹಿನ್ನೆಲೆಯಿರುವ ಈ ನೈಸರ್ಗಿಕ ಪ್ರವಾಸಿ ಸ್ಥಳವನ್ನು ನಮ್ಮ ಪ್ರವಾಸೋದ್ಯಮ ಇಲಾಖೆ ಗುರುತಿಸದಿರುವುದು ವಿಪರ್ಯಾಸವೇ ಸರಿ.**

ಸುಮಾರು ೫ ಸಾವಿರ ಎಕರೆಯಷ್ಟು ವಿಶಾಲ ಪ್ರದೇಶದಲ್ಲಿ ವಿಸ್ತರಿಸಿರುವ ಈ ಕೆರೆ 'ಕುಮದ್ವತಿ' ನದಿಯ ಉಗಮಸ್ಥಾನವೂ ಹೌದು. ಸುತ್ತಲೂ ವಿಶಾಲವಾದ ಗುಡ್ಡಗಳು, ಕಣ್ಣು ಹಾಯಿಸಿದಷ್ಟು ದೂರವೂ ಕಾಣುವ ಜಲರಾಶಿ ಕಣ್ಣಿಗೆ ತಂಪು ನೀಡುತ್ತದೆ. ಈ ಪ್ರಕೃತಿ ಸೌಂದರ್ಯವನ್ನು ಸವಿಯುತ್ತ ಮುಂದೆ ಹೋದರೆ ಭೋರ್ಗರೆಯುವ ಜಲಪಾತ ಕಾಣಿಸುತ್ತದೆ. ೧೦೦ ಅಡಿಗಳಷ್ಟು ಮೇಲಿನಿಂದ ಧುಮ್ಮಿಕ್ಕುವ ಜಲಧಾರೆ 'ಮಿನಿ ಜಲಪಾತ'ವೆಂದೇ ಹೆಸರು ಪಡೆದಿದೆ.

ಇದಲ್ಲದೇ ೧೭೮೬ರಷ್ಟು ಹಿಂದೆಯೇ ಇಲ್ಲಿಯ ನೀರು ಪೋಲಾಗದಂತೆ ತಡೆಗಟ್ಟಲು ಈ ಭಾಗದಲ್ಲಿ ಆಳ್ವಿಕೆ ಮಾಡಿದ ಹೈದರಾಲಿ ನಿರ್ಮಿಸಿದ ಕತ್ತರಿ ತೂಬು ಇಂದು ಕೇಳುವವರಿಲ್ಲದೇ ಜಂಗು ಹಿಡಿದು. ಅನಾಥವಾಗಿದೆ. ಇದೇ ಸ್ಥಳದಲ್ಲಿ ಹೈದರ್ ನಿರ್ಮಿಸಿದ ಕೋಟೆ ಮದಗದ ಗತ ವೈಭವದ ಮೂಕ ಸಾಕ್ಷಿಯಾಗಿ ನಿಂತಿದೆ.

ಐತಿಹಾಸಿಕ ಹಿನ್ನೆಲೆಯಿರುವ ಈ ನೈಸರ್ಗಿಕ ಪ್ರವಾಸಿ ಸ್ಥಳವನ್ನು ನಮ್ಮ ಪ್ರವಾಸೋದ್ಯಮ ಇಲಾಖೆ ಗುರುತಿಸದಿರುವುದು ವಿಪರ್ಯಾಸವೇ ಸರಿ. ಈ ಹಿಂದಿನ ಇಲ್ಲಿಯ ಶಾಸಕರು ದಶಕಕ್ಕಿಂತಲೂ ಹೆಚ್ಚು ಕಾಲ ಮಂತ್ರಿಗಳಾಗಿದ್ದರೂ ಪ್ರವಾಸಿ ಸ್ಥಾನವಾದ ಮದಗಕ್ಕೆ ಅವರು ನೀಡಿದ ಕೊಡುಗೆ ಅತ್ಯಲ್ಪ. ಇನ್ನಾದರೂ ಅಜ್ಞಾತವಾಗಿರುವ ನಿಸರ್ಗ ಸೌಂದರ್ಯದ ಪ್ರವಾಸಿ ತಾಣ ಬೆಳಕಿಗೆ ಬರುವಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಯಲಿ.

○ **ವಿಶ್ವನಾಥ ಬಸವನಾಳಮಠ**
ಏಷ್ಯನ್ ಕಾಲೇಜ್ ಆಫ್ ಜರ್ನಲಿಸಂ
ಬೆಂಗಳೂರು




## ಬದಾಮ್ ಪೂರಿ

**ಬೇಕಾಗುವ ಸಾಮಗ್ರಿಗಳು**

ಮೈದಾಹಿಟ್ಟು ೨೫೦ ಗ್ರಾಂ, ಸಕ್ಕರೆ ೨೫೦ ಗ್ರಾಂ, ತುಪ್ಪ ೫೦ ಗ್ರಾಂ, ಕೇಸರಿ ಬಣ್ಣ ಮತ್ತು ಎಣ್ಣೆ.



**ಮಾಡುವ ವಿಧಾನ**

ಸಕ್ಕರೆಗೆ ಎರಡು ದೊಡ್ಡ ಕಪ್ಪು ನೀರು ಹಾಕಿ ಚೆನ್ನಾಗಿ ಕುದಿಸಬೇಕು. ಎಳೆ ಪಾಕ ಬರುವ ತನಕ ಕುದಿಸಿ ಕೆಳಗಿಳಿಸಿಬಿಡಿ.

ಮೈದಾ ಹಿಟ್ಟಿಗೆ ತುಪ್ಪ ಬಿಸಿ ಮಾಡಿ ಹಾಕಿ, ಅದಕ್ಕೆ ಸ್ವಲ್ಪ ಕೇಸರಿ ಬಣ್ಣ ಸೇರಿಸಿ. ನಂತರ ನೀರು ಹಾಕಿ, ಪೂರಿ ಮಾಡುವ ಹಿಟ್ಟಿನ ಹದಕ್ಕೆ ಕಲಸಿಕೊಳ್ಳಿ, ನಂತರ ಸ್ವಲ್ಪ ಹಿಟ್ಟು ತೆಗೆದುಕೊಂಡು ಹಪ್ಪಳದ ಸೈಜಿಗೆ ಲಟ್ಟಿಸಿ, ಮತ್ತೆ ಮಡಿಚಿ ಲಟ್ಟಿಸಿ, ಚೆನ್ನಾಗಿ ಕಾದಿರುವ ಎಣ್ಣೆಯಲ್ಲಿ ಕರೆಯಿರಿ. ಆಮೇಲೆ ಸಕ್ಕರೆ ಪಾಕದಲ್ಲಿ ಹಾಕಿ ತೆಗೆದುಬಿಡಿ. ಬದಾಮ್ ಪೂರಿ ರೆಡಿ. ಇದಕ್ಕೆ ಬದಾಮ್ ಹಾಲು ಹಾಕಿ ಕೂಡ ತಿನ್ನಬಹುದು.

**– ಸಿ.ಎಸ್. ತೀರ್ಥ**
ಬೆಂಗಳೂರು

## ಗುಳ್ಳಡಿಕೆ ಉಂಡಿ

**ಬೇಕಾಗುವ ಸಾಮಗ್ರಿಗಳು**

ಒಂದು ಕೆ.ಜಿ. ಗೋಧಿ, ಒಂದು ಕೆ.ಜಿ. ಬೆಲ್ಲ, ಪಾವು ಕೆ.ಜಿ. ಪುಟಾಣಿ ಹಿಟ್ಟು, ೧೨೫ ಗ್ರಾಂ ಗೋಧಿ ರವೆ, ೨೫ ಗ್ರಾಂ ಕೊಬ್ಬರಿ ತುರಿ, ೫ ಗ್ರಾಂ ಗಸಗಸೆ, ೫೦೦ ಗ್ರಾಂ ತಿನ್ನುವ ಎಣ್ಣೆ (ಅಂದಾಜು), ಸ್ವಲ್ಪ ಜಾಲಿ ಅಂಟು, ಸ್ವಲ್ಪ ಬೆಣ್ಣೆ.

**ಮಾಡುವ ವಿಧಾನ**

ಪಾಯಸಕ್ಕೆ ಬೇಕಾಗುವ ರೀತಿಯಲ್ಲಿ ಗೋಧಿಯನ್ನು ಸ್ವಲ್ಪ ನೀರು ಹಾಕಿ ಕುಟ್ಟಬೇಕು. ನಂತರ ನೆರಳಲ್ಲಿ ಒಣಗಿಸಿ ತೌಡು ಬೇರ್ಪಡಿಸಬೇಕು. ಅದಾದ ಮೇಲೆ ೪-೫ ಗಂಟೆ ನೀರಿನಲ್ಲಿ ನೆನೆಯಿಸಬೇಕು. ನೆನೆದ ಗೋಧಿಯನ್ನು ರುಬ್ಬಿ ಪಾತ್ರೆಯಲ್ಲಿ ಜೇಕು ಮತ್ತು ಹಾಲು ಬೇರ್ಪಡುವಂತೆ ನೀರಿನಲ್ಲಿ ತೊಳೆಯಬೇಕು. ಜೇಕಿನಲ್ಲಿ ತೌಡಿನ ಅಂಶ ಇಲ್ಲದಂತೆ, ತೊಳೆಯಬೇಕು. ಜೇಕನ್ನು ಕೂಡದ ಕಂಠಕ್ಕೆ ಸ್ವಲ್ಪ ಎಣ್ಣೆ ಸವರಿ, ಮುಚ್ಚಳದಂತೆ ನೀರಿನಾಂಶ ಹೋಗುವವರೆಗೆ ಕನಿಷ್ಠ ಮೂರು ಗಂಟೆ ಹಾಕಿರಿ. ರವೆಯನ್ನು ಕೇವಲ ಎಣ್ಣೆಯಲ್ಲಿ ನಾದಬೇಕು. ಕನಿಷ್ಠ ಮೂರು ಗಂಟೆ ನೆನೆಯಬೇಕು. ನೀರು ಆರಿದ ಜೇಕು, ನೆನೆದ ರವೆ, ಪುಡಿ



ಮಾಡಿದ ಅಂಟು ಹಾಗೂ ಬೆಣ್ಣೆಯನ್ನು ಹಾಕಿ, ಮಿಶ್ರಣ ಮಾಡಿ ಹದ ಬರುವವರೆಗೆ ಕುಟ್ಟಬೇಕು. ಕುಟ್ಟಿದ ಹಿಟ್ಟನ್ನು ಕಡಲೆ ಕಾಳಿನ ಗಾತ್ರದ ತುಂಡು ಮಾಡಿ ಎಣ್ಣೆಯಲ್ಲಿ ಕರಿಯಬೇಕು. ಕರಿದ ತುಂಡುಗಳು ಅಡಿಕೆಯಂತಾಗುವುವು. ನಂತರ ಬೆಲ್ಲದಲ್ಲಿ ಕೇವಲ ಎಣ್ಣೆ ಹಾಕಿ ಪಾಕ ತಯಾರಿಸಬೇಕು. ಪಾಕದಲ್ಲಿ ಕೊಬ್ರಿ ತುರಿ, ಯಾಲಕ್ಕಿ ಪುಡಿ, ಗಸಗಸೆ, ದ್ರಾಕ್ಷಿ, ಗೋಡಂಬಿ, ಗೇರುಬೀಜ ಕರಿದ ತುಂಡು ಹಾಕಿ, ಪುಟಾಣಿ ಹಿಟ್ಟನ್ನು ಹಾಕುತ್ತಾ ಕಲೆಸಬೇಕು. ಬೇಕಾದ ಗಾತ್ರದಲ್ಲಿ ಉಂಡೆಗಳನ್ನು ತಯಾರಿಸಬೇಕು. ತಿಂಗಳ ವರೆಗೆ ಇಟ್ಟರೂ ಕೆಡುವದಿಲ್ಲ. ತಿನ್ನಲು ಬಲು ರುಚಿ.

ಜೇಕು ತೊಳೆದ ಹಾಲನ್ನು ತಿಳಿಯುಟ್ಟು, ಹೆಚ್ಚಿನ ಅದರಲ್ಲಿಯ ನೀರನ್ನು ತೆಗೆದು, ಅಳತೆಯ ಪ್ರಮಾಣದಲ್ಲಿ ನೀರು ಉಳಿಸಿ ಕುದಿಸಬೇಕು. ಅದರಲ್ಲಿ ರುಚಿಗೆ ತಕ್ಕಷ್ಟು ಉಪ್ಪು, ಗಸಗಸೆ, ಅಜಿವಾನ, ಜೀರಗಿ, ಸ್ವಲ್ಪ ಎಳ್ಳು, ತಿನ್ನುವ ಸೋಡಾ ಹಾಕಿ. ಸೊಂಡಿಗೆ ಮಾಡಿ ಬಿಸಿಲಲ್ಲಿ ಒಣಗಿಸಬೇಕು. ನಂತರ ಎಣ್ಣೆಯಲ್ಲಿ ಕರಿದು ಚಹಾ ಹಾಗೂ ಸಿಹಿಊಟದಲ್ಲಿ ತಿನ್ನಲು ಬಲು ರುಚಿ.

**ಭಾಗ್ಯರತ್ನಮ್ಮ ರೋಣದ, ಅಬ್ಬೀಗೇರಿ**

## ಹುರಕ್ಕಿ ಹೋಳಿಗೆ

**ಬೇಕಾಗುವ ಸಾಮಗ್ರಿಗಳು**

೧ ದೊಡ್ಡ ವಾಟಗಾ ನವಣಕ್ಕಿ, ಅರ್ಧ ಬಟ್ಟಲು ಅಕ್ಕಿ, ಅರ್ಧ ಬಟ್ಟಲು ಗೋಧಿ, ಅರ್ಧ ಬಟ್ಟಲು ಕಡಲೆಬೇಳೆ. ಬೆಲ್ಲ, ಎಣ್ಣೆ, ತುಪ್ಪ, ಮೈದಾಹಿಟ್ಟು.



**ಮಾಡುವ ವಿಧಾನ :**

ನವಣಕ್ಕಿಯನ್ನು ಶುಚಿಗೊಳಿಸಿ ನೀರಿನಲ್ಲಿ ತೊಳೆದು ಒಣಗಿಸಬೇಕು. ಆರಿದ ನಂತರ ಬೇರೆ ಬೇರೆಯಾಗಿ ನವಣಕ್ಕಿ, ಅಕ್ಕಿ, ಗೋಧಿ, ಕಡಲೆಬೇಳೆಗಳನ್ನು ಕಂಪಾಗಿ ವಾಸನೆ ಬರುವ ವರೆಗೆ ಹುರಿದುಕೊಳ್ಳಬೇಕು. ಆಮೇಲೆ ಎಲ್ಲವುಗಳನ್ನು ಸೇರಿಸಿ ಸಣ್ಣದಾಗಿ ಹಿಟ್ಟುಮಾಡಿಕೊಳ್ಳಬೇಕು. ಮೈದಾ ಹಿಟ್ಟನ್ನು ಕಲಿಸಿಟ್ಟುಕೊಳ್ಳಬೇಕು. ಬೆಲ್ಲವನ್ನು ಸಣ್ಣಕೆ ಪುಡಿಮಾಡಿ ಸ್ವಲ್ಪ ಹಾಲಿನಲ್ಲಿ ಕರಗಿಸಬೇಕು. ತುಪ್ಪ ಸ್ವಲ್ಪ ಹಿಟ್ಟನ್ನು ಎಲ್ಲಾ ಹಾಕಿ ಹೂರಣದಂತೆ ಮಾಡಿಟ್ಟುಕೊಳ್ಳಬೇಕು. ಕಲಿಸಿಟ್ಟ ಮೈದಾಹಿಟ್ಟಿನಲ್ಲಿ ಹುರಕ್ಕಿ ಹೂರಣವನ್ನು ಸಣ್ಣ ಸಣ್ಣ ಉಂಡೆಗಳ ಆಕಾರ ಮಾಡಿ ಮಧ್ಯದಲ್ಲಿಟ್ಟು ಲಟ್ಟಿಸಬೇಕು. ಹಂಚಿನ ಮೇಲೆ ಎರಡು ಮಗ್ಗಲು ಸ್ವಲ್ಪ ಸ್ವಲ್ಪ ಎಣ್ಣೆ ಹಚ್ಚಿ ಬೇಯಿಸಬೇಕು.

ಒಂದು ಬಾರಿ ನೀವು ಮಾಡಿ ನೋಡಿರಿ.

**– ರಾಜಶ್ರೀ ವಿನಾಯಕ ಗುಮಾಸ್ತೆ,**
ಸಿದ್ದಾಪುರ

# ನಮಗೊಬ್ಬಳೇ ಮಗಳು

## ಮಗಳ ಅಭ್ಯುದಯವೇ ನಮ್ಮ ಅಭ್ಯುದಯ



**ಮ**ಗು ಯಾವುದಾದರೇನು? ಮಕ್ಕಳೇ ಅಲ್ಲವೆ ಎಂದು ಗಂಡಿಗಾಗಿ ಹಾತೊರೆದು ಹೆಣ್ಣು ಹೆತ್ತವರು ಅನೇಕರು. ಆದರೆ ಹೆಣ್ಣು ಮಗು ಒಂದನ್ನೇ ಹೆತ್ತು ಸಾಕೆಂದು ಸಂತೃಪ್ತಿಪಟ್ಟವರು ಬಹಳ ವಿರಳ. ಆ ವಿರಳರಲ್ಲಿ ನಾವು ಒಬ್ಬರು.

ಇಪ್ಪತ್ತೊಂದನೆಯ ಶತಮಾನದ ಈ ಕಾಲದಲ್ಲಿ ಈ ಭೇದದ ಪರಂಪರೆಯನ್ನೇ ಹರಿದು ಹಾಕಿದ ಯಶಸ್ಸು ಕೂಡ ನಮಗೆ ಸಲ್ಲುತ್ತದೆಯೆಂದು ಬೇರೆ ಹೇಳಬೇಕಾಗಿಲ್ಲ.

ಸ್ತ್ರೀಯು ಯಾವುದನ್ನೂ ನಿಭಾಯಿಸಲು ಸಮರ್ಥಳಿರುವಾಗ ಬಯಕೆಯ ಬಾಲವನ್ನು ಬಿಚ್ಚಿ ಜನಸಂಖ್ಯೆಯನ್ನು ಹೆಚ್ಚಿಸುವ ಗೋಜು ಈಗ ಬೇಕಿಲ್ಲ. ಅದು ಅಗತ್ಯವು ಇಲ್ಲ.

''ಗಂಡು ಗಂಟಿಗಾದರೆ ಹೆಣ್ಣು ಕರುಳಿಗಾಗಿ'' ಎಂದು, ನನ್ನವಳು ಹೆಮ್ಮೆಯಿಂದ ಹೇಳುತ್ತಾಳೆ. ನೆರೆಹೊರೆಯವರೂ ಕೂಡ ''ನೀವು ತುಂಬಾ ಪುಣ್ಯವಂತರು'' ಎಂದು ಹಾರೈಸುತ್ತಾರೆ.

ಒಂಭತ್ತನೇ ಇಯತ್ತೆ ಓದುತ್ತಿರುವ ನಮ್ಮ ಬನಶಂಕರಿಯ ಆಶೆ ಆಕಾಂಕ್ಷೆಗಳನ್ನು ಈಡೇರಿಸುವುದರ ಜೊತೆಗೆ ದೈವಾನುಕೂಲವೂ ಕೂಡಿ ಬರಲಿ ಎಂದು ಬೇಡುತ್ತೇವೆ.

ನಮ್ಮೊಬ್ಬಳೇ ಮಗಳ ಅಭ್ಯುದಯವೇ ನಮ್ಮ ಅಭ್ಯುದಯ. ಇದು ನಮ್ಮಿಬ್ಬರ ಬಯಕೆಯಾಗಿರದೇ ಪ್ರತಿಯೊಬ್ಬ ತಂದೆತಾಯಿಗಳು ಬಯಸಲೇಬೇಕಾದುದು.

– **ಬ.ಈ. ದೇವರ** (ಸಾರವಾಡ)
ಪ್ರಧಾನ ಸಿವಿಲ್ ನ್ಯಾಯಾಲಯ
ಜಮಖಂಡಿ - ೫೮೭ ೩೦೧

# ಕೆಟ್ಟ ಮಗನಿಗಿಂತ ಕಟ್ಟಳೆ ಮೀರದ ಮಗಳೇ ಸಾಕು



**ನಾ**ನು ಬಸಪ್ಪ ಗುರುಸಿದ್ಧಪ್ಪ ಮೇಟಿ. ಜೆಮ್ ಗ್ರ್ಯಾನಾಯಿಟ್ಸ್ ಬಲಕುಂದಿ ಗ್ರಾಮ. ಇಲಕಲ್ಲ ಹೋಬಳಿ. ಹುನಗುಂದ ತಾಲೂಕ ಬಾಗಲಕೋಟೆ ಜಿಲ್ಲಾದಲ್ಲಿ ಮೈನಪೋರಮನ್ ನೆಂದು ಕೆಲಸದಲ್ಲಿದ್ದೇನೆ.

ನನ್ನ ಒಬ್ಬಳೇ ಮಗಳು ಸ್ವರ್ಣಭಾರತಿ. ಈಕೆ ಹುಬ್ಬಳ್ಳಿಯ ಎಸ್.ಜೆ.ಜಿ.ಎಸ್.ಸಂ.ಪ.ಪೂ. ಕಾಲೇಜಿನಲ್ಲಿ ಪಿ.ಯು.ಸಿ. ೨ನೇ ವರ್ಷ (ವಿಜ್ಞಾನ)ದಲ್ಲಿ ಓದುತ್ತಿದ್ದಾಳೆ. ಮುಂದೆ ಪಿ.ಯು.ಸಿ. ೨ನೇ ವರ್ಷ (P.C.M.B.)ದ ಫಲಿತಾಂಶ ಮತ್ತು (CET) ಸಾಮಾನ್ಯ ಪ್ರವೇಶ ಪರೀಕ್ಷೆಯ ಫಲಿತಾಂಶ ನೋಡಿಕೊಂಡು ಮುಂದೆ ಅವಳೇನು ಕಲಿಯಬೇಕೆಂಬುದನ್ನು ಅವಳು ನಾನು ಮತ್ತು ಅವಳ ತಾಯಿ ಗಿರಿಜಾ ಕೂಡಿಕೊಂಡು ಚರ್ಚಿಸಿ ನಿರ್ಧರಿಸಲು

## ಕಾರಣ

ನನ್ನವಳು
ದಿನವೂ ತಪ್ಪದೇ
ಮಾಡುತ್ತಾಳೆ ತಗಾದೆ
ಏಕೆಂದರೆ
ನಾನೇ
ಹಾಸಬೇಕಂತೆ 'ಗಾದೆ'

**- ಶ್ರೀಶೈಲ,** ಜಮಖಂಡಿ

ಯೋಚಿಸಿದ್ದೇವೆ.

ಸಮಾಜದಲ್ಲಿ ಹೆಣ್ಣು ಹುಡುಗಿಯರಿಗೆ ಕೆಲವು ಕೆಟ್ಟ ಹುಡುಗರು ಕೀಟಲೆ ಕೊಡುವುದನ್ನು, ಕೆಣಕುವುದನ್ನು ಪ್ರವಾಸ ಮಾಡುವಾಗ ಬಸ್‌ಗಳಲ್ಲಿ ಕೆಲವು ದುಷ್ಟ ಹುಡುಗರು ಕಾಮುಕ ದೃಷ್ಟಿಯಿಂದ ನೋಡುತ್ತಿರುವುದನ್ನು ಕಂಡಾಗ ನನ್ನ ಒಬ್ಬಳೇ ಮಗಳಾದ ಸ್ವರ್ಣಭಾರತಿ ಗಂಡಾಗಿ ಹುಟ್ಟಬಾರದಾಗಿತ್ತೆ ಎನಿಸುತ್ತದೆ. ಅವಳಿಗೆ ರಕ್ಷಾಬಂಧನದ ಅಣ್ಣಂದಿರಾದ ಇಲಕಲ್ಲಿನ ಕುಮಾರ, ಮಹಮ್ಮದ್ ಜಾವೇದ, ಉಸ್ಮಾನ ಸಾಬ ಫಣಿಬಂದ್, ಕುಮಾರ ಸುಭಾಸ, ತೇಜಪ್ಪ ವಗ್ಗಾ ಮತ್ತು ಕೂಡೆಕಲ್ಲದ ಚಂದ್ರಶೇಖರ ಹೂಕ್ರಾಣಿ ಇವರು ರಕ್ಷಣೆಯ ಹೊಣೆ ಹೊತ್ತಿರುವುದರಿಂದ ನಮಗ್ಯಾವ ಚಿಂತೆ ಇಲ್ಲ. ನಮ್ಮ ಜೀವನ ನೆಮ್ಮದಿಯಿಂದ ಸಾಗುತ್ತಿದೆ. ನಮಗೆ ಗಂಡು ಮಗುವಿಲ್ಲವೆಂಬ ಚಿಂತೆಯನ್ನು ನನ್ನ ಮಗಳು ತನ್ನ ನಡೆ, ನುಡಿ ಮತ್ತು ಕಲಿಯುವಿಕೆಯಿಂದ ದೂರ ಮಾಡಿದ್ದಾಳೆ.

**- ಬ.ಗು. ಮೇಟಿ,**
ನಂ. ೧೫೭೫, ಶ್ರೀ ಲಕ್ಷ್ಮೀಪೇಟೆ,
ರಾಮಮಂದಿರದ ಹತ್ತಿರ
ಇಲಕಲ್ಲ - ೫೮೭ ೧೨೫

# ಬೇಕಾಗಿದ್ದುದೇ ಹೆಣ್ಣು ಮಗು



ತಂದೆ : ಬಿ.ಎನ್.ಪ್ರಸನ್ನರಾವ್
ಮಗಳು : ಮೈತ್ರಿ
ತಾಯಿ : ರಮಾ

ನಮಗೆ ಬೇಕಾಗಿದ್ದುದೇ
ಇಂಥದೊಂದು ಹೆಣ್ಣುಮಗು
ಇವಳು ಹುಟ್ಟಿದ ಮೇಲೆ
ನಮ್ಮ ಮನೆ ತುಂಬ ನಗು!

ಗಂಡು ಮಗುವಿನ ತುಂಟಾಟ
ಇವಳಲ್ಲಿದೆ ಸಾಕಷ್ಟು
ನಮ್ಮ ಆಸೆ-ಆಕಾಂಕ್ಷೆಗಳಿಗೆಲ್ಲ
ಇವಳೇ ಚೌಕಟ್ಟು!

ನಾವು ಅನ್ಯರ ಮಾತಿಗೆ
ಕಿವಿ ಕೊಡುವುದೇ ಇಲ್ಲ
ಅದು ಏನೇ ಇದ್ದರೂ
ನಮ್ಮಿಬ್ಬರೊಳಗೇ ಎಲ್ಲ!

ಇಂದು ನಮಗೆ ನಾವೇ
ಆಗಿದ್ದೇವೆ ಮಾದರಿ
ಪ್ರತಿ ಕ್ಷಣವೂ ಕಾಣುತ್ತೇವೆ
ಸುಖ-ಸಂತಸದ ಝರಿ!

- ರಮಾ ಪ್ರಸನ್ನರಾವ್
C/o ಸತ್ಯ ಪ್ರಕಾಶ್ ಲಾಡ್ಜ್
ಬಸ್ ನಿಲ್ದಾಣ ರಸ್ತೆ
ಹಾಸನ - ೫೭೩ ೨೦೧



# ಮ್ಯಾಂಜಿಯಮ್ ಮರಗಳ ಮೇಲೆ ನಿಮ್ಮ ಹಣವನ್ನು ಹೂಡಿ. ನೆಲವನ್ನು ಹಚ್ಚ ಹಸುರಾಗಿಸಿ ! ಪ್ರಕೃತಿಯೊಂದಿಗೆ ಸದಾ ಹರ್ಷಿಸಿ ಮತ್ತು ಕೋಟಿಗಟ್ಟಲೆ ಗಳಿಸಿ !! ಖಾತರಿಯಾದ ಆದಾಯ !!!

## ಆರೋಗ್ಯಕರವಾದ ಪರಿಸರದ ಬೆಳವಣಿಗೆಗೆ ಸ್ವಲ್ಪವಾದರೂ ವಿನಿಯೋಗಿಸಿ.







### ಮಿರಾಕಲ್ ಕುರಿ ಯೂನಿಟ್ ಸ್ಕೀಮ್ (2ನೇ ಹಂತ)

| ಸ್ಕೀಮ್ | ಯೂನಿಟ್ ದರ | ಅವಧಿ | ಆದಾಯ |
|---|---|---|---|
| MSU-1 | ರೂ. 1,250/- | 5 ವರ್ಷ | ರೂ. 4,000/-* |
| MSU-2 | ರೂ. 1,250/- | 20 ವರ್ಷ | ರೂ. 2,00,000/-* |

### ಮಿರಾಕಲ್ ಮ್ಯಾಂಜಿಯಮ್ ಯೂನಿಟ್ ಸ್ಕೀಮ್ (1ನೇ ಹಂತ)

| ಸ್ಕೀಮ್ | ಯೂನಿಟ್ ದರ | ಅವಧಿ | ಆದಾಯ |
|---|---|---|---|
| MMU-1 | ರೂ. 1,000/- | 15 ವರ್ಷ | ರೂ. 1,00,000/-* |

### ಮಿರಾಕಲ್ ತೋಟಗಾರಿಕೆ ಯೂನಿಟ್ ಸ್ಕೀಮ್

| ಸ್ಕೀಮ್ | ಯೂನಿಟ್ ದರ | ಅವಧಿ | ಆದಾಯ |
|---|---|---|---|
| MHU-1 | ರೂ. 1,000/- | $3^1/_2$ ವರ್ಷ | ರೂ. 2,000/-* |

* ಆದಾಯವನ್ನು ನಗದು ಅಥವಾ ಅಷ್ಟೇ ಮೌಲ್ಯದ ಕುರಿ/ಮರ/ಕಂಪನಿಯ ಬೇರೆ ಯಾವುದೇ ಉತ್ಪನ್ನಗಳು ಅಥವಾ ಭಾಗಶಃ ನಗದು-ಭಾಗಶಃ ಉತ್ಪನ್ನಗಳನ್ನು ಪಡೆಯಬಹುದು.

**ಭದ್ರತೆ :**

1. ಯೂನಿಟ್ ಮಾಲಿಕತ್ವದ ಸರ್ಟಿಫಿಕೇಟ್
2. ಸ್ಟ್ಯಾಂಪ್ ಪೇಪರ್‌ನ ಮೇಲೆ ಕರಾರು ಪತ್ರ

ಮ್ಯಾಂಜಿಯಮ್ ಮರ ''ಆಸ್ಟ್ರೇಲಿಯಾದ ಟೀಕ್'' ಎಂದೇ ಹೆಸರುವಾಸಿಯಾಗಿದೆ.

◆ ಮಿರಾಕಲ್ ಫಾರ್ಮ್ಸ್ ಕುರಿ, ಮೊಲ ಮತ್ತು ಇತರೆ ಪ್ರಾಣಿಗಳನ್ನು ಸಾಕಾಣಿಕೆ ಮಾಡಲು ಹಾಗೂ ವಾಣಿಜ್ಯ ಬೆಳೆಗಳನ್ನು ಬೆಳೆಸಲು ಬೇಕಾದ ಮೂಲಭೂತ ಸೌಲಭ್ಯಗಳನ್ನು ಹೊಂದಿವೆ ◆ ಯೂನಿಟ್ ಹಣವನ್ನು ಪಶು ಸಂಗೋಪನೆ, ಕೃಷಿ, ತೋಟಗಾರಿಕೆ, ಹಿಪ್ಪನೇರಳೆ ಹಾಗೂ ಅಣಬೆ ಬೇಸಾಯದಲ್ಲಿ ಹೂಡಲಾಗುವುದು.

2ನೇ ಹಂತದ ಕುರಿ ಯೂನಿಟ್‌ಗಳ ಹಾಗೂ 1ನೇ ಹಂತದ ಮ್ಯಾಂಜಿಯಮ್ ಯೂನಿಟ್‌ಗಳ ಮಾರಾಟವು 31. 12. 1997 ರಂದು ಕೊನೆಗೊಳ್ಳುತ್ತದೆ.

<u>ವಿಶೇಷ ರಿಯಾಯಿತಿ :</u> ದಿನಾಂಕ 31. 12. 1997ರೊಳಗಾಗಿ ಯೂನಿಟ್‌ಗಳನ್ನು ಖರೀದಿಸಿ ಪ್ರತಿ ಯೂನಿಟ್‌ನ ಮೇಲೆ ರೂ. 100/- ರಂತೆ ರಿಯಾಯಿತಿ ಪಡೆಯಿರಿ. ಈ ರಿಯಾಯಿತಿ ಎಲ್ಲಾ ಸ್ಕೀಮ್‌ಗಳಿಗೂ ಅನ್ವಯಿಸುತ್ತದೆ. ಒಬ್ಬರು ಎಷ್ಟು ಯೂನಿಟ್‌ಗಳನ್ನಾದರೂ ಖರೀದಿಸಬಹುದು. ನಾಮಿನಿ ಮತ್ತು ನಾಮಿನಿ ಬದಲಾವಣೆಯ ಸೌಲಭ್ಯವುಂಟು.

# ಮಿರಾಕಲ್ ಫಾರ್ಮ್ಸ್ ಲಿಮಿಟೆಡ್

1956ರ ಕಂಪನಿಯ ಅಧಿನಿಯಮಗಳಡಿಯಲ್ಲಿ ನೊಂದಾಯಿತ ಸಂಸ್ಥೆ, ನೊಂದಣಿ ಸಂಖ್ಯೆ : 08/ 19293

ನೊಂದಣಿ ಕಛೇರಿ : ನಂ. 1033, 4ನೇ 'ಎಂ' ಬ್ಲಾಕ್, ರಾಮ್‌ಕುಮಾರ್ ಮಿಲ್ಸ್ ಹಿಂಭಾಗ, ಡಾ. ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು - 10
ದೂರವಾಣಿ : 3354274 / 3353321. ಫ್ಯಾಕ್ಸ್ : 080-3353321. ಕಛೇರಿ ವೇಳೆ : ಬೆಳಿಗ್ಗೆ 10ರಿಂದ ಸಂಜೆ 7ರವರೆಗೆ, ಭಾನುವಾರದಂದು ಸಹ ತೆರೆದಿರುತ್ತದೆ.

ನಮ್ಮಲ್ಲಿ ಒಳ್ಳೆಯ ಗುಣಮಟ್ಟದ ಮ್ಯಾಂಜಿಯಮ್ ಸಸಿಗಳು ಹಾಗೂ ಪ್ರಿಮಿಯರ್ ಸಾವಯವ ಗೊಬ್ಬರ ದೊರೆಯುತ್ತವೆ ಮತ್ತು ಗುತ್ತಿಗೆ ಆಧಾರದ ಮೇಲೆ ಮ್ಯಾಂಜಿಯಂ ಸಸಿಗಳನ್ನು ನಾಟ ಮಾಡುವ ಕೆಲಸವನ್ನು ತೆಗೆದುಕೊಳ್ಳುತ್ತೇವೆ ಹಾಗೂ ತಂತಿ ಬೇಲಿಯ ಕೆಲಸವನ್ನು ಸಹ ತೆಗೆದುಕೊಳ್ಳಲಾಗುವುದು.

ಕರ್ನಾಟಕದ ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಫೀಲ್ಡ್ ಆಫೀಸರ್‌ಗಳು ಮತ್ತು ಬ್ರಾಂಚ್ ಮ್ಯಾನೇಜರ್‌ಗಳು ಬೇಕಾಗಿದ್ದಾರೆ.
ಎಲ್ಲಾ ವಿವರಗಳುಳ್ಳ ಬ್ರೋಷರ್ ಮತ್ತು ಅರ್ಜಿ ಫಾರಮ್‌ಗಳಿಗಾಗಿ ಖುದ್ದಾಗಿ ಸಂಪರ್ಕಿಸಿ ಅಥವಾ ಬರೆಯಿರಿ.

# ನಾಡಿನ ವೀರಪ್ಪನ್‌ಗಳು ಬೆಳೆಸಿದ ಕಾಡಿನ ವೀರಪ್ಪನ್!



## ಕೋಚೆ ಚಿಂತನ

○ ಕೋ. ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
೧೨೭, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ,
ಬೆಂಗಳೂರು - ೫೬೦ ೦೮೬

**ಒ**ತ್ತೆಯಾಳಾಗಿದ್ದ ಸೇನಾನಿ, ಕೃಪಾಕರ, ಸುಬ್ರತ ಮೈತ್ರಿ ಮತ್ತು ಉಳಿದ ಮೂವರನ್ನು ಬಿಡುಗಡೆ ಮಾಡಿ ವೀರಪ್ಪನ್ ಪುಣ್ಯ ಕಟ್ಟಿಕೊಂಡ! ಒತ್ತೆಯಾಳುಗಳ ಬಂಧು ಬಾಂಧವರಿಗೂ ಹಿತೈಷಿಗಳಿಗೂ ಅಭಿಮಾನಿಗಳಿಗೂ ದೊಡ್ಡ ದುಗುಡ ಇಳಿಯಿತು. ಸುಖಾಂತವಾದದ್ದು ಎಲ್ಲ ಒಳ್ಳೆಯದೆ. ಅಕ್ಟೋಬರ್ 9ರಿಂದ ನಡೆದಿದ್ದ ಈ ದುರಂತ ಪ್ರಹಸನಕ್ಕೆ ಸದ್ಯ ತೆರೆ ಬಿದ್ದಿತು.

ಈ ಒತ್ತೆಯಾಳುಗಳ ಬಿಡುಗಡೆಯಿಂದಲೆ ಈ ವೀರಪ್ಪನ್ ಉಪಟಳ ಮುಗಿಯಲಿಲ್ಲ. ಅಥವಾ ಈ ರಾಜ್ಯ ಮತ್ತು ಈ ದೇಶದ ರಾಜ್ಯಾಧಿಕಾರದ ಕರ್ತವ್ಯವೂ ಮುಗಿಯಲಿಲ್ಲ. ಪ್ರತಿ ಎರಡು ತಿಂಗಳಿಗೊ, ಆರು ತಿಂಗಳಿಗೊ ಹೀಗೆ ಪೊಲೀಸರನ್ನೊ, ಅರಣ್ಯಾಧಿಕಾರಿಗಳನ್ನೊ ಸಾರ್ವಜನಿಕರನ್ನೊ ಹತಮಾಡುವುದು ಇಲ್ಲವೆ ಅಪಹರಿಸಿಕೊಂಡು ಹೋಗಿ ಸರ್ಕಾರಕ್ಕೆ ಚಳ್ಳೆ ಹಣ್ಣು ತಿನ್ನಿಸುವುದು ಕಳೆದ ಹನ್ನೆರಡು ಹದಿಮೂರು ವರ್ಷಗಳಿಂದ ನಡೆದೇ ಇದೆ! ಸರ್ಕಾರ ಅವನನ್ನು ಹಿಡಿದೇ ತೀರುವುದಾಗಿ ಶಪಥ ಮಾಡುತ್ತಲೇ ಇದೆ! ಕೋಟ್ಯಾಂತರ ರೂಪಾಯಿಗಳು ಅದಕ್ಕಾಗಿ ಸೋರಿ ಹೋಗುತ್ತಲೇ ಇವೆ. ಇತ್ತೀಚೆಗೆ ಛಾಯಾಗ್ರಾಹಕರ ಸ್ನೇಹಿತರು ಅರಣ್ಯಕ್ಕೆ ದಾಳಿಯಿಟ್ಟು ಅವನನ್ನು ಹಿಡಿದೇ ತೀರುವುದಾಗಿ ಮೀಸೆ ತಿರುವಿ ತೋಳು ತೊಡೆ ಚಪ್ಪರಿಸಿದರಂತೆ. ಮೈಸೂರಿನ ಕೆಲ ಬುದ್ಧಿಜೀವಿಗಳು, ಮಾನವ ಹಕ್ಕು ಸಂರಕ್ಷರು ಸರ್ಕಾರ ಅವನನ್ನು ಹಿಡಿಯಲು ಕಾರ್ಯಾಚರಣೆಗೆ ಕ್ರಮ ಕೈಗೊಳ್ಳಬಾರದೆಂದು ಹೂಂಕರಿಸಿದರೆಂದು ವರದಿಯಾಗಿತ್ತು: ದುಡುಕಿನ ಕೆಲಸ ಮಾಡಬಾರದೆಂದು!

**ವೀರಪ್ಪನ್ ಕೃಪೆಯಿಂದ ಬಿಡುಗಡೆ ಹೊಂದಿದ ಒತ್ತೆಯಾಳೊಬ್ಬರು ಆಕಾಶವಾಣಿಗೆ ಸಂದರ್ಶನವಿತ್ತು ಆಗಾಗ 'ಸೋ' (So) ಬಟ್ (But)ಗಳೆಂಬ ಇನಿದಾದ ಮಾತುಗಳನ್ನು ಬಳಸಿ ವೀರಪ್ಪನ್‌ನ ಮಹಾಗುಣಗಳನ್ನು ಬಣ್ಣಿಸಿ ಅವನು ಎಲ್ಲರಂತೆ ಬಹಿರಂಗಕ್ಕೆ ಬಂದು ಬದುಕಲು ಸರ್ಕಾರ ಅವಕಾಶ ಕೊಡಬೇಕೆಂದು ಒಂದು ಮಹಾಮಾನವೀಯ, ಮುತ್ಸದ್ಧಿ ಧೋರಣೆಯ ಉಪದೇಶ ನೀಡಿದರು! ಈಗ ವೀರಪ್ಪನ್ ಕೋವಿಗೆ ಇನ್ನೊಂದಿಷ್ಟು ಬಲ ಮತ್ತು ಅನುಕಂಪ ಸಿಕ್ಕಿತು.**

ಈ ಆಟಾಟೋಪಗಳ ಮಧ್ಯದಲ್ಲಿ ಒತ್ತೆಯಾಳಾಗಿದ್ದ ವೀರಪ್ಪನ್ ಕೃಪೆಯಿಂದ ಬಿಡುಗಡೆ ಹೊಂದಿದ ಒತ್ತೆಯಾಳುಗಳೊಬ್ಬರು ದಿನಾಂಕ ೨೭ರಂದು ಆಕಾಶವಾಣಿಗೆ ಸಂದರ್ಶನವಿತ್ತು ಆಗಾಗ 'ಸೋ' (So) ಬಟ್ (But)ಗಳೆಂಬ ಇನಿದಾದ ಮಾತುಗಳನ್ನು ಬಳಸಿ ವೀರಪ್ಪನ್‌ನ ಮಹಾಗುಣಗಳನ್ನು ಬಣ್ಣಿಸಿ ಅವನು ಎಲ್ಲರಂತೆ ಬಹಿರಂಗಕ್ಕೆ ಬಂದು ಬದುಕಲು ಸರ್ಕಾರ ಅವಕಾಶ ಕೊಡಬೇಕೆಂದು ಒಂದು ಮಹಾಮಾನವೀಯ, ಮುತ್ಸದ್ಧಿ ಧೋರಣೆಯ ಉಪದೇಶ ನೀಡಿದರು! ಈಗ ವೀರಪ್ಪನ್ ಕೋವಿಗೆ ಇನ್ನೊಂದಿಷ್ಟು ಬಲ ಮತ್ತು ಅನುಕಂಪ ಸಿಕ್ಕಿತು.

ಇದನ್ನೆಲ್ಲ ನೋಡಿದರೆ ಕೇಳಿದರೆ ರಾಜ್ಯಾಧಿಕಾರ, ರಾಜ್ಯದ ಕರ್ತವ್ಯ, ಸಂವಿಧಾನ, ಕಾನೂನು ಇ.....ಗಳವಿಚಾರ ತಿಳಿದವರಿಗೆ ಇದೇನು ಈ ವೀರಪ್ಪನ್ ಎಂಬ ಮಹಾದ್ಭುತ ವಿಸ್ಮಯ ಎನ್ನಿಸುತ್ತದೆ! ಅವನು ೩೦೦೦ ಆನೆಗಳನ್ನು ಕೊಂದು ೪೦,೦೦೦ ಕೆಜಿ ದಂತವನ್ನು ಕಳ್ಳತನದಿಂದ ಮಾರಿದ್ದಾನಂತೆ! ಒಂದು ನೂರು ಕೋಟಿ ರೂಪಾಯಿ ಬೆಲೆಯ ಗಂಧದ ಮರವನ್ನು ಲೂಟಿ ಮಾಡಿದ್ದಾನಂತೆ. ಕರ್ನಾಟಕ ಮತ್ತು ತಮಿಳುನಾಡು ಕಾಡಿನಲ್ಲಿ ೧೧೯ ಜನರನ್ನು ಹತ್ಯೆ ಮಾಡಿದ್ದಾನೆ. ಅವರಲ್ಲಿ ೫೫ ಜನ ಕರ್ನಾಟಕದವರು ೬೪ ಜನ ತಮಿಳುನಾಡಿನವರು. ೬೨ ಜನ ಅವನ ಜಾತಿಯವರೆ ಆದ ಪಡಮಾಚಿಗಳು. ೩೭ ಜನ ಪೊಲೀಸರನ್ನು (ಅವರಲ್ಲಿ ೨೭ ಜನ ಕರ್ನಾಟಕದವರು ೯ ಜನ ತಮಿಳುನಾಡಿನವರು. ಒಬ್ಬರು ಎಸ್.ಟಿ.ಎಫ್‌ಗೆ ಸೇರಿದವರು) ವೀರಪ್ಪನ್ ಹತ್ಯೆ ಮಾಡಿದ್ದಾನೆ!

೪೦ ಸಾವಿರ ಕೆಜಿ ದಂತವನ್ನು ಮತ್ತು ೧೦೦ ಕೋಟಿ ಬೆಲೆಯ ಗಂಧವನ್ನು ಅರಣ್ಯದಿಂದ ಕದ್ದು ಸಾಗಿಸಬೇಕಾದರೆ ಅದು ಗುಟ್ಟಾಗಿ ಯಾರಿಗೂ ಗೊತ್ತಾಗದಂತೆ ಮಾಡುವ ಕಳ್ಳತನವಲ್ಲ. ಅಷ್ಟು ದಂತ ಮತ್ತು ಗಂಧ ಹೊರಗೆ ಹೋಗಬೇಕಾದರೆ ಲಾರಿ, ಜೀಪುಗಳಲ್ಲೆ ಸಾಗಿಸಿರಬೇಕು. ಏನೊ ಒಂದು ಲಾರಿ, ಒಂದು ದಿನ ಅಥವಾ ಒಂದು ತಿಂಗಳು, ಒಂದು ವರ್ಷ ಕದ್ದು ಸಾಗಿಸಲಾಯಿತು ಎಂದರೆ ಇದ್ದರೂ ಇರಬಹುದೇನೋ. ಅಷ್ಟು ವಿಸ್ತಾರವಾದ ಕಾಡಿನಲ್ಲಿ ಮರಕ್ಕೊಬ್ಬ ಕಾವಲುಗಾರನನ್ನು ನೇಮಿಸುವುದಾದರೂ ಎಂಥ ರಾಜ್ಯಾಧಿಕಾರಕ್ಕೂ ಅಸಾಧ್ಯ. ಇದು ಒಪ್ಪಬಹುದಾದ ಮಾತು. ಆದರೆ ವೀರಪ್ಪನ್ ಸತತ ಎರಡು

ದಶಕಗಳಿಂದ ಎರಡು ರಾಜ್ಯಗಳಲ್ಲಿ ಈ ನರಹತ್ಯೆ, ಮರಹತ್ಯೆ, ಕರಿಹತ್ಯೆ ಮಾಡುತ್ತಿದ್ದಾನೆ ಎಂದರೆ ಇದು ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ತಿಳಿಯದೆ ನಡೆದಿರಬಹುದೆ? ಸರ್ಕಾರಿ ನೌಕರರ ಮತ್ತು ರಾಜಕಾರಣಿಗಳ ಕುಮ್ಮಕ್ಕು, ರಕ್ಷಣೆ ಇಲ್ಲದೆ ಆಗಿರಲಾರದು.

ಈ ತೀರ್ಮಾನ ನಿರಾಧಾರವಲ್ಲ ಎಂಬುದಕ್ಕೆ ಬಲವಾದ ಕಾರಣಗಳುಂಟು. ೧೯೮೬ರಲ್ಲಿ ಸಾರ್ಕ್ ಸಮ್ಮೇಳನ ಬೆಂಗಳೂರಿನಲ್ಲಿ ಸಮಾವೇಶಗೊಂಡಾಗ ರಾಜೀವ ಗಾಂಧೀ ರಕ್ಷಣೆಯ ಭದ್ರತಾ ಕ್ರಮ ಬಿಗಿಗೊಳಿಸಿದಾಗ ವೀರಪ್ಪನ್ ಕರ್ನಾಟಕದ ಪೊಲೀಸರ ಕೈಗೆ ಸಿಕ್ಕಿಬಿದ್ದಿದ್ದ. ಬೆಂಗಳೂರಿಗೂ ಅವನನ್ನು ಕರೆತಂದಿದ್ದರು. ಆದರೂ ಅವನು ತಪ್ಪಿಸಿಕೊಂಡು ಹೋದನೆಂದು ಸುದ್ದಿ ಹಬ್ಬಿಸಿದರು. ಆದರೆ ವಾಸ್ತವವಾಗಿ, ಆಗ ಅಧಿಕಾರದಲ್ಲಿದ್ದ ರಾಜಕಾರಣಿಗಳೆ ಅವನನ್ನು ಬಿಡುಗಡೆ ಮಾಡುವಂತೆ ಒತ್ತಾಯ ತಂದು, ತಪ್ಪಿಸಿಕೊಂಡು ಹೋದನೆಂಬ ನಾಟಕ ಮಾಡಿದರು. ಈ ಮಾತನ್ನು ಹೇಳುವಾಗ ಯಾವುದೇ ಗುಟ್ಟನ್ನು, ಸಂಶೋಧನೆ ಮಾಡಿ ಹೇಳುತ್ತೇವೆಂದಲ್ಲ. ಈ ಸತ್ಯ ಈಗಲೆ ವಿಧಾನ ಸಭೆಯ ಮೊಗಸಾಲೆಯಲ್ಲೆ ಡಣಾಡಂಗುರವಾಗಿ ಬಾರಿಸಿತು.

ವೀರಪ್ಪನ್ ೪೦ ಸಾವಿರ ಕೆಜಿ ದಂತವನ್ನು, ಒಂದು ನೂರು ಕೋಟಿ ಬೆಲೆ ಗಂಧವನ್ನು ಅರಣ್ಯದಲ್ಲೇ ಹುದುಗಿಟ್ಟು ಮಾರಲಿಲ್ಲ. ಕೇರಳ, ಮುಂಬೈ ಚೆನ್ನೈವರೆಗೆ ಸಾಗಿಸಿದ. ಅರಣ್ಯದಲ್ಲಿದ್ದ ಕಲ್ಲು ಬಂಡೆ ಗಣಿಗಳನ್ನು ಯಾರ ಕಿವಿಗೂ ಬೀಳದೆ ಸ್ಫೋಟ ಮಾಡಲಿಲ್ಲ. ಅಥವಾ ಅದರಿಂದ ಬಂದ ಎಷ್ಟೋ ಸಾವಿರ ಕೋಟಿ ರೂ.ಗಳನ್ನು ಅವನೊಬ್ಬನೆ ತಿಂದು ನೀರು ಕುಡಿಯಲಿಲ್ಲ. ಅದರಲ್ಲಿ ಅವನಿಗೆ ಸ್ವಂತಕ್ಕೆ ಸಲ್ಲಿಸಬಹುದಾದದ್ದು ಒಂದೇ ಒಂದು ಕೋಟಿಯೂ ಆಗಿರಲಿಕ್ಕಿಲ್ಲ. ಉಳಿದ ಸಾವಿರಾರು ಕೋಟಿಯಲ್ಲಿ ಬಹುಪಾಲು ಶೇಕಡಾ ೫೦ರಷ್ಟಾದರೂ ಭ್ರಷ್ಟ ಸರ್ಕಾರಿ ನೌಕರರ ಬಾಯಿಗೆ ಬಿದ್ದಿರಬೇಕು. ಇನ್ನು ಉಳಿದರ್ಧದಲ್ಲಿ ಅರಣ್ಯ ನಿವಾಸಿಗಳಿಗೆ, ಅವನ ಸಹಚರರಿಗೆ, ಮುಖ್ಯವಾಗಿ ರಾಜಕಾರಣಿಗಳಿಗೆ ಅದರಲ್ಲೂ ಕರ್ನಾಟಕದ ರಾಜಕೀಯ ಪುಢಾರಿಗಳಿಗೇ ಹೋಗಿರಬೇಕು!! ವೀರಪ್ಪನ್ ಏನೂ ಸದಾಶಿವ ನಗರ, ಇಂದಿರಾ ನಗರ, ಕೋರಮಂಗಲ ಮುಂತಾದ ಕಡೆ ಅರಮನೆಗಳನ್ನೇನೂ ಕಟ್ಟಿಕೊಂಡಿಲ್ಲ. ಮುಂಬೈನಲ್ಲಿ ಉದ್ದಿಮೆಗಳನ್ನು ಸ್ಥಾಪಿಸಿಲ್ಲ. ವಿದೇಶೀ ಕಳ್ಳ ವ್ಯಾಪಾರದಲ್ಲಿ ತೊಡಗಿ ಶ್ರೀಮಂತನಾಗಿಲ್ಲ!! ಅವನು ದರೋಡೆ ಮಾಡಿದ ಹಣ ಇತರರ ಪಾಲಾಗಿದೆ. ಇಲ್ಲದೆ ಹೋಗಿದ್ದರೆ, ದಂಡುದಳ ಸರ್ಕಾರೀ ಯಂತ್ರದ ರಾಜ್ಯಾಧಿಕಾರ ಅವನನ್ನು ಹಿಡಿಯಲು ಯಾಕೆ ಸೋತುಹೋಗುತ್ತಿತ್ತು?!

ಎರಡೂ ರಾಜ್ಯಗಳಲ್ಲಿ ಮಾಡಬೇಕಾದ ಈ ಕಾರ್ಯಾಚರಣೆಯಲ್ಲಿ ತಮಿಳುನಾಡು ಸರ್ಕಾರ ಅಷ್ಟೊಂದು ಆಸಕ್ತಿ ತೋರುತ್ತಿಲ್ಲವೆಂದು ನಮ್ಮ ಮುಖ್ಯಮಂತ್ರಿಗಳು ಪತ್ರಿಕಾ ಹೇಳಿಕೆ ಕೊಟ್ಟರು!! ಇದು ಅಸಲು ಸತ್ಯ. ಆ ಸತ್ಯವನ್ನು ಗುರುತಿಸಿ ಬಯಲು ಮಾಡಿದ್ದು ಜನರಿಗೆ ಹೊಸತೆಂದು ತೋರಬಹುದು. ಆದರೆ ತಮಿಳುನಾಡಿನ ಜಾಣತನ ಬಲ್ಲವರಿಗೆ ಇದು ಹೊಸದಲ್ಲ. ತಮಿಳುನಾಡಿನ ಮೂಲ ಸಿದ್ಧಾಸ್ತ-ತಮಿಳರು ಎಲ್ಲಿಯೆ ಇರಲಿ, ಅವರು ಏನೇ ಮಾಡಲಿ ಅವರ ರಕ್ಷಣೆ ತಮಿಳುನಾಡಿನ ಆದ್ಯ ಕರ್ತವ್ಯ. ತಮಿಳರ ಈ ಮೂಲ ಸಿದ್ಧಾಸ್ತಕ್ಕೆ ನೆರವಾಗುವಂತೆ ಕರ್ನಾಟಕದ ಭ್ರಷ್ಟ ರಾಜಕಾರಣಿಗಳ, ನೌಕರರ, ಎಂಜಲಿಗೆ ಕೈಚಾಚುವ ಜನರ ನೀಚ ಸ್ವಭಾವವೂ ಸೇರಿಕೊಂಡು ವೀರಪ್ಪನ್ ಬೆಳೆದುಬಿಟ್ಟಿದ್ದಾನೆ. ಎರಡೂ ರಾಜ್ಯಗಳು ಒಂದಾಗಿ ಕಾರ್ಯಾಚರಣೆ ಮಾಡಿದ್ದರೆ ಒಬ್ಬ ವೀರಪ್ಪನ್‌ನನ್ನು ಹಿಡಿಯಲು ಅಸಾಧ್ಯವಾಗುತ್ತಿತ್ತೆ? ಅಂಥ ಅಸಮರ್ಥ ಸರ್ಕಾರ ಆಡಳಿತ ನಡೆಸಲು ಅರ್ಹವೆ?

ಈ ಮಾತು ನಿಜವಿರಬೇಕೆಂಬುದಕ್ಕೆ ಇನ್ನೊಂದು ಸತ್ಯಸಂಗತಿಯನ್ನು ಗಮನಿಸಬೇಕು. ಎಲ್‌ಟಿಟಿ (ಲಂಕಾ ತಮಿಳು ಉಗ್ರಗಾಮಿ)ಗಳು ಶ್ರೀಲಂಕಾದಲ್ಲಿ ಪ್ರತ್ಯೇಕ ರಾಜ್ಯ ಬೇಕೆಂದು ಹೂಡಿರುವ ವಿಧ್ವಂಸಕ ಹೋರಾಟಕ್ಕೆ ತಮಿಳುನಾಡು ಸಹಾಯ ಮಾಡುತ್ತಿದೆ ಎಂದೇ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಚಂದ್ರಶೇಖರ್ ಕರುಣಾನಿಧಿ ಸರ್ಕಾರವನ್ನು ವಜಾ ಮಾಡಿದ್ದು, ಎಲ್.ಟಿ.ಟಿ.ಗೆ ಮೊದಲು ಧನ ಸಹಾಯ ಮಾಡಿ ಪ್ರಭಾಕರನ್‌ಗೆ ಬೆಂಬಲ ಕೊಟ್ಟವರು ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಇಂದಿರಾ ಗಾಂಧಿ. ಎಲ್‌ಟಿಟಿ ಸಹಾಯದಿಂದಲೆ ಧನು ಮಾನವ ಬಾಂಬ್‌ನಿಂದ ರಾಜೀವ ಗಾಂಧಿ ಹತ್ಯೆಯಾಗಿದ್ದು, ಆದರೂ ಈಗಲೂ ಎಲ್.ಟಿ.ಟಿ.ಗೆ ನಮ್ಮ ದೇಶದಲ್ಲಿ ವಾಸ್ತವ್ಯ, ನಿರಾಶ್ರಿತರೆಂದು ರಕ್ಷಣೆ! ಯಾಕೆ? ಅವರು ತಮಿಳರು ಎಂಬ ಕಾರಣದಿಂದ. ಅದನ್ನು ವಿರೋಧಿಸುವುದಕ್ಕೆ ಕೇಂದ್ರಕ್ಕೂ ಧೈರ್ಯವಿಲ್ಲ.

ಅಮೆರಿಕಾ, ಕೆನಡಾ ದೇಶಗಳು ತಮಿಳು ಉಗ್ರಗಾಮಿಗಳನ್ನು ವಿಧ್ವಂಸಕ ಸಂಸ್ಥೆ (Terrorist Organization) ಎಂದು ಅವರ ಪ್ರವೇಶವನ್ನು ನಿಷೇಧಿಸಿವೆ. ಆದರೆ ನಮ್ಮ ದೇಶ ಅವರಿಗೆ ರಕ್ಷಣೆ ನೀಡುತ್ತಿದೆ. ಕಾಶ್ಮೀರದಲ್ಲಿ ವಿಧ್ವಂಸಕ ಕೃತ್ಯ ನಡೆಸುತ್ತಿರುವ 'ಹುರಿಯತ್' ಉಗ್ರಗಾಮಿಗಳೆಂದೂ, ಅವರಿಗೆ ಪಾಕಿಸ್ತಾನ ರಕ್ಷಣೆ ಕೊಡಬಾರದೆಂದು ಯುಕ್ತರಾಷ್ಟ್ರ ಸಂಸ್ಥೆ ಹೇಳುತ್ತದೆ. ಅದನ್ನು ಭಾರತ-ಅನುಮೋದಿಸುತ್ತಿದೆ. ಆದರೆ ಶ್ರೀಲಂಕಾ ದೇಶವನ್ನು ಛಿದ್ರ ಛಿದ್ರ ಮಾಡುವ ಎಲ್.ಟಿ.ಟಿ.ಅನ್ನು ಭಾರತ ಬಹಿಷ್ಕರಿಸುತ್ತಿಲ್ಲ! ಯಾಕೆ? ಅವರು ತಮಿಳರು ಎಂದು. ಇದು ತಮಿಳುನಾಡಿಗೆ ಚೆನ್ನಾಗಿ ಗೊತ್ತು. ಅದನ್ನು ತಿಳಿಯದ ಮೂರ್ಖರು ಕರ್ನಾಟಕದವರು.

ಈಗ ವೀರಪ್ಪನ್‌ನನ್ನು ಸೆರೆಹಿಡಿಯುವುದು ಅಸಾಧ್ಯವಾಗಿರುವುದನ್ನು ಒಪ್ಪಿಕೊಳ್ಳಲಾಗಿದೆ. ಅವನು ಶರಣಾಗತನಾಗಲು ಒಪ್ಪಿದರೆ, ಮೊದಲು ಕಾನೂನು ಕ್ರಮ ಜರಗಬೇಕು. ಅವನು ವಿಚಾರಣೆಯನ್ನು ಎದುರಿಸಲೇಬೇಕು. ಶಿಕ್ಷೆ ಆದರೂ, ರಾಜ್ಯಪಾಲರು ಅವನ ತಪ್ಪನ್ನು ಕ್ಷಮಿಸಿ, ಶಿಕ್ಷೆಯನ್ನು ರದ್ದುಪಡಿಸಿ ಕ್ಷಮಾಧಾನ ಮಾಡಬಹುದು. ಹಾಗೆ ಮಾಡುವುದರಿಂದ ಕಾನೂನಿಗೆ ಮನ್ನಣೆ ಕೊಟ್ಟಂತೆಯೂ ಆದೀತು. ವೀರಪ್ಪನ್ ನಿಜವಾಗಿಯೂ ಮಾನವೀಯ ವ್ಯಕ್ತಿಯೆಂದು ಈಗ ಸರ್ಟಿಫಿಕೇಟ್ ಕೊಡುವ 'ಬುದ್ಧಿಜೀವಿಗಳ' ಮಾತಿಗೂ ಬೆಲೆ ಕೊಟ್ಟಂತೆ. ಕೊನೆಗೆ ಸರ್ಕಾರದ ಮುಖವೂ ಉಳಿದೀತು; ತಲೆನೋವೂ ತಪ್ಪೀತು! ಹೇಗಿದೆ ಉಪಾಯ?

**ವೀರಪ್ಪನ್ ಸತತ ಎರಡು ದಶಕಗಳಿಂದ ಎರಡು ರಾಜ್ಯಗಳಲ್ಲಿ ಈ ನರಹತ್ಯೆ, ಮರಹತ್ಯೆ, ಕರಿಹತ್ಯೆ ಮಾಡುತ್ತಿದ್ದಾನೆ ಎಂದರೆ ಇದು ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ತಿಳಿಯದೆ ನಡೆದಿರಬಹುದೆ? ಸರ್ಕಾರಿ ನೌಕರರ ಮತ್ತು ರಾಜಕಾರಣಿಗಳ ಕುಮ್ಮಕ್ಕು, ರಕ್ಷಣೆ ಇಲ್ಲದೆ ಆಗಿರಲಾರದು.**

# ಕ್ಲಾಸ್ ರೂಂ

## ಚೀಟಿ ಶಿಕ್ಷಕ

ನಮ್ಮ ಕಾಲೇಜಿನ ಅಧ್ಯಾಪಕರೊಬ್ಬರು ಯಾವಾಗಲೂ ಚೀಟಿ ನೋಡಿ ಗಣಿತ ವಿಷಯ ಬರೆಸುತ್ತಿದ್ದರು. ಒಂದು ಸಲ ಒಂದು ಗಂಟೆಯ ಕ್ಲಾಸನ್ನು ಅರ್ಧ ಗಂಟೆ ತೆಗೆದುಕೊಂಡು ಸಾಕೆಂದರು. ಆಗ ವಿದ್ಯಾರ್ಥಿಗಳು ಇನ್ನು ಅರ್ಧ ಗಂಟೆ ತೆಗೆದುಕೊಳ್ಳಿ ಎಂದು ಬಹಳ ಒತ್ತಾಯಿಸಿದಾಗ ಸಿಟ್ಟಿಗೆದ್ದ ಅಧ್ಯಾಪಕರು ನನ್ನ ಹತ್ತಿರ ಇದ್ದ ಚೀಟಿ ಮುಗಿದಿದೆ ಹೋಗಿ ಎಂದು ಹೇಳಬೇಕೇ?

**– ರಂಜಿತ ಪಿ. ಗಿಂಗಿಂಟೆ,**
ಬೇಲೂರ

## ಕ್ಯಾನ್ ಐ ಗೋ ಔಟ್!

ಅದು 'ಫಂಕ್ಷನಲ್ ಇಂಗ್ಲಿಷ್' ಕ್ಲಾಸಾಗಿತ್ತು. ನಾನಾಗ ಬಿ.ಎ. ದ್ವಿತೀಯ ವರ್ಷದಲ್ಲಿ ಓದುತ್ತಿದ್ದೆ. ಕರ್ನಾಟಕದ ಪ್ರತಿಷ್ಠಿತ ಧಾರವಾಡದ 'ಕರ್ನಾಟಕ ಕಲಾ ಮಹಾ ವಿದ್ಯಾಲಯ'ದ ವಿದ್ಯಾರ್ಥಿ ನಾನು.

ನಮ್ಮ ಇಂಗ್ಲಿಷ್ ಉಪನ್ಯಾಸಕರೊಬ್ಬರು ನನಗೆ ಆಕ್ಸುಲಿಯರೀಸ್ (Auxuliaries) ಮೇಲೆ ಸೆಮಿನಾರ್ ಮಾಡಲು ಹೇಳಿದ್ದರು. ನಾನು ಮಾಡುತ್ತಿದ್ದೆ. ಕ್ಯಾನ್ (can) ಅದರ ಅರ್ಥ ಹಾಗೂ ಹೇಗೆ ಬಳಸಬೇಕೆಂದು ವಿವರಿಸಿ ನನ್ನ ಸಹಪಾಠಿಯೊಬ್ಬಳನ್ನು ಕ್ಯಾನ್ ಉಪಯೋಗಿಸಿ ವಾಕ್ಯ ರಚಿಸುವಂತೆ ಕೇಳಿದೆ. ಆಗ ಆಕೆ, ''ಕ್ಯಾನ್ ಆಯ್ ಗೋ ಔಟ್ ಆಫ್ ದ ಕ್ಲಾಸ್?'' ಎಂದೊಡನೆ ಎಲ್ಲರೂ ನಗಲಾರಂಭಿಸಿದರು.

**– ಜಗದೀಶ ವಿ. ಅಂಗಡಿ,**
ಧಾರವಾಡ

## ದಡ್ಡ ಗುರು

ಇದು ಹುನಗುಂದದಲ್ಲಿ ನಡೆದ ಘಟನೆ. ಗುರುಗಳು ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ, ''ಇಲ್ಲಿ ಇರುವ ದಡ್ಡರು ನಿಂತುಕೊಳ್ಳಿ'' ಎಂದು ಹೇಳಿದರು. ಕೊನೆಗೆ ಕಿಡಿಗೇಡಿ ಭೀಮ ಎದ್ದು ನಿಂತು, ಈ ರೀತಿ ಹೇಳಿದ, ''ಗುರುಗಳೇ, ನೀವು ಒಬ್ಬರೇ ನಿಂತಿರುವುದು ನನಗೆ ಇಷ್ಟವಾಗಲಿಲ್ಲ. ಅದಕ್ಕೆ ನಾನೂ ನಿಂತೆ''!

**– ಬಸವರಾಜ ಬೈಲಕೂರ,**
ಹುನಗುಂದ

## ಫಲಿಸಿದ ಉಪಾಯ

ನಾನಾಗ ಪ್ರಥಮ ವರ್ಷದ ಡಿಪ್ಲೋಮಾ ಓದುತ್ತಿದ್ದೆ. ಬಲು ಉತ್ಸಾಹದಿಂದ ಎಲ್ಲ ವಿದ್ಯಾರ್ಥಿ ವಿದ್ಯಾರ್ಥಿನಿಯರು ಕಾಲೇಜಿನ ಮೊದಲನೇ ದಿನ ಕ್ಲಾಸಿಗೆ ಬಂದಿದ್ದರು. ಮೊದಲನೆಯ ಅವಧಿ (period) ಹೇಳಲು ಒಬ್ಬ ಯುವ Lecturer ಬಂದರು. ಮೊದಲು ನಿಮ್ಮೆಲ್ಲರ ಪರಿಚಯ ಮಾಡಿಕೊಡಿ ಎಂದು ಹೇಳಿ ಎಲ್ಲ ಹುಡುಗಿಯರ ಹೆಸರು ಕೇಳ ಹತ್ತಿದರು. ಎಲ್ಲ ಹುಡುಗಿಯರು ನಿರ್ಭಿಡೆಯಾಗಿ ತಮ್ಮ ಹೆಸರು ಹಾಗೂ ತಮ್ಮ ಊರು ತಿಳಿಸಿದರು. ನಂತರ ಹುಡುಗರ ಸರದಿ ಬಂದಾಗ ಇಷ್ಟೇ ಸಾಕು, ಈಗ ಅವಧಿ ಪ್ರಾರಂಭಿಸೋಣ ಎಂದು ಹೇಳಿ Black Board ಮೇಲೆ ಬರೆಯಲು ಪ್ರಾರಂಭಿಸಿದರು. ಆಗ ಅವರು ಅಲ್ಲಿ "I am also a student. Please work very hard for better results" ಎಂದು ಬರೆದು ಹಿಂದಿನ ಬೆಂಚಿನಲ್ಲಿ ಕುಳಿತರು. ಆಗಲೇ ನಮಗೆ ತಿಳಿದದ್ದು ಅವನೂ ಕೂಡ ನಮ್ಮ ಹಾಗೆಯೇ ವಿದ್ಯಾರ್ಥಿಯೆಂದು. ಹುಡುಗಿಯರ ಹೆಸರುಗಳನ್ನು ತಿಳಿದುಕೊಳ್ಳಲು ಅವನು ಮಾಡಿದ ಉಪಾಯ ಫಲಿಸಿತ್ತು.

**– ಬಿ.ಜಿ. ಶ್ರೀಪಾದ, ಲಕ್ಷ್ಮೇಶ್ವರ**

## ಕೃಷ್ಣನ ಗೆಳೆಯ

ನಾನು ಎಂಟನೆ ತರಗತಿಯಲ್ಲಿ ಓದುತ್ತಿದ್ದಾಗ ನನ್ನ ಮುಂದಿನ ಸಾಲಿನಲ್ಲಿ ಮೂವರು ಗೆಳೆಯರು ಕೂಡುತ್ತಿದ್ದರು. ಅದರಲ್ಲಿ ಒಬ್ಬನ ಹೆಸರು ಕೃಷ್ಣ. ಮೂವರು ಕೀಟಲೆ ಮಾಡುತ್ತಾ ಕೂಡುತ್ತಿದ್ದರು. ಅಂದು ನಮ್ಮ ಉಪಾಧ್ಯಾಯರು ಕನ್ನಡ ಪಾಠದಲ್ಲಿನ ''ಪರಮಾತ್ಮ ಶ್ರೀಕೃಷ್ಣನ'' ಪಾಠ ಮಾಡುತ್ತಿದ್ದರು. ಪಾಠ ಮಾಡುವಾಗ ಶ್ರೀ ಕೃಷ್ಣನ ಆಪ್ತ ಗೆಳೆಯ ಸುಧಾಮನೆಂದು ಹೇಳಿದರು. ನಮ್ಮ ಮುಂದೆ ಕುಳಿತ ಮೂವರು ಏನೋ ಮಾತನಾಡುವುದನ್ನು ನೋಡಿ ಉಪಾಧ್ಯಾಯರು ಒಬ್ಬನನ್ನು ಎದ್ದು ನಿಲ್ಲಿಸಿ ಕೃಷ್ಣನ ಗೆಳೆಯ ಯಾರು ಎಂದು ಕೇಳಿದರು. ಆಗ ಆ ಹುಡುಗ ತನ್ನ ಪಕ್ಕದಲ್ಲಿ ಕುಳಿತ ಕೃಷ್ಣನನ್ನು ನೋಡಿ ಕೃಷ್ಣನ ಗೆಳೆಯ ನಾನೆ ಎಂದಾಗ ಉಪಾಧ್ಯಾಯರ ಜೊತೆ ನಾವೂ ನಕ್ಕಿದ್ದೆ ನಕ್ಕಿದ್ದು.

**– ಮಯೂರ ಮರೇಗುದ್ದಿ, ಹುಬ್ಬಳ್ಳಿ**

## ಕಾಕತಾಳೀಯ

ನಾನು ಪ್ರಥಮ ಪಿ.ಯು.ಸಿ. ವಿಜ್ಞಾನ ವಿಭಾಗದ ವಿದ್ಯಾರ್ಥಿ. ನಾಲ್ಕಾರು ದಿನಗಳ ಹಿಂದೆ ನಡೆದ ಘಟನೆ ಇದು. ನಮ್ಮ ಪ್ರಾಚಾರ್ಯರು ಗಣಿತದ ಪ್ರಥಮ ಅವಧಿಗೆ ಬಂದು ಹಾಜರಿ ತೆಗೆದುಕೊಳ್ಳುತ್ತಿದ್ದರು. ಹಾಜರಿ ತೆಗೆದುಕೊಳ್ಳುತ್ತಾ ಒಬ್ಬ ಹುಡುಗಿಯ ಹೆಸರು ಬಂದಾಗ ಅವಳು ಇರಲಿಲ್ಲ. ಕೂಡಲೇ ನಾನು ನನ್ನ ಮುಂದೆ ಮಾತಿನಲ್ಲಿ ತಲ್ಲೀನನಾಗಿದ್ದ ನನ್ನ ಸ್ನೇಹಿತನನ್ನು ಭಾವೋದ್ವೇಗದಿಂದ ೨ ಬಾರಿ ಮೆತ್ತಗೆ ಕೂಗಿದೆ. ಪ್ರಾಚಾರ್ಯರು ಇನ್ನೊಮ್ಮೆ ಆ ಹುಡುಗಿಯ ಹೆಸರನ್ನು ಕೂಗಿ ಗೈರು ಹಾಜರು ಎಂಬುದನ್ನು ಖಚಿತಪಡಿಸಿಕೊಳ್ಳುವ ಸಮಯಕ್ಕೆ ಸರಿಯಾಗಿ ನನ್ನ ಸ್ನೇಹಿತ ಹಾಜರಿ ಹೇಳಿಬಿಟ್ಟನು!

**– ಪಿ. ಪ್ರಶಾಂತ,** ದಾವಣಗೆರೆ

## ಆ ಘಟನೆ !

ನಾನಾಗ ಕೀಟಲೆ ಸ್ವಭಾವದವನು. ಪಕ್ಕದಲ್ಲಿದ್ದ ಸ್ನೇಹಿತನ ಜೊತೆ ಹುಡುಗಿಯೊಬ್ಬಳ ಬಗ್ಗೆ ಗುಸು, ಗುಸು, ಮಾತನಾಡುತ್ತಾ ಸಂತೋಷದಲ್ಲಿದ್ದೆ. ನನ್ನನ್ನು ನೋಡಿದ ಗುರುಗಳು. ತಮ್ಮ ತೊದಲಿನ ಬಗ್ಗೆ ಹಾಸ್ಯ ಮಾಡಿ ನಗುತ್ತಿದ್ದಾನೆಂದು ಭಾವಿಸಿ ನನ್ನನ್ನು ತಮ್ಮಲ್ಲಿಗೆ ಕರೆದು ಸಿಟ್ಟಿನಿಂದ ಕಿವಿ ಹಿಡಿದು ಎಳೆದು ಹತ್ತಾರು ಸಲ ನನ್ನ ಕೆನ್ನೆಗೆ ಬಾರಿಸಿದರು. ಕಿವಿ ಹಿಡಿದು ಜಗ್ಗುವ ರಭಸಕ್ಕೆ ನನ್ನ ಕಿವಿಯಿಂದ ರಕ್ತ ಸುರಿಯಿತು. ಆಗ ಗುರುಗಳು ಹೊಡೆಯುವುದನ್ನು ನಿಲ್ಲಿಸಿದರು. ನಾನು ಮನೆಗೆ ಬಂದು ಗುರುಗಳ ಬಗ್ಗೆ ಚಾಡಿ ಹೇಳಲಿಲ್ಲ. ಅದೇ ಒಂದು ಪಾಠವೆಂದು ಭಾವಿಸಿದೆ. ಅಂದಿನಿಂದ ಇಂದಿನವರೆಗೆ ನಾನು ಗುರುಗಳು ಮುಂದಿರುವಾಗ ಕೀಟಲೇ ಮಾಡುವುದನ್ನು ನಿಲ್ಲಿಸಿಯೇ ಬಿಟ್ಟೆ. ಈಗ ಡಬಲ್ ಗ್ರ್ಯಾಜುಯೆಟ್ ಆಗಿ ನೌಕರಿಗಾಗಿ ಕಾಯುತ್ತಿದ್ದೇನೆ.

**– ಮಿರ್ಜಾ ನವೀನ್‌ಕುಮಾರ್**
ಕನಕಗಿರಿ

## ಹಾಸನದಲ್ಲಿ ವಿಶೇಷ ಪ್ರಯತ್ನ!

# ಪರಿಸರ ಪ್ರಿಯ ಕೃಷಿಕರ ಸಭೆಗಳು



○ ಡಾ. ವಿಜಯ್ ಅಂಗಡಿ
ಕೃಷಿರಂಗ ವಿಭಾಗ, ಆಕಾಶವಾಣಿ
ಹಾಸನ - ೫೭೩ ೨೦೧

ಕೃಷಿಪರಿಸರ ಇಂದು ಕಲುಷಿತವಾಗುತ್ತಿದೆ. ಬೆಳೆ ತೆಗೆಯಲು ಅನೇಕ ರೈತರು ರಾಸಾಯನಿಕ ಗೊಬ್ಬರ ಮತ್ತು ರಾಸಾಯನಿಕ ಔಷಧಿಗಳನ್ನು ಮಿತಿಮೀರಿ ಬಳಸುತ್ತಿರುವುದರಿಂದ ಹಲವು ರೀತಿಯಲ್ಲಿ ದುಷ್ಪರಿಣಾಮಗಳು ಕಂಡುಬರುತ್ತಿವೆ. ಆಹಾರ ಉತ್ಪಾದನೆಗೆ ಬಳಸಿದ ಈ ರಾಸಾಯನಿಕಗಳು ನಮ್ಮ ದೇಹವನ್ನು ಪ್ರವೇಶಿಸಿ ಆರೋಗ್ಯವನ್ನು ಕೆಡಿಸುತ್ತಿವೆ. ಉಪಕಾರಿ ಜೀವಿಗಳಿಗೆ ಮಾರಕವಾಗಿವೆ. ಹಾನಿಕಾರಕ ಜೀವಿಗಳು ಮತ್ತಷ್ಟು ಹೆಚ್ಚುತ್ತಿವೆ. ಹೆಚ್ಚೆಚ್ಚು ರಾಸಾಯನಿಕಗಳಿಂದ ಮಣ್ಣಿನ ಸತ್ವ ಕಡಿಮೆಯಾಗುತ್ತಿದೆ. ರೈತರಲ್ಲಿ ಪರಾವಲಂಬಿತನ ಹೆಚ್ಚುತ್ತಿದ್ದು ಸಮಸ್ಯೆಗಳು ಉಲ್ಬಣಿಸುತ್ತಿವೆ. ಜನ-ಜಾನುವಾರುಗಳ ಬಾಂಧವ್ಯ ಕಡಿಮೆಯಾಗುತ್ತಿದ್ದು ಸಗಣಿ ಗೊಬ್ಬರದ ಬಳಕೆಯಲ್ಲಿ ಬೇಸಾಯಸ್ಥರು ಹೆಚ್ಚು ಗಮನ ಕೊಡುತ್ತಿಲ್ಲ. ಮಣ್ಣಿಗೆ ಸಾವಯವ ಗೊಬ್ಬರಗಳನ್ನು ತಕ್ಕಷ್ಟು ಹಾಕದಿದ್ದರೆ ಆ ಮಣ್ಣಿನಲ್ಲಿ ಎರೆಹುಳುಗಳು, ಉಪಕಾರಿ ಸೂಕ್ಷ್ಮ ಜೀವಿಗಳು ಕಡಿಮೆಯಾಗುತ್ತವೆ. ಬದಲಿಗೆ ರೋಗಕಾರಕ ಜೀವಿಗಳು ಹುಟ್ಟಿಕೊಳ್ಳುತ್ತವೆ.

ಕೃಷಿಯಲ್ಲಿ ವೈವಿಧ್ಯತೆ ಸಾಕಷ್ಟು ಆಗಬೇಕಾಗಿದೆ. ಬರೀ ಒಂದೆರಡು ಬೆಳೆಗಳನ್ನು ಬೆಳೆದರೆ ಅದು ಪರಿಪೂರ್ಣವಾದ ಕೃಷಿಯಾಗಲಾರದು. ಹಲವು ತೆರನಾದ ಬೆಳೆಗಳನ್ನು ಬೆಳೆಸುವುದರ ಜೊತೆಗೆ ಜಾನುವಾರು ಸಾಕಣೆಯನ್ನು ಕೈಗೊಂಡರೆ ಅವಲಂಬನೆ ಬಹಳಷ್ಟು ಕಡಿಮೆಯಾದೀತು. ಪಕ್ಷಿಗಳಿಗೆ ಆಶ್ರಯ ನೀಡುವ ಗಿಡಮರಗಳನ್ನು ತೋಟದಲ್ಲಿ ಬೆಳೆಸುವುದು ಕೃಷಿ ಪರಿಸರಕ್ಕೆ ಹೆಚ್ಚು ಅನುಕೂಲವಾದೀತು.

### ಸ್ವಾವಲಂಬಿತನ

ಕೃಷಿಕರು ತಮ್ಮಲ್ಲಿ ಉದ್ಭವವಾಗುವ ಸಮಸ್ಯೆಗಳನ್ನು ತಮ್ಮಲ್ಲೇ ಪರಿಹರಿಸಬಹುದು. ಮಣ್ಣು ಸಮೃದ್ಧವಾಗಿದ್ದರೆ ಸಹಜವಾಗಿ ಬೆಳೆ ಉತ್ಕೃಷ್ಟವಾಗಿ ಬೆಳೆಯುತ್ತದೆ. ಒಂದು ಸಮಯ ಕನಿಷ್ಠ ಮಟ್ಟದಲ್ಲಿ ರೋಗ ಕೀಟಗಳು ಕಾಣಿಸಿಕೊಂಡಾಗ ಅನಗತ್ಯವಾಗಿ ಬಾಟಲ್ ಔಷಧಿಗಳನ್ನು ಸಿಂಪಡಿಸುವುದು ಒಳ್ಳೆಯದಲ್ಲ. ನಮ್ಮಲ್ಲೇ ಗಿಡಮೂಲಿಕೆಗಳಿಂದ ಔಷಧಿಗಳನ್ನು ತಯಾರಿಸಿಕೊಂಡು ಮಿತ ಖರ್ಚಿನಲ್ಲಿ ಕೀಟ-ರೋಗಗಳನ್ನು ಹತೋಟಿ ಮಾಡಬಹುದು. ಹೀಗೆ ಕೃಷಿಯಲ್ಲಿ ಅವಲಂಬನೆಗಿಂತ ಸ್ವಾವಲಂಬನೆಯನ್ನು ಅಳವಡಿಸಲು, ಕೃಷಿಯಲ್ಲಿ ಶೋಷಣೆಯನ್ನು ಕಡಿಮೆಗೊಳಿಸಿ, ಸಮಸ್ಯೆಗಳನ್ನು ಮಿತಗೊಳಿಸಲು, ಹಾಗೂ ಸಾಂಪ್ರದಾಯಿಕ ಕೃಷಿ ವಿಧಾನಗಳನ್ನು ಜನಪ್ರಿಯಗೊಳಿಸಲು 'ಕೃಷಿಕರಿಂದ ಕೃಷಿಕರಿಗೆ' ತಂತ್ರಜ್ಞಾನವನ್ನು ಪ್ರಚುರಪಡಿಸಲು ಪರಿಸರ ಪ್ರಿಯ ಕೃಷಿಕರ ಸಭೆಗಳನ್ನು ಹಾಸನದಲ್ಲಿ ರೈತರೇ ಕೂಡಿಕೊಂಡು ನಡೆಸುತ್ತಿರುವುದು ರಾಜ್ಯದಲ್ಲೇ ವಿಶೇಷ ಸಂಪ್ರದಾಯವನ್ನು ಹುಟ್ಟು ಹಾಕಿದೆ.

### ರೈತರದೇ ಖರ್ಚು

ಪ್ರತಿ ತಿಂಗಳು ನಡೆಯುವ ಈ ಸಭೆಗಳಲ್ಲಿ ರೈತರ ಅನುಭವಗಳಿಗೆ ಹೆಚ್ಚು ಆದ್ಯತೆ. ಇಲ್ಲಿ ರೈತರೇ ತಜ್ಞರು. ದಿನವಿಡೀ ದುಡಿದ ರೈತನ ಹಲವು ಅಮೂಲ್ಯ ಅನುಭವಗಳನ್ನು ವಿನಿಮಯ ಮಾಡಿಕೊಳ್ಳುವುದೂ ಸೇರಿದಂತೆ ಪರಿಸರಕ್ಕೆ ಧಕ್ಕೆ ಆಗದ ಕೃಷಿ ಪದ್ಧತಿಗಳನ್ನು ಜನಪ್ರಿಯಗೊಳಿಸಲು ಇಲ್ಲಿ ಚರ್ಚಿಸಲಾಗುವುದು. ರೈತರ ತೋಟಗಳಲ್ಲಿ ಸ್ವಾಭಾವಿಕ ವಾತಾವರಣದಲ್ಲಿ ನಡೆಯುವ ಈ ಸಭೆಗಳಿಗೆ ತಗುಲುವ ವೆಚ್ಚವೆಲ್ಲಾ ರೈತರದೇ. ಯಾರ ಸಹಾಯವನ್ನೂ ಬೇಡದೇ, ಯಾರನ್ನೂ ಅಂಗಲಾಚದೇ, ಅವರಿವರಿಗೆ ಕಾಯದೇ, ಹಾರತುರಾಯಿ ಇಲ್ಲದೇ ಬಹು ಸರಳವಾಗಿ ರೈತರ ಖರ್ಚಿನಲ್ಲೇ ನಡೆಯುವ ಈ ಸಭೆಗಳಿಗೆ ಹೆಚ್ಚು ಮಹತ್ವ ಬಂದಿದೆ. ಸಭೆಗಳಿಗೆ ಬರುವ ರೈತರಿಗೆಲ್ಲಾ ಸಮಾನ ಸ್ಥಾನಮಾನ, ವಿಚಾರ ವಿನಿಮಯ ಮಾಡಲು ಸಮಾನ ಅವಕಾಶ. ಇಲ್ಲಿ ಯಾರನ್ನೂ ತೆಗಳದೇ, ದೂಷಿಸದೇ ಮೂಲ ಉದ್ದೇಶಕ್ಕೆ ಮಹತ್ವ ಕೊಡಲಾಗುವುದು. ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ನಡೆಯುವ ಈ ಸಭೆಯಲ್ಲಿ ಪ್ರಾರಂಭಿಕವಾಗಿ ತೋಟ ನೋಡಿಕೊಂಡು ಅಲ್ಲಿನ ವಿಶೇಷತೆಯನ್ನು ಗುರುತಿಸಿ, ಲೋಪದೋಷಗಳಿದ್ದರೆ ಸಲಹೆ ನೀಡಲಾಗುವುದು. ತೋಟ ಅಭಿವೃದ್ಧಿಪಡಿಸಿದ ರೈತ

ರೊಂದಿಗೆ ಚರ್ಚೆ ಇರುತ್ತದೆ. ಸಭೆ ನಡೆಸುವ ತೋಟವು ಚಿಕ್ಕದಿದ್ದರೆ ಆಗಾಗ್ಗೆ ಅನುಭವಿ ರೈತರನ್ನು ಹೊರ ಜಿಲ್ಲೆಗಳಿಂದ ಆಮಂತ್ರಿಸಿ ಅವರ ಸಲಹೆಗಳನ್ನು ಪಡೆಯಲಾಗುವುದು.

ಸಭೆ ನಡೆಸುವ ದಿನದಂದು ಅಲ್ಲಿಯ ವ್ಯವಸ್ಥೆಗೆ ತಗಲುವ ಖರ್ಚನ್ನು ಆ ತೋಟದ ರೈತರೊಬ್ಬರೇ ವಹಿಸಿಕೊಳ್ಳುತ್ತಾರೆ. ಇದರಲ್ಲಿ ಊಟ, ಸಭೆ ನಡೆಸುವ ಖರ್ಚು ಸೇರಿರುತ್ತದೆ. ಸಭೆ ನಡೆಸಲು ಮುದ್ರಿಸುವ ಆಮಂತ್ರಣ ಪತ್ರಗಳ ವೆಚ್ಚವನ್ನು ಎಲ್ಲರೂ ವಹಿಸಿಕೊಳ್ಳುತ್ತಾರೆ. ಒಟ್ಟಾರೆ ಸಭೆ ನಡೆಸುವ ಕಾರ್ಯಕ್ಕೆ ತಗುಲುವ ವೆಚ್ಚವನ್ನು ಎಲ್ಲರೂ ಹಂಚಿಕೊಳ್ಳುತ್ತಾರೆ.

**ಪ್ರವಾಸ:** ಪ್ರತಿ ತಿಂಗಳ ಸಭೆಯಲ್ಲದೇ ವರ್ಷಕ್ಕೆ ಒಂದೆರಡು ಸಾರಿ ಕೃಷಿ ಪ್ರವಾಸವನ್ನು ಏರ್ಪಡಿಸುವುದು ರೂಢಿಯಲ್ಲಿದೆ. ಈ ಪ್ರವಾಸದ ಖರ್ಚನ್ನೂ ರೈತರೇ ಭರಿಸುತ್ತಾರೆ. ಈಗಾಗಲೇ ಎರಡು ಸಾರಿ ಈ ತರಹದ ಕೃಷಿ ಪ್ರವಾಸವನ್ನು ಹಾಕಿಕೊಂಡು ರೈತರಲ್ಲಿ ಕೃಷಿ ಬಗ್ಗೆ ಹೆಚ್ಚು ಅಭಿಮಾನ-ಆತ್ಮವಿಶ್ವಾಸ ಬರುವಂತೆ ಮಾಡಲಾಗಿದೆ. ಇದಲ್ಲದೇ ರೈತರಿಗೆ ಬೇಕಾದ ಪರಿಕರಗಳನ್ನು ತರಿಸಲಾಗುವುದು. ಇದುವರೆಗೆ ಸಾವಿರಾರು ಕಿ.ಗ್ರಾಂ. ಬೇವಿನ ಬೀಜವನ್ನು ತರಿಸಿ ಹಂಚಲಾಗಿದೆ. ಜೈವಿಕ ಗೊಬ್ಬರ, ಹಸಿರೆಲೆ ಗೊಬ್ಬರ ಬೀಜಗಳು, ಅಡಿಕೆ, ಕಾಫಿ, ಮ್ಯಾಂಜಿಯಂ, ಸಪೋಟ, ಪೇರಲ, ನೆಲ್ಲಿ, ಹಲಸು, ಮಾವು, ನಿಂಬೆ ಹೀಗೆ ಅಗತ್ಯವಾಗಿ ಬೇಕಾಗಿರುವ ಸಸಿಗಳನ್ನು ತರಿಸಿ ಹಂಚಿಕೊಳ್ಳಲಾಗಿದೆ.

ರೈತರ ಜವಾಬ್ದಾರಿಯಲ್ಲಿ ರೈತರಿಂದ ರೈತರಿಗೆ ವಿಚಾರ ವಿನಿಮಯ ಮಾಡುವ ಈ ತರಹದ ವಿಶಿಷ್ಟ ಸಭೆಗಳಿಗೆ ನಿರೀಕ್ಷೆಗೆ ಮೀರಿದ ಪ್ರತಿಕ್ರಿಯೆ ದೊರೆತಿದೆ. ಜಿಲ್ಲೆ ಹಾಗೂ ಹೊರ ಜಿಲ್ಲೆಯ ನೂರಾರು ಜನ ರೈತರು ಆಸಕ್ತಿಯಿಂದ ಪಾಲ್ಗೊಂಡು ಅಮೂಲ್ಯ ಅಂಶಗಳನ್ನು ಪಡೆದುಕೊಂಡು ತಮ್ಮ ಜಮೀನುಗಳಲ್ಲಿ ಅಳವಡಿಸಿಕೊಳ್ಳುತ್ತಿದ್ದಾರೆ. ಆಡಂಬರವಿಲ್ಲದೇ, ನಡೆಯುವ ಈ ಸಭೆಗೆ ಅತಿಥಿಗಳು, ಅಧ್ಯಕ್ಷರು ಎಂಬುದಿಲ್ಲ. ಇಂತಹ ಸಂಘಟನೆ ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಪ್ರಾರಂಭವಾಗಬೇಕು. ಆಗ ಮಾತ್ರ ರೈತನ ಬದುಕಿಗೆ ಬೆಲೆ ಇರುತ್ತದೆ.

ಹಾಸನ ಜಿಲ್ಲೆಯಲ್ಲಿ ಈಗಾಗಲೇ ೧೨ ಸಭೆಗಳು ಯಶಸ್ವಿಯಾಗಿ ಮುಗಿದಿದ್ದು, ಈ ಸಭೆಗಳಲ್ಲಿ ವ್ಯಕ್ತವಾಗುವ ವಿಚಾರಗಳನ್ನು ದಾಖಲಿಸಿ 'ಕೃಷಿಕರಿಂದ ಕೃಷಿಕರಿಗೆ-ಪರಿಸರ ಪ್ರಿಯ ಕೃಷಿ' ಎನ್ನುವ ಪುಸ್ತಕವನ್ನು ಪ್ರಕಟಿಸಲಾಗಿದೆ. ಹೆಚ್ಚಿನ ಮಾಹಿತಿಗೆ ಆಸಕ್ತರು ಸಂಚಾಲಕರು, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ನಂ. ೮೬, ವಿದ್ಯುತ್ ನಗರ, ಹಾಸನ-೫೭೩ ೨೦೧. ಈ ವಿಳಾಸವನ್ನು ಸಂಪರ್ಕಿಸಿ.

●




## ಮಾಡಿದ್ದು - ಮಾಡದ್ದು

# ಮಾಜಿ ಶಾಸಕ ಬಿ.ಎಚ್.ಯಂಕಾನಾಯ್ಕ

ನಮ್ಮೂರಲ್ಲಿ ಪುಣ್ಯದಕಟ್ಟೆ ಇರುವುದರಿಂದ ಊರಿನ ಹೆಸರೂ ''ಪುಣ್ಯದಕಟ್ಟೆ'' ಎಂದಿರಬೇಕಿತ್ತು. ಆದರೆ ಬರೆಯುವ ಮತ್ತು ಕರೆಯುವ ಜನಗಳ ಕೈ ಬಾಯಿಗಳಲ್ಲಿ ಪುಣ್ಯದಕಟ್ಟೆ, ಪುನಬಗಟ್ಟೆ, ಪುಣಗಟ್ಟೆ, ಪುಣಭಗಟ್ಟ ಎಂದೆಲ್ಲಾ ರೂಪು ಪಡೆದಿದೆ. ಈ ಗ್ರಾಮಕ್ಕಾಗಿ ಹರಪನಹಳ್ಳಿ ತಾಲ್ಲೂಕಿನ ಮಾಜಿ ಶಾಸಕರಾದ ಶ್ರೀ ಬಿ.ಹೆಚ್.ಯಂಕಾನಾಯ್ಕರವರು ಮಾಡಿದ್ದು ಮತ್ತು ಮಾಡದ್ದು.

### ಮಾಡಿದ್ದು

೧. ವಿದ್ಯುತ್ ಸಂಪರ್ಕ ೨. ಗ್ರಾಮ ಪಂಚಾಯ್ತಿ ಕೇಂದ್ರ ೩. ವ್ಯವಸಾಯ ಸೇವಾ ಸಹಕಾರ ಸಂಘ ೪. ಪ್ರಾಥಮಿಕ ಆರೋಗ್ಯ ಘಟಕ ೫. ವಿದ್ಯುತ್ ಘಟಕ ಸ್ಥಾಪನೆ ೬. ಪ್ರವಾಸಿ ಮಂದಿರ ೭. ಗ್ರಾಮ ಸೇವಕರಿಗಾಗಿ ಮನೆ ೮. ಶಾಲಾ ಕೊಠಡಿಗಳು ೯. ನೀರು ಪೂರೈಕೆ ಕೇಂದ್ರ ೧೦. ಟೆಲಿಫೋನ್ ಸೌಕರ್ಯ ೧೧. ಆಶ್ರಯ ಮನೆಗಳು ೧೨. ರಸ್ತೆಗಳು ಮತ್ತು ಬಸ್ಸಿನ ಸೌಕರ್ಯ

### ಮಾಡದ್ದು

೧. ಬ್ಯಾಂಕ್ ಸ್ಥಾಪನೆ
೨. ಗ್ರಾಮಲೆಕ್ಕಿಗರಿಗಾಗಿ ಮನೆ
೩. ಸಮುದಾಯ ಭವನ
೪. ಅಂಗನವಾಡಿ ಕಟ್ಟಡ
೫. ಪ್ರೌಢಶಾಲೆ ಸ್ಥಾಪನೆ
(ಮಂಜೂರಾಗಿದೆ. ಪ್ರಾರಂಭಿಸಿಲ್ಲ)

○ ಪುನಬಗಟ್ಟಿ ಕೊಟ್ರಯ್ಯ

ನಗೆಮಿಂಚು

# ನೋ ಪಾಲಿಟಿಕ್ಸ್ ಪ್ಲೀಸ್

## ''ನಾವು ಅನ್ಯೋನ್ಯವಾಗಿದ್ದೇವೆ ನಮ್ಮದು ಸುಖ ಸಂಸಾರ ದಯವಿಟ್ಟು ರಾಜಕೀಯ ಬೇಡ''

**ಕಾ**ಲಿಂಗ್ ಬೆಲ್ ಶಬ್ದ.

''ಯಾರದು? ನೋಡೆ''

''ಏನು ಅಪರೂಪ? ಒಳಗೆ ಬನ್ನಿ'' ಬಾಗಿಲು ತೆಗೆದ ಶಬ್ದ. ಹಿಂದೆಯೇ ಜಯಳ ಮಾತು. ''ರ್ರೀ, ನಿಮ್ಮ ಫ್ರೆಂಡು.... ಪರಮೇಶ್ ಬಂದಿದ್ದಾರೆ. ಹೊರಗೆ ಬಂದು ನೋಡ್ತೀನಿ ಸಾಕ್ಷಾತ್ ಪರಮ, ಅವನ ಹೆಂಡತಿ, ಅದೂ ನಗು ನಗುತ್ತಾ.

ಪ್ರಪಂಚದ ಒಂದು ಅದ್ಭುತ. ಈ ಪರಮ ನಗುತ್ತಿರುವುದು. ಆಶ್ಚರ್ಯ ಪಡಬೇಡಿ. ಈ ಪರಮನನ್ನು ಪರಿಚಯಿಸಲಿಲ್ಲ. ಇವ್ನು ನನ್ನ ದೋಸ್ತಿ ಚೆಡ್ಡಿ ದೋಸ್ತಿ ಎನ್ನಿ ಪರವಾಗಿಲ್ಲ. ಪರಮ ಎಂದರೆ ನಮ್ಮ ಗ್ಯಾಂಗಿಗೆ ಅರ್ಥ ವಾಗುವುದಿಲ್ಲ. ಅದೇ ''ಸಂಕಟೇಶ್ವರ'' ಎನ್ನಿ ಕೂಡಲೇ ಅರ್ಥವಾಗುತ್ತದೆ.

ಪರಮ ಸಂತೋಷದಲ್ಲಿ ಇರುವುದನ್ನು ನೋಡಿದ್ದೇನೆ ಎನ್ನುವ ಯಾವೊನಾದರೂ ಇದ್ದರೆ ಎದೆ ತಟ್ಟಿ ಹೇಳಲಿ. ಯಾವಾಗ್ಲೂ ಒಂದಲ್ಲ ಒಂದು ಸಂಕಟ ಹೊತ್ತು ವಿಲಿ ವಿಲಿ ಒದ್ದಾಡುವ ಪ್ರಾಣಿ ಈ ಪರಮ. ಎಲ್ಲರೂ ಸೇರಿ ಅವನಿಗೆ ಕೊಟ್ಟ ಸಾರ್ಥಕ ಹೆಸರು ''ಸಂಕಟೇಶ್ವರ''

ಕೊನೆಗೆ ಪರಮನೆಂದರೆ ನಾವು ಓಡಿ ಹೋಗುವಂತಾಗಿತ್ತು.

''ಏನಯ್ಯಾ? ಅಪರೂಪ''

ಸಂಕಟೇಶ್ವರ ಆಮಂತ್ರಣ ಪತ್ರಿಕೆ ಕೊಟ್ಟ. ಎರಡನೇ ಮಗನ ಹುಟ್ಟುಹಬ್ಬದ್ದು. ನನಗಂತೂ ಎಲ್ಲಾ ಸೋಜಿಗವಾದಂತೆ ಕಂಡಿತು. ಪರಮ ನೆಂದರೇನು? ಅವನು ನಗುತ್ತಾ ಸಂತೋಷ ವಾಗಿರುವುದೆಂದರೇನು? ಯಾಕೆಂದರೆ ಈ ಸಂಕಟೇಶ್ವರನ ಆಪ್ತ ಸ್ನೇಹಿತ ನಾನು. ನನಗೆ ಗೊತ್ತಿಲ್ಲದ್ದು ಅವನಲ್ಲಿ ಬಾಕಿ ಇರಲಿಲ್ಲ. ಅವನು ಮತ್ತು ಸಂಕಟಗಳು ಒಂದೇ ಆತ್ಮ, ದೇಹ ಎನ್ನು ವಂತೆ ಜೊತೆಯಲ್ಲೇ ಹುಟ್ಟಿದವು, ಬೆಳೆದವು.

ಎಂದೂ ಈ ಪರಮ ಸಂಕಟಗಳನ್ನು ಹುಡುಕಿಕೊಂಡು ಹೋಗಿಲ್ಲ. ಅಥವಾ ಅವೇ ಇವನನ್ನು ಹುಡುಕಿ ಬಂದದ್ದಲ್ಲ. ವಿಚಿತ್ರ ವಾಗಿದೆಯಲ್ಲವೆ? ಇಷ್ಟೆಲ್ಲ ಸಂಕಟಗಳಿಗೆ ಮೂಲ ಕಾರಣ-ಅವನ ಹಿತ ಶತ್ರುಗಳು. ನೋಡಿ ಸ್ವಾಮಿ, ಎಂತಹ ನೇರ ಶತ್ರು ವನ್ನಾದರೂ ಎದುರಿಸಬಹುದು. ಆದರೆ ಈ ಹಿತ ಶತ್ರುಗಳನ್ನು-ಅವರ ತಂತ್ರಗಳನ್ನು ಯಾರೂ ಎದುರಿಸಲಾರರು. ಬಟ್ಟೆಗೆ ಕೂರಿ ಬಿದ್ದ ಹಾಗೆ, ಒಳಗೊಳಗೇ ತುರಿಕೆ ಆಡುವಂತಿಲ್ಲ, ಅನ್ನು ವಂತಿಲ್ಲ. ಹಿತ ಶತ್ರುಗಳ ಕೆಲಸ ಹೇಗಿರುತ್ತ ದೆಂದರೆ ಅಪಾನ ವಾಯು (ಹೂಸು) ''ಟುಸ್ಸಾಕಾರಂ ಮಹಾ ಘೋರಂ'' ಎಂಬಂತೆ.

ನಾಲ್ಕು ಅಕ್ಕಂದರಿಗೆ ತಮ್ಮನಾಗಿ ಹುಟ್ಟಿದ್ದೇ ಪರಮನ ತಪ್ಪು. ಅಪರೂಪದ ಮೊಮ್ಮಗನ ಆರೋಗ್ಯ ಅಜ್ಜ ಕೈಗೆ ಬಂತು. ಸಣ್ಣ ಕಾಯಿಲೆಗೂ ಬ್ರಹ್ಮಾಂಡ ಉಪಚಾರ, ಇಂಜಕ್ಷನ್, ಮಾತ್ರೆ ಅಲ್ಲದೆ ತನಗೇ ಗೊತ್ತಿರುವ ನೂರಾರು ಕಷಾಯಗಳ ಪ್ರಯೋಗ, ಕಡು ಪಥ್ಯ, ಪರಮ ನಿಗೆ ಪ್ರಾಣ ಸಂಕಟ. ಬೆಳೆಯುತ್ತಿದ್ದಂತೆ ಅಕ್ಕಂದಿರ ಮುದ್ದು ತಮ್ಮ ಅವನ ಡ್ರೆಸ್‌ನಿಂದ ಹಿಡಿದು ಹೇರ್ ಸ್ಟೈಲ್‌ವರೆಗೂ ಅವರದೇ ಆಯ್ಕೆ. ಅವನ ಅವತಾರದ ಬಟ್ಟೆ, ಹೇರ್ ಸ್ಟೈಲ್ ನಮ್ಮ ಹಾಸ್ಯಕ್ಕೆ ತುತ್ತಾದಾಗ ಮೂಕ ಸಂಕಟ ಅನುಭವಿಸುವ ಪ್ರಾಣಿ-ಪರಮ.

ತನ್ನ ಮಗ ದೊಡ್ಡ ಆಫೀಸರಾಗಬೇಕೆಂದು ತಂದೆ ತಾಯಿಗಳ ಒದ್ದಾಟ-ಇವನ ಮೂಕ ಸಂಕಟ.

ಅಂತೂ, ಇಂತೂ ಸಂಕಟೇಶ್ವರನೂ ಮದುವೆಯಾದ. ಬಹುಶಃ ಒಂದೆರಡೇ ವರ್ಷ - ಸಂಕಟ ಇವನನ್ನು ಬಿಟ್ಟಿರಲಾರದೇ ಒದ್ದಾಡಿತ್ತು.

''ಲೋ, ಯಾವ ವಿಷ ಸಂಕಟವಿಲ್ದೆ ಪ್ರಾಣ ತೆಗಿಯುತ್ತೆ?'' ಒಂದು ದಿನ ಪರಮ ಕೇಳಿದಾಗ, ಗಾಬರಿಯಾದೆ.

''ಯಾಕೋ, ಪರಮ ವಿಷದ ಮಾತು?''

''ನನ್ಕೈಲಿ ಇನ್ನು ಆಗಲ್ಲ. ವಿಷ ತೊಗೊಂಡು ಪ್ರಾಣ ಬಿಡ್ತೀನಿ. ಆದ್ರೆ ಸಂಕಟ ಇಲ್ದೆ



ಸಾಯ್ಬೇಕು.''

ಅವನ ಮಾತಿನಿಂದ ಎಷ್ಟು ಸಂಕಟ ಪಟ್ಟಿದ್ದಾನೆ ಪ್ರಾಣಿ ಎಂದು ತಿಳೀತಿತ್ತು.

''ಯಾಕೋ, ಏನಾಯ್ತು?''

''ಎಲ್ಲಾ ಹಿತ ಶತ್ರುಗಳೇ, ಯಾರನ್ನೂ ಅನ್ನೋ ಹಂಗಿಲ್ಲ, ಆಡೋ ಹಂಗಿಲ್ಲ''

''ಸಮಾಧಾನ ಮಾಡ್ಕೊ.''

''ಮುಂಡಾ ಮೋಚ್ತು. ಅಲ್ವೋ, ಅತ್ತೆ, ಮಾವ, ನಾದಿನಿ ಇವ್ರಿಗೆ ನಾನೇನು ದ್ರೋಹ ಮಾಡಿದ್ದೀನಿ? ನೆಂಟರು, ಸ್ನೇಹಿತರಿಗೆ ನಾನೇನು ಮಾಡಿದ್ದೀನಿ?''

''ಅದೆಲ್ಲಾ ನಂಗೇನು ಗೊತ್ತು? ನೀನಾದ್ರೂ ಸ್ವಲ್ಪ ಅಡ್ಜೆಸ್ಟ್ ಮಾಡ್ಕೊಳ್ಳೊ.''

''ನೀನೂ ಒಬ್ಬ ಹಿತ ಶತ್ರುನೆ. ಪಾಪಿ, ಸಾಯಕ್ಕೂ ಸಂಕಟ ಇಲ್ದೆ ಇರೋ ದಾರಿ ತೋರ್ಸಲ್ಲ.'' ನಗು ಬರುತ್ತಿದ್ದರೂ ತಡೆದೆ. ''ಅದೇನು ಹೇಳೊ''

ಮದುವೆಯಾದ ಸ್ವಲ್ಪ ದಿನ ಎಲ್ಲಾ ಚೆನ್ನಿತ್ತು. ಅನಂತರ ಆದದ್ದೇ ದುರಂತ. ಪರಮನ ಮಾವ ಉಳಿತಾಯದ ಬಗ್ಗೆ ಹೇಳಿ, ಹೇಳಿ ಅವನ ಅರ್ಧ ಸಂಬಳ ಉಳಿತಾಯದ ಲೆಕ್ಕ ಸೇರಿತು. ಅತ್ತೆಯ ಉಪದೇಶದಿಂದ ಹೆಂಡತಿ ತಂದ ಸೋಫಾ, ಟೀವಿ ಇತ್ಯಾದಿಗಳ ಸಾಲ ಜಾಸ್ತಿಯಾಯ್ತು. ಅಕ್ಕಪಕ್ಕದ ಹೆಂಗಸರಿಂದ ಪರಮನ ಹೆಂಡತಿ ಬಟ್ಟೆ ಒಡವೆಗಳ ಬಗ್ಗೆ ಗಮನ ಕೊಟ್ಟಳು.

''ಇವೆಲ್ಲಾ ನಿನ್ನ ಒಳ್ಳೇದಕ್ಕೇ ಅಲ್ವಾ ಪರಮ?''

''ಇದ್ನೇ ಎಲ್ರೂ ಹೇಳೋದು. ಆದ್ರೆ ಇಷ್ಟೆಲ್ಲಾ ಆದ ಮೇಲೆ ಉಳಿಯೋ ಸಂಬ್ಳ ನಂ ಪಿಂಡಕ್ಕೂ ಆಗಲ್ವಲ್ಲ? ಇನ್ನ ತಿಂಗ್ಳೆಲ್ಲಾ ಸಂಸಾರ ಮಾಡೋದೇನು?''

''ನೀನಾದ್ರೂ ನಿನ್ನ ಪರಿಸ್ಥಿತೀನ ಹೇಳ್ಕೋಬೇಕಪ್ಪ''

''ಹ್ಯಾಗಯ್ಯ ಹೇಳ್ಲಿ? ಎಲ್ರೂ ನೆಂಟರು ಸ್ನೇಹಿತರೆ.''

''ಹಾಗಾದ್ರೆ ಅನುಭವಿಸು'' ರೇಗಿದೆ.

ಈ ಪ್ರಾಣಿಯೋ ಖಂಡಿತವಾಗಿ ಮಾತನಾಡಲಾರ ಅಥವಾ ಅದನ್ನು ಅನುಭವಿಸಲಾರ.

ಇಷ್ಟು ವರ್ಷ ಇಲ್ಲದ್ದು ಈಗ ಆತ್ಮಹತ್ಯೆ ಯೋಚನೆ ಮಾಡಿದ್ದಾನೆಂದರೆ ಪ್ರಾಣಿ ಎಷ್ಟು ಸಂಕಟ ಅನುಭವಿಸಿರಬೇಕು? ಏನಾದರೂ ಆಗಲಿ ಎಂದು ಯೋಚಿಸಿದೆ. ಒಟ್ಟಿನಲ್ಲಿ ಪರಮ ಸಂಕಟವಿಲ್ಲದೆ ಪ್ರಾಣ ಬಿಡುವ ದಾರಿ ವಿಷ - ಡಾಕ್ಟರುಗಳ ಚಿತ್ರಹಿಂಸೆ.

ನೇಣು - ಕಡೇ ಪಕ್ಷ ಅರ್ಧ ಗಂಟೆ ಒದ್ದಾಟ. ಬಸ್ಸು, ರೈಲು, ನೀರು - ಅದು ದೂರದಿಂದಲೇ ಬರುವಾಗಿನ ಮಾನಸಿಕ ಆತಂಕ.

ಧಿಕ್ಕಾರ! ನನ್ನಂತಹ ಸ್ನೇಹಿತನಿಗೆ, ಪರಮಾಪ್ತ ಪರಮನ ಸಂಕಟ ಪರಿಹರಿಸಲು ಕೊನೇ ಪಕ್ಷ ಸಂಕಟವಿಲ್ಲದೇ ಪ್ರಾಣ ಬಿಡುವ ದಾರಿಯನ್ನ ತೋರಿಸಲು ಸಾಧ್ಯವಾಗದಿದುದಕ್ಕೆ.

ಕೈ ಮುಗಿದೆ. ಪರಮ, ನನ್ನಿಂದ ಯಾವ ನೆರವೂ ಸಿಗಲಾರದು. ದೇವರೊಬ್ಬನೇ ನಿನಗೆ ದಿಕ್ಕು. ಸಾಧ್ಯವಾದ್ರೆ ತಪಸ್ಸಿಗೆ ಕಂಡೇನಾದ್ರೂ ಹತ್ತಿರದಲ್ಲಿದ್ದೆ ಅವನ್ನ ಹಿಡ್ಕೊ.''

ಸ್ನೇಹಿತನೂ ತನ್ನ ಕೈ ಬಿಟ್ನಲ್ಲ ಎಂಬ ಅತೀ ಸಂಕಟದಿಂದ ಅಂದು ಹೋದ ಪರಮ, ಇಂದು ಬಂದಿದ್ದಾನೆ. ಅದೂ ಸಖತ್ ಸಂತೋಷದಲ್ಲಿ, ನಾನು ಸತ್ತಿಲ್ಲ, ಉಸಿರಾಡುತ್ತಿದ್ದೇನೆ. ಭ್ರಮೆಯಲ್ಲ, ಕನಸಲ್ಲ ಎಂದು ಖಾತ್ರಿ ಮಾಡಿಕೊಂಡೆ.

ಪಕ್ಕಕ್ಕೆ ಕರೆದು ವಿಚಾರಿಸಿದೆ.

''ಅದೆಲ್ಲಾ ಹಳೇ ಕತೆ ಗುರೂ, ಈಗ ಯಾರೂ ನಂ ಸುದ್ದೀಗೇ ಬರ್ತಿಲ್ಲ. ನೋಡಪ್ಪ ಆರಾಮಿದ್ದೇವೆ, ಆಮೇಲೇ ಇವ್ನು ಹುಟ್ಟಿದ್ದು.''

ಪರಮನ ಸರ್ವ ಸಂಕಟಗಳು ದೂರವಾಗಬೇಕಿದ್ರೆ ಯಾವುದೋ ದೇವರು, ಋಷಿಗಳು, ಕೊನೆಗೆ ಮಾಂತ್ರಿಕರು. ತಮ್ಮ ಪ್ರಭಾವ ತೋರಿಸಿರಬೇಕೆಂದು ಭಾವಿಸಿದೆ. ಅವನ ಕಾಲಿಗೆ ಬಿದ್ದಾದರೂ ಅದನ್ನು ತಿಳಿದರೆ ನಾನೂ ನೆಮ್ಮದಿಯಾಗಿರಬಹುದೆಂದು ಒಳ ಆಸೆ.

''ಹುಟ್ಟಿದ್ದಬ್ಬಕ್ಕೆ ಬಾ ಗುರು ನಿನ್ಗೇ ಗೊತ್ತಾಗುತ್ತೆ'' ಮುನಿ ನಕ್ಕ.

ಗುಟ್ಟನ್ನು ತಿಳಿಯುವುದಕ್ಕಾಗೇ ಹೋದೆ. ಅತ್ತೆ, ಮಾವ, ನಾದಿನಿ, ನೆಂಟರಿಷ್ಟರು ಸ್ನೇಹಿತರು ಎಲ್ಲರೂ ಇದ್ದರು. ಮೆಲ್ಲಗೆ ಯಾರನ್ನು ಕೇಳಿದರೂ ಒಬ್ಬರೂ ಬಾಯಿ ಬಿಡಲಿಲ್ಲ. ಅವರಿಗೆ ಗೊತ್ತಿದೆಯೋ ಇಲ್ಲವೋ ಎಂಬ ಅನುಮಾನ ಬಂತು.

ನನ್ನ ಒದ್ದಾಟ ನೋಡಲಾರದೇ ಪರಮ ನಗುತ್ತಾ ಬಂದ. ಮನೆಯ ಎಲ್ಲಾ ಕಡೆ ಓಡಾಡಿಸಿದ. ಪ್ರತಿಯೊಂದು ಜಾಗ-ರೂಮು, ವೆರಾಂಡ, ಹಾಲ್, ಬೆಡ್ ರೂಂ-ನಲ್ಲೂ ಒಂದೊಂದು ದೊಡ್ಡ ಪೋಸ್ಟರ್ ಅಂಟಿಸಿದ್ದ.

ಗಂಡ-ಹೆಂಡತಿಯ ನಗು ಮುಖದ ಚಿತ್ರ ಬಹಳ ಮುದ್ದಾಗಿತ್ತು. ಕೆಳಗೆ ದಪ್ಪ ಅಕ್ಷರಗಳಲ್ಲಿ

''ನಾವು ಅನ್ಯೋನ್ಯವಾಗಿದ್ದೇವೆ
ನಮ್ಮದು ಸುಖ ಸಂಸಾರ
ದಯವಿಟ್ಟು ರಾಜಕೀಯ-ಬೇಡ''

''ನೋಡಪ್ಪಾ ಇದ್ನ ಹಾಕಿದ್ಮೇಲೆ, ಯಾರು ಬಂದ್ರೂ ತರಲೆ ರಾಜಕೀಯ ಮಾಡ್ತ ಇಲ್ಲ. ನೋಡು ಗುರು ಈಗ ಆರಾಮಾಗಿದ್ದೇನೆ. ನನ್ನ ಸಂಕಟ ಎಲ್ಲಾ ದೂರ ಆಗಿದೆ.''

''ಮತ್ತೆ ಆವತ್ತು-ನೀನು-ಸಾಯ್ಬೇಕೂಂತಾ...''

''ಚಾಂಡಾಲ ಇಂತ ದಿನ್ದಲ್ಲಿ ಎಂತಾ ಮಾತಾಡ್ತಿ?'' ರೇಗಿದ ಪರಮ. ನಾನು ಮೂಕನಾಗಿ ನಿಂತೆ.

○ **ಡಾ. ಎಚ್. ಎಸ್. ವೆಂಕಟೇಶ್**
ಶ್ರೀ ರಾಘವೇಂದ್ರ ಕ್ಲಿನಿಕ್
ಹಾರೋಹಳ್ಳಿ - ೫೬೨ ೧೧೨
ಬೆಂಗಳೂರು ಜಿಲ್ಲೆ



ನಿಮ್ಮ ಕ್ಷೇತ್ರಕ್ಕೆ ಬರ ಪರಿಹಾರ ಕಾರ್ಯಗಳಿಗಾಗಿ 10 ಕೋಟಿ ಬಿಡುಗಡೆ ಮಾಡಿದ್ದಾರೆ... ನೀವು ಇನ್ನೂ ಇಲ್ಲಿಯೇ ಇದ್ದೀರಲ್ಲಾ??!

'ವಿರಹ'ದ ಬಗ್ಗೆ ಕವನ ಬರೆದು ಕಳಿಸುವಂತೆ ಸಂಪಾದಕರು ಕೇಳಿದ್ದಾರೆ.. ...ದಯವಿಟ್ಟು ತವರಿಗೆ ಹೋಗುವೆಯಾ?

## ಚೌಚೌ

### ದೈವ ಇದ್ದರೂ ದರಿದ್ರ

ನನ್ನೂರು ಬಳ್ಳಾರಿ ಜಿಲ್ಲೆಗೆ ಸೇರಿರುವ ಕೂಡ್ಲಿಗಿ ತಾಲೂಕಿನ ಹ್ಯಾಳ್ಯಾ ಎಂಬ ಗ್ರಾಮ. ಕೂಡ್ಲಿಗಿಯಿಂದ ೨೮ ಕಿ.ಮೀ. ದೂರದಲ್ಲಿದೆ. ನಮ್ಮೂರಿನಲ್ಲಿ ಗ್ರಾಮ ಪಂಚಾಯಿತಿ ಇದೆ. ಅಂಚೆ ಕಛೇರಿಯೂ ಇದೆ. ಆದರೆ ನಮ್ಮೂರಿನಲ್ಲಿರುವ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳಲು ಜನರಿಗೆ ಸರಿಯಾದ ಮಾರ್ಗಗಳಿದ್ದರೂ ಉಪಯೋಗ ಪಡೆದುಕೊಳ್ಳುವಂತಹ ಧೀಮಂತ ಜನರ ಕೊರತೆ ಕಾಡುತ್ತಿದೆ. 'ಸಾರ್ವಜನಿಕ ಗ್ರಂಥಾಲಯ'ವು ಮಾತ್ರ ಇಲ್ಲ.

**- ಕೆ. ಸುಧಾ, ಹ್ಯಾಳ್ಯಾ**

### ರೈಲು ಬಿಡುವ ಮಂತ್ರಿ ದೇಶಪಾಂಡೆ

ಸಚಿವ ದೇಶಪಾಂಡೆಯವರೆ ಭಟ್ಕಳ ತಾಲ್ಲೂಕಿನ ಬಂದರಿನಲ್ಲಿ ದೆಕ್ಕೆ ನಿರ್ಮಿಸುತ್ತೇವೆಂದು ಹೇಳಿ ಜನತೆಯನ್ನು ನಂಬಿಸಿ ಈಗ ನೀವೆಲ್ಲಿದ್ದೀರಿ? ಭಟ್ಕಳಕ್ಕೆ ಹೋಗುವ ದಾರಿ ತಿಳಿಯದೆ? ಅಥವಾ ಹೊನ್ನಾವರ ಸೇತುವೆ ಅರ್ಧದಲ್ಲೇ ಮುರಿಯುತ್ತದೆಂಬ ಭಯವೆ? ಕಾರವಾರ ಜಿಲ್ಲೆಯ ಲಳವೆಕೋಡಿಯ ದೆಕ್ಕೆ ಕಾಮಗಾರಿ ಹೇಳೋರು ಕೇಳೋರು ಇಲ್ಲದೆ ಅರ್ಧಕ್ಕೆ ನಿಂತುಹೋಗಿದೆ. ನಿಮ್ಮ ಕಾರ್ಯಕ್ಷಮತೆ ಎಂತಹದ್ದು ಎಂದು ಇದರಲ್ಲೇ ತಿಳಿಯುತ್ತದೆ.

ನಿಮ್ಮ ಆಪ್ತ ಸ್ನೇಹಿತ ಶಂಬುಗೌಡ ತಮ್ಮ ಸರ್ಕಾರ ಅಧಿಕಾರದಲ್ಲಿದೆ ಎಂದು ತಾನು ಆಡಿದ್ದೇ ಆಟ ಮಾಡಿದ್ದೇ ಮಾಟ. ಅಷ್ಟೇ ಅಲ್ಲ, ಕಳೆದ ಬಾರಿ ಎಲೆಕ್ಷನ್ನಿನ ಪ್ರಚಾರ ವಾಹನದಲ್ಲಿ ಕಳ್ಳ ಖದೀಮರನ್ನು ಸಾಗವಾನಿ ತುಂಡನ್ನು ಸಾಗಿಸಿದ ಖ್ಯಾತಿ ಇವರದ್ದು. ಇಂತಹ ಕುಮ್ಮಕ್ಕಿಸುವ ನೀವು ಇನ್ನೂ ಅಧಿಕಾರದಲ್ಲಿರುವುದು ಆಶ್ಚರ್ಯದ ಸಂಗತಿ. ಗ್ರಾಮ ರಕ್ಷಕ ದಳ ನಿಸ್ವಾರ್ಥದಿಂದ ಅರಣ್ಯ ರಕ್ಷಣೆಗೆ ಹೋರಾಡಬೇಕೆಂಬ ನಿಮ್ಮ ಮಾತಿನಲ್ಲಿ ಎಳ್ಳಷ್ಟೂ ಸತ್ಯವಿಲ್ಲ. ಕಾರಣ ಊರುಗಳ್ಳರು, ಕಾಡುಗಳ್ಳರು ಎಲ್ಲಾ ನಿಮ್ಮ ಹಿಂದೆ ಇರುವಾಗ ಗ್ರಾಮರಕ್ಷಕ ದಳ ಏನು ಮಾಡಲು ಸಾಧ್ಯ?

ಕೊಂಕಣ ರೈಲು ಹಳಿ ಮೇಲೆ ಹೋದ್ರೆ ಸಚಿವ ದೇಶಪಾಂಡೆಯವರ ರೈಲು ಹಳಿ ಇಲ್ಲದೇ ಹೋಗುತ್ತದೆ.

**- ವಸಂತಕುಮಾರ ಹಿಂಡಿಗಿ,**
ಶಿರಾಲಿ

### ಮಜ್ಜಿಗುಡ್ಡ-ಬೆಂತೂರ ರಸ್ತೆ

ನವಲಗುಂದ ತಾಲ್ಲೂಕಿನ ಕೊನೆಯ ಗ್ರಾಮ ಮಜ್ಜಿಗುಡ್ಡದಿಂದ ಮೂರು ಕಿಲೋಮೀಟರ್ ಅಂತರದಲ್ಲಿರುವ ಬೆಂತೂರ (ಗದಗಜಿಲ್ಲೆ) ನಡುವಿನ ರಸ್ತೆಯನ್ನು ತಾತ್ಕಾಲಿಕವಾಗಿ ಮಣ್ಣಿನಿಂದ ನಿರ್ಮಿಸಿ ಮೂರ್‍ನಾಲ್ಕು ವರ್ಷಗಳೇ ಕಳೆದಿವೆ.

ಇನ್ನೂವರೆಗೂ ಕಡಿ ಹಾಗೂ ಕೆಂಪು ಮಣ್ಣಿನ ಶಾಶ್ವತ ರಸ್ತೆ ನಿರ್ಮಾಣವಾಗಿಲ್ಲ. ಆದ್ದರಿಂದ ಸಂಬಂಧಪಟ್ಟ ಪ್ರದೇಶದ ಶಾಸಕ ಮಹೋದಯರು ಹಾಗೂ ಅಧಿಕಾರ ವರ್ಗದವರು ಈ ಕಡೆಗೆ ಗಮನ ಹರಿಸುವಿರೆಂದು ವಿನಂತಿಸಿಕೊಳ್ಳುವೆ.

ಇದರಿಂದ ಗ್ರಾಮಕ್ಕಿರುವ ಬಸ್ಸಿನ ತೊಂದರೆ ನಿವಾರಣೆಯಾಗುವದಲ್ಲದೇ ಗ್ರಾಮದ ಸರ್ವಾಂಗೀಣ ಪ್ರಗತಿಗೆ ಸಹಾಯಕವಾಗುತ್ತದೆ.

**- ಫಕ್ಕಿರೇಶ ಬ. ಅಕ್ಕಿ**
ಮಜ್ಜಿಗುಡ್ಡ

### ಶಾಸಕ ಕುನ್ನೂರ

ಶಿಗ್ಗಾಂವ ಮತ್ತು ಸವಣೂರ, ಹಾವೇರಿ ಜಿಲ್ಲೆಯ ಅವಳಿ ತಾಲ್ಲೂಕುಗಳು. ಒಂದೇ ವಿಧಾನಸಭಾ ಮತಕ್ಷೇತ್ರವನ್ನು ಹೊಂದಿವೆ. ನಾನು ಕಳೆದ ೩೦ ವರುಷಗಳ ಅವಧಿಯಲ್ಲಿ ಮೂರು ಜನ ಶಾಸಕರ ಆಡಳಿತವನ್ನು ಕಂಡಿದ್ದೇನೆ. ಇವರಲ್ಲಿ ಹಾಲಿ ಕಾಂಗ್ರೆಸ್ ಶಾಸಕರಾದ ಮಂಜುನಾಥ ಕುನ್ನೂರ ಅವರು ಮತದಾರರ ಆಸೆಗಳನ್ನು ಮತ್ತು ತಮ್ಮ ಆಶ್ವಾಸನೆಗಳನ್ನು ಈಡೇರಿಸುವತ್ತ ತಮ್ಮ ಗಮನ ಹರಿಸಿದ್ದಾರೆ. ಇಲ್ಲಿ ಪಕ್ಷ ಮುಖ್ಯವಲ್ಲ, ವ್ಯಕ್ತಿ ಮುಖ್ಯ ಎಂಬುದು ನನ್ನ ಅಭಿಮತ. ಎರಡನೇ ಬಾರಿಗೆ ಚುನಾಯಿತರಾದ ಶ್ರೀ ಕುನ್ನೂರ ಅವರು ವಿಶೇಷವಾಗಿ ಶಿಕ್ಷಣ ಕ್ಷೇತ್ರದಲ್ಲಿ ಒಳ್ಳೆಯ ಕೆಲಸ ಮಾಡಿದ್ದಾರೆ. ಸರಕಾರಿ ಪ್ರೌಢಶಾಲೆಗಳು, ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯಗಳ ಸ್ಥಾಪನೆ ಇವರ ಸಾಧನೆಗಳಾಗಿವೆ. ಶಿಗ್ಗಾಂವದಲ್ಲಿ ಒಂದು ಖಾಸಗಿ ಪ್ರೌಢಶಾಲೆ ಮತ್ತು ಕಿರಿಯ ಕಾಲೇಜನ್ನು ಸ್ಥಾಪಿಸಿ ಶಿಕ್ಷಕ-ಸಿಬ್ಬಂದಿ ಬಳಗಕ್ಕೆ ತಕ್ಕ ವೇತನ ಕೊಡುತ್ತಿದ್ದಾರೆ. ಇವರ ಈ ಸಂಸ್ಥೆ ಸುಸಜ್ಜಿತವಿದ್ದು ಸರಕಾರದ ಅನುದಾನ ಪಡೆಯಲು ಅರ್ಹವಾಗಿದೆ. ಬಿಟ್ಟುಹೋದ ಶಿಗ್ಗಾಂವ್ ತಾಲ್ಲೂಕನ್ನು ನೂತನ ಹಾವೇರಿ ಜಿಲ್ಲೆಗೆ ಸೇರಿಸಲು ಹೋರಾಟ ಮಾಡಿ ಇದೀಗ ಯಶಸ್ಸು ಕಂಡಿದ್ದಾರೆ. ಬಂಕಾಪುರ, ಶಿಗ್ಗಾಂವ ಮತ್ತು ಸವಣೂರ ನಗರಗಳಿಗೆ ವರದ ನದಿಯಿಂದ ಕುಡಿಯುವ ನೀರಿನ ಪೂರೈಕೆಗಾಗಿ ಕಾಂಗ್ರೆಸ್ ಸರಕಾರ ಇದ್ದಾಗ ಕೆಲಸ ಮಂಜೂರಿ ಮಾಡಿಸಿದರು. ಸರಕಾರದ ಬದಲಾವಣೆಯಿಂದ ಈಗ ಈ ಕೆಲಸ ಅರ್ಧಕ್ಕೆ ನಿಂತಿರುವುದು ವಿಷಾದಕರ.

ಪಕ್ಷಭೇದ ಮರೆತು ಕೆಲಸ ಮಾಡುತ್ತಿರುವ ಇವರು ಹ್ಯಾಟ್ರಿಕ್ ಸಾಧಿಸುವ ಅರ್ಹತೆ ಹೊಂದಿರುವರು.

**- ಎ.ಕೆ. ಆದವಾನಿ ಮಠ,**
ಬಂಕಾಪುರ

### ಎಡವಿ ಕಲಿತೆ

ಇದು ನಾನು ಹನ್ನೆರಡು ವರ್ಷದವನಾಗಿದ್ದಾಗ ನಡೆದ ಸಂಗತಿ.

ಅಂದು ಬ್ಯಾಂಕಿನಿಂದ ಅರವತ್ತು ರೂಪಾಯಿ ತರಲು ಚೆಕ್ ಕೊಟ್ಟು ಕಳುಹಿಸಿದ್ದರು ನನ್ನ ತಂದೆ.

ಬ್ಯಾಂಕಿನಲ್ಲಿ ಅಂದು ದೊಡ್ಡ ಜನಜಂಗುಳಿಯಿತ್ತು. ನಾನು ಟೋಕನ್ ತೆಗೆದುಕೊಂಡು ಅಲ್ಲಿ-ಇಲ್ಲಿ ನೋಡುತ್ತಿರುವಾಗ ಒಬ್ಬ ವ್ಯಕ್ತಿ ಫಿಲ್ಮಿನ ರೀಲುಗಳನ್ನು ಇಟ್ಟುಕೊಳ್ಳುವ ಎರಡು ಡಬ್ಬಿಯನ್ನು ಹಿಡಿದುಕೊಂಡಿದ್ದ. ನನ್ನ ಪಕ್ಕದ ಮನೆಯ ಹುಡುಗ ಸಹ ಅದೇ ತಾನೇ ಕೈಯಿಂದ ಚಲಿಸಬಹುದಾದಂತಹ ಒಂದು ಪ್ರೊಜೆಕ್ಟರ್ ತಂದಿದ್ದರಿಂದ ಫಿಲ್ಮ್‌ಗಳ ಬಗ್ಗೆ ನನಗೆ ಒಂದು ವಿಧವಾದ ಹುಚ್ಚು ಬೆಳೆದಿತ್ತು. ಆ ವ್ಯಕ್ತಿಯ ಡಬ್ಬದಲ್ಲಿರುವ ರೀಲು ನೋಡುವ ತವಕ ಹೆಚ್ಚಾಯಿತು. ನಾನು ಅವನೊಡನೆ ಮಾತಿಗೆ ತೊಡಗಿದೆ. ಆತ ನನ್ನ ಶಾಲೆಯ, ತರಗತಿಯ ವಿವರ ಕೇಳಿ ನನ್ನ ತರಗತಿಯಲ್ಲಿರುವ ಒಬ್ಬ ಹುಡುಗನ ಹೆಸರು ಹೇಳಿ ತಾನು ಅವನ ಮಾವನೆಂದು ಪರಿಚಯಿಸಿಕೊಂಡ.

ನನ್ನ ಟೋಕನ್ ನಂಬರ್ ಕರೆದುದ್ದರಿಂದ ನಾನು ಹೋಗಿ ಹಣ ತೆಗೆದುಕೊಂಡೆ. ಆಗ ಆ ವ್ಯಕ್ತಿ ಡಬ್ಬದಲ್ಲಿರುವ ರೀಲನ್ನು ತೋರಿಸುವೆನೆಂದು ಹೇಳಿ ಹತ್ತಿರದಲ್ಲಿದ್ದ ಜನನಿಬಿಡ ಜಾಗಕ್ಕೆ ಕರೆದೊಯ್ದು ಏನೇನೋ ಮಾತಾಡಿ, ಚಿಕ್ಕವರು ಬರೇ ಕೈಯಲ್ಲಿ ಹಣ ತೆಗೆದುಕೊಂಡು ಹೋಗುವುದು ಸರಿಯಲ್ಲವೆಂದು ನನ್ನಲ್ಲಿದ್ದ ಹಣ ತೆಗೆದುಕೊಂಡು ಒಂದು ಪೇಪರಿನಲ್ಲಿ ಸುತ್ತಿ ಕಟ್ಟಿಕೊಟ್ಟ.

ಮನೆಕಡೆಗೆ ಹೋಗುವಾಗ ಸಂಶಯವಾಗಿ ಕಟ್ಟಿದ ದಾರವನ್ನು ಬಿಚ್ಚುತ್ತಾ ಹೋದೆ. ಮನೆ ತಲುಪಿದಾಗ ನೋಡಿದರೆ ಅದರಲ್ಲಿ ಬರೇ ಸಿಗರೇಟು ಕವರು ಮಡಿಚಿ ಕಟ್ಟಿತ್ತು!

**- ಎಲ್. ಪ್ರವೀಣ್ ಕುಮಾರ್**

ಭದ್ರಾವತಿ

# ಕ್ವಿಜ್-೫ ಬಹುಮಾನ ವಿಜೇತರು

## ಪ್ರಥಮ ಬಹುಮಾನ

ರೂ. ೫೦೦-೦೦

**ಪ್ರಸನ್ನ ಎಸ್. ಏಡ್ರಾವಿ**
C/o ಎಸ್.ಎಂ. ಏಡ್ರಾವಿ,
ಐ.ಜಿ.ಶಿರಿಗೌಡರ ಚೌಳ, ಐ.ಬಿ. ಹಿಂದುಗಡೆ,
ಹಿರೆಕೆರೂರ - ೫೮೧ ೧೧೧ ಹಾವೇರಿ ಜಿಲ್ಲೆ

## ದ್ವಿತಿಯ ಬಹುಮಾನ

ರೂ. ೨೦೦-೦೦

**ಸಂಕೇತ ಎಸ್.ಬೇಲಿ**
C/o ಬಿ.ಎಸ್.ಬೇಲಿ (ವಕೀಲರು)
ಶಿರೋಳ್ ನರ್ಸಿಂಗ್ ಹೋಂ ಎದುರು,
ಎಕ್ಸ್‌ಟೆನಶನ್, ಗದಗ - ೫೮೨ ೧೦೧

## ಸಮಾಧಾನಕರ ಬಹುಮಾನಗಳು

ತಲಾ ರೂ. ೧೦೦/-

**ಅಶ್ವಿನಿ ಬಿ. ಹೂಲಿ**
ಎ-೩, ಅಂಚೆ ಕಛೇರಿ ಸಮೀಪ,
ಹಿಡಕಲ ಡ್ಯಾಮ - ೫೯೧ ೧೦೭
ತಾ. ಹುಕ್ಕೇರಿ ಬೆಳಗಾವಿ ಜಿಲ್ಲೆ

**ಅಶ್ವಿನಿ ಅ. ಡಂಬಳ**
ಕಲಾದಗಿ - ೫೮೭ ೨೦೪
ಬಾಗಲಕೋಟೆ ಜಿಲ್ಲೆ

**ಪಿ. ವೀರೇಶ್**
ಶ್ರೀ ದುರ್ಗಾಂಬಿಕಾ ಪ್ರೌಢಶಾಲೆ
ಚಿಕ್ಕಮೇಗಳಗೆರೆ - ೫೮೩ ೧೨೫
ತಾ. ಹರಪನಹಳ್ಳಿ ದಾವಣಗೆರೆ ಜಿಲ್ಲೆ

### ಕ್ವಿಜ್ - ೫ರ ಸರಿಯುತ್ತರ

೧. ಪೂರ್ಣಚಂದ್ರ ತೇಜಸ್ವಿ ೨. ಹುಯಿಲಗೋಳ ನಾರಾಯಣರಾಯರು
೩. ಸಿದ್ಧರಾಮಯ್ಯ ೪. ರಾಜೇಶ್ ಚೌವ್ಹಾಣ ೫. ಲೋಕ ಶಿಕ್ಷಣ ಟ್ರಸ್ಟ್

# ಕ್ವಿಜ್ - ೬

೧. "ಹುಳಿ ಮಾವಿನ ಮರ" - ಇದು ಯಾರ ಆತ್ಮ ಚರಿತ್ರೆ?

..................................................

೨. ಹೆಚ್.ಡಿ. ದೇವೇಗೌಡರು ಹುಟ್ಟಿದ ಜಿಲ್ಲೆ ಯಾವುದು?

..................................................

೩. ಕುಂದಾಪುರ ತಾಲೂಕು ಯಾವ ಜಿಲ್ಲೆಗೆ ಸೇರಿದೆ?

..................................................

೪. 'ಕನ್ನಡ ಪ್ರಭ' ದಿನ ಪತ್ರಿಕೆಯ ಸಂಪಾದಕರ ಹೆಸರೇನು?

..................................................

೫. ರಣಜಿ ಪಂದ್ಯಾವಳಿಯ ಕರ್ನಾಟಕ ತಂಡದ ನಾಯಕ ಯಾರು?

..................................................

ಹೆಸರು..................................................
ವಿಳಾಸ..................................................
..................................................
..................................................
ಪಿನ್ ಕೋಡ್.............................. ದೂರವಾಣಿ..............................
ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :
ಸಂಪಾದಕರು, ಬಿಸಿಲ ಬದುಕು, ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

| | |
|---|---|
| ಮೊದಲ ಬಹುಮಾನ | ರೂ. ೫೦೦/- |
| ಎರಡನೇ ಬಹುಮಾನ | ರೂ. ೨೦೦/- |
| ಸಮಾಧಾನಕರ ಬಹುಮಾನಗಳು (ಮೂರು) | ರೂ. ೧೦೦/- |

ವಿವರ :

- ಪಕ್ಕದಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಪ್ರಥಮ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ ೧-೧೨-೧೯೯೭

# ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ

## ಬೆಂಗಳೂರು

## ನಿತ್ಯ ಮದ್ಯಪಾನ - ಮೃತ್ಯುವಿಗೆ ಆಹ್ವಾನ

- ಮದ್ಯಪಾನ ಸೇವನೆ ಇರುವ ಕುಟುಂಬದಲ್ಲಿ ಸುಖ-ಸಂತೋಷ ಖಂಡಿತ ಇರುವುದಿಲ್ಲ. ಕುಡಿತವೆನ್ನುವುದು ಸಮಾಜದ ದೊಡ್ಡ ಶತ್ರು.
- ಹಿರಿಯರ ಕುಡಿತದ ಅಭ್ಯಾಸ ಮಕ್ಕಳ ಮೇಲೆ ಪರಿಣಾಮ ಬೀರಿ ಅವರ ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆ ಕುಂಠಿತವಾಗುತ್ತದೆ. ಅವರು ಮುಂದೆ ಬಾಲಾಪರಾಧಿಗಳಾಗುವ ಸಂಭವ ಇರುತ್ತದೆ.
- ನಿದ್ದೆಗೆ ಸಹಾಯಕ, ನೋವು ನಿವಾರಕ ಎಂದು ಮದ್ಯ ಸೇವನೆ ಅತ್ಯಂತ ಅಪಾಯಕಾರಿ
- ಮದ್ಯ ಸೇವನೆಯಿಂದ ಅಲ್ಸರ್ ಬರುತ್ತದೆ. ಲಿವರ್‌ಕೆಟ್ಟು ರಕ್ತ ಹೀನತೆ ಉಂಟಾಗುತ್ತದೆ.
- ನೋವು, ನಿರಾಶೆ, ದುಃಖ ಮರೆಯಲು ಮದ್ಯಸೇವನೆ ಖಂಡಿತ ಮಾಡಬಾರದು. ಈ ತೊಂದರೆಗಳಿದ್ದರೆ ವೈದ್ಯರ ಸಲಹೆ ಪಡೆಯಬೇಕು. ಪ್ರತಿಯೊಂದು ತೊಂದರೆಗೆ ಪರಿಹಾರ ಇದ್ದೇ ಇದೆ.
- ಕುಡಿಯುವುದು ಚಟವಾದರೆ ದೇಹದ ಅಂಗಾಂಗಗಳು ರೋಗಗ್ರಸ್ತವಾಗುತ್ತವೆ. ಜಠರ, ಯಕೃತ್ತು (ಲಿವರ್), ಮಿದುಳು, ಹೃದಯ ಮತ್ತು ಮೂತ್ರ ಜನಕಾಂಗಗಳು ಹಾಳಾಗುತ್ತವೆ.
- ಅಪರಾಧಕ್ಕೂ ಮದ್ಯಪಾನಕ್ಕೂ ಬಿಡಸಲಾಗದ ನಂಟು. ಹೊಡೆದಾಟ, ಕೊಲೆ, ಅತ್ಯಾಚಾರ ಪ್ರಕರಣಗಳಲ್ಲಿ ಮದ್ಯಸೇವನೆ ಮುಖ್ಯ ಕಾರಣವಾಗಿರುತ್ತದೆ.
- ಏಕಪ್ರಕಾರವಾಗಿ ಕುಡಿಯುವ ವ್ಯಕ್ತಿ ಸಂಶಯಪೀಡಿತನಾಗುತ್ತಾನೆ. ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯ ಹಾಳಾಗುತ್ತದೆ.
- ಆದಾಯ ಬಂದಾಗ ಕುಡಿತದ ಮೋಜು ಬೇಡ. ನಾಳಿನ ಭವಿಷ್ಯಕ್ಕೆ ಉಳಿತಾಯ ಬಹಳ ಮುಖ್ಯ.
- ಕುಡಿತದ ಚಟದಿಂದ ಪಾರಾಗಲು ಖಂಡಿತ ಸಾಧ್ಯವಿದೆ. ಇದಕ್ಕೆ ಕೆಲವು ಔಷಧಿಗಳೇ ಇವೆ. ಸ್ವಯಂಸೇವಾ ಸಂಸ್ಥೆಗಳನ್ನು ಸಂಪರ್ಕಿಸಿ.
- ಮದ್ಯಸೇವನೆಯಿಂದ ಲೈಂಗಿಕಶಕ್ತಿ ಖಂಡಿತ ಹೆಚ್ಚುವುದಿಲ್ಲ. ಸತ್ಯಸಂಗತಿ ಎಂದರೆ ಇದರಿಂದ ಲೈಂಗಿಕ ದುಷ್ಪರಿಣಾಮವೇ ಹೆಚ್ಚು
- ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳಿ, ಮನುಷ್ಯನಿಗೆ ಯಾವುದು ಅಸಾಧ್ಯ? ವ್ಯಾಯಾಮ, ಯೋಗಾಭ್ಯಾಸ ಮಾಡಿ. ಹಣ್ಣು ತರಕಾರಿಗಳನ್ನು ಸೇವಿಸಿ ನಿತ್ಯ ದೇವರ ಧ್ಯಾನ ಮಾಡಿ.
- ಸಂಸಾರದಲ್ಲಿ ಪ್ರೀತಿ, ಸಂತೋಷ ಬಹಳ ಮುಖ್ಯ. ಕುಡಿತ ಅದನ್ನು ಹಾಳು ಮಾಡುತ್ತದೆ. ಆದ್ದರಿಂದ ಈ ಹಿತಶತ್ರುವಿನ ಬಗ್ಗೆ ಎಚ್ಚರವಾಗಿರಬೇಕು.



ಆರ್. ದಯಾನಂದರಾವ್
ಅಧ್ಯಕ್ಷರು

ಎಚ್ಚರಿಕೆ :

**ಮದ್ಯಪಾನ - ಶತ್ರುಸಮಾನ**

ಪ್ರಕಟಣೆ

ಕಾರ್ಯದರ್ಶಿ, ಕರ್ನಾಟಕ ಮದ್ಯಪಾನ ಸಂಯಮ ಮಂಡಳಿ,
ವಿಶ್ವೇಶ್ವರಯ್ಯ ಮುಖ್ಯ ಗೋಪುರ, 6ನೇ ಮಹಡಿ, ಡಾ. ಅಂಬೇಡ್ಕರ್ ಬೀದಿ,
ಬೆಂಗಳೂರು - 560 001   ದೂರವಾಣಿ : 2865832

# ಆಪ್ತಸಮಾಲೋಚನೆ

ಉಷಾ ನವರತ್ನರಾಮ್

## ಸಮಸ್ಯೆಯಾದ ಸತಿ

ನಾನು ವಿವಾಹಿತ ತರುಣ, ಕೃಷಿಕ. ನನ್ನ ತಂದೆ ಗೌರವಸ್ಥ ಉನ್ನತ ಸರಕಾರಿ ಅಧಿಕಾರಿ. ೨ ವರ್ಷಗಳ ಹಿಂದೆ ನನ್ನ ಮದುವೆಯಾಯಿತು. ಮದುವೆಯಾದ ದಿನದಿಂದ ಇಲ್ಲಿಯವರೆಗೆ ನನ್ನ ಪತ್ನಿಯಿಂದ ನೂರಾರು ಸಮಸ್ಯೆಗಳು ಉದ್ಭವಿಸಿವೆ. ಉದಾ : ೧. ಅಡಿಗೆ ಮಾಡಲು ಬರುವುದಿಲ್ಲ. ೨. ಮನೆಯಲ್ಲಿ ಸರಿಯಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ೩. ಅವಳ ಆರೋಗ್ಯ ಸರಿಯಾಗಿಲ್ಲ (ಋತುಚಕ್ರವು ಅವಳು ಋತುಮತಿಯಾದಾಗಿನಿಂದಲೂ ಸರಿಯಾಗಿ ಆಗುತ್ತಿರಲಿಲ್ಲವಂತೆ. ಈ ವಿಷಯವನ್ನು ಅವಳ ತಂದೆ ತಾಯಿ ತಿಳಿಸಿರಲಿಲ್ಲ. ಒಂದು ವರ್ಷದಿಂದ ಋತುಚಕ್ರ ನಿಂತಿದೆ. ವೈದ್ಯರಿಗೆ ತೋರಿಸಿದರೂ ಪರಿಣಾಮಕಾರಿಯಾಗಿಲ್ಲ.) ೪. ಮನೆಯಲ್ಲಿಯೇ ಕಳ್ಳತನ ಮಾಡುವ ಹಾಗೂ ಚಿಕ್ಕಪುಟ್ಟ ವಿಷಯಕ್ಕೂ ಸುಳ್ಳು ಹೇಳುವ ಚಟವಿದೆ. ಇದು ಬಾಲ್ಯದಿಂದ ಇರುವ ಚಟವಂತೆ.

ನನ್ನ ಪತ್ನಿಗೆ ಮಕ್ಕಳಾಗುವ ಸೂಚನೆ ಕಾಣುತ್ತಿಲ್ಲ. ಮೊಮ್ಮಕ್ಕಳು ಬೇಕು ಎನ್ನುವ ಮನೆಯವರಿಗೆ ಸಮಸ್ಯೆಯಾಗಿದೆ. ಆದ್ದರಿಂದ ನಾನು ವಿವಾಹ ವಿಚ್ಛೇದನ ಪಡೆದು ಮರುಮದುವೆಯಾಗಬೇಕೆಂದಿದ್ದೇನೆ. ಈಗ ಸಮಸ್ಯೆ ಎಂದರೆ : ೧. ಈ ಸಂದರ್ಭದಲ್ಲಿ ವಿಚ್ಛೇದನ ಪಡೆಯುವುದು ಸಾಧ್ಯವೇ? ೨. ಪಡೆದರೆ ಅವಳಿಗೆ ಏನಾದರೂ ಪರಿಹಾರ ಕೊಡಬೇಕಾಗುವುದೇ? (ನಾನು ಸಿದ್ಧ). ೩. ಅವಳು ನನ್ನ ಮನೆಯಲ್ಲಿ ಇದ್ದರೂ ಮರುವಿವಾಹ ಸಾಧ್ಯವೇ (ವಿಚ್ಛೇದನವಿಲ್ಲದೆ?) ೪. ಅವಳು ವಿಚ್ಛೇದನಕ್ಕೆ ಒಪ್ಪಿದ್ದಾಳೆ. ಆದರೆ ಅವಳ ತಂದೆ, ತಾಯಿ, ಬಂಧು-ಬಳಗ ಒಪ್ಪದಿದ್ದರೆ ವಿಚ್ಛೇದನ ಸಾಧ್ಯವಿಲ್ಲವೇ? ಅವಳ ಬಂಧು-ಬಳಗ ಜಗಳಗಂಟ ಜನರು, ಹಳ್ಳಿಯವರು.

ಅಡಿವೆಪ್ಪ

**ಸಲಹೆ**

ವಿವಾಹವಾಗಿ ಎರಡೇ ವರ್ಷಗಳಲ್ಲಿ ನಿಮ್ಮ ಕನಸುಗಳೆಲ್ಲಾ ನನಸಾಗದು. ಎಲ್ಲಾ ಹೆಣ್ಣು ಮಕ್ಕಳಿಗೂ ಮನೆ ಕೆಲಸ ಮಾಡುವುದು, ಅಡಿಗೆ ಮಾಡುವುದು ಬರುವುದಿಲ್ಲ. ಒಂದು ಹೆಣ್ಣು ತನ್ನ ತವರಿನವರನ್ನೆಲ್ಲಾ ತೊರೆದು ಪತಿಯ ಮನೆಗೆ ಬರುತ್ತಾಳೆ. ಅಲ್ಲಿ ಅವಳು ತಾನು ತೊರೆದು ಬಂದ ತವರಿನ ಪರಿಸರವನ್ನೇ ಬಯಸುತ್ತಾಳೆ. ಅವಳಿಗೆ ನಿಮ್ಮ ತಾಯಿ ಅಡಿಗೆ ಮಾಡುವುದನ್ನು ಹೇಳಿ ಕೊಡಬಹುದು, ನಿಮ್ಮ ತಂಗಿ, ತಮ್ಮ, ತಂದೆ, ತಾಯಿ ಅವಳೊಂದಿಗೆ ಪ್ರೀತಿಯಿಂದ ಮಾತಾಡಿಸಬಹುದು. ಅವಳನ್ನು ನಿಮ್ಮವರಲ್ಲಿ ಒಬ್ಬಳನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿ. ಅವಳು ಕದಿಯಲು ಕಾರಣ, ನೀವು ಅವಳಿಗೆ ಬೇಕಾದುದನ್ನು ಕೊಡದೇ ನಿರ್ಲಕ್ಷಿಸಿರಬಹುದು. ಋತುಚಕ್ರ ನಿಯಮಿತವಾಗಿರದಿದ್ದಲ್ಲಿ ತಜ್ಞ ವೈದ್ಯರಲ್ಲಿ ತೋರಿಸಿ. ನಿಯಮಿತವಾಗಿ ಋತುಚಕ್ರವಿಲ್ಲದಿರುವುದಕ್ಕೆ ಮಾನಸಿಕ ಒತ್ತಡವೂ ಒಂದು ಕಾರಣ. ಅವಳನ್ನು ವಿನಾಕಾರಣ ದೂಷಿಸುವುದೂ ಟೀಕೆ ಮಾಡುವುದು ಬಿಟ್ಟು ಅವಳನ್ನು, ಅವಳ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ. ಅವೆಲ್ಲಕ್ಕೂ ಮೀರಿ ಅವಳನ್ನು ವಿಚ್ಛೇದಿಸುವುದಾದರೆ ಯಾವುದಾದರೂ ವಕೀಲರನ್ನು ಸಂದರ್ಶಿಸಿ ಕಾನೂನಿನ ಸಲಹೆ ಪಡೆಯಿರಿ.

## ರತಿಕ್ರೀಡೆಯೇ ಬದುಕಲ್ಲ!

ವಿವಾಹದ ನಂತರ ಪ್ರಥಮ ರಾತ್ರಿ ನಾನು ಹೆಂಡತಿಯ ಬಳಿಗೆ ಹೋಗುತ್ತಿದ್ದಂತೆ ಅವಳಲ್ಲಿ ಏನೋ ಒಂದು ರೀತಿ ಭಯ, ಅಂಜಿಕೆ, ನಾಚಿಕೆ. ರಾತ್ರಿ ೩ ಗಂಟೆಯವರೆಗೂ ಅವಳನ್ನು ಮುಟ್ಟುವುದಕ್ಕೆ ಏನೆಲ್ಲಾ ಉಪದೇಶ ನೀಡಿದರೂ ಆ ಬಗ್ಗೆ ಆಸಕ್ತಿವಹಿಸಲಿಲ್ಲ. ಕೊನೆಗೂ ನಾನು ಅನಿವಾರ್ಯವಾಗಿ ಬಲತ್ಕಾರ ಮಾಡಲೇಬೇಕಾಯ್ತು. ಅವಳು ಹೀಗೆ ಅನ್ನೋದು ನನಗೆ ಮೊದಲೇ ತಿಳಿದಿದ್ದರೆ ನಾನು ಮದುವೆನೇ ಆಗುತ್ತಿದ್ದಿಲ್ಲ. ಹಾಗೆ ಹೀಗೆ ಎಂದು ಗೋಳಿಡುತ್ತಾ ನೇಣು ಹಾಕಿಕೊಳ್ಳಲು ಪ್ರಯತ್ನಿಸಿದಳು. ನಾನು ಏನೆಲ್ಲ ಗಂಡ-ಹೆಂಡತಿಯರ ಬಗ್ಗೆ ಉಪದೇಶ ನೀಡಿದರೂ ಯಾವುದೇ ಪ್ರಯೋಜನವಾಗಲಿಲ್ಲ. ಅಂದಿನಿಂದ ಇಂದಿನ ವರೆಗೂ ನಾವಿರ್ವರು ಒಂದೇ ಮನಸ್ಸಿನಿಂದ ಸುಖವಾಗಿ, ಸಂತೋಷವಾಗಿ ಸಂಪರ್ಕ ಮಾಡಿಲ್ಲ. ಆ ಬಗ್ಗೆ ಅವಳಿಗೆ ಆಸಕ್ತಿನೇ ಇಲ್ಲ. ಹೀಗಾಗಿ ಬರೀ ಬಲತ್ಕಾರದಿಂದಲೇ ನಾನು ನನ್ನ ಹೆಂಡತಿಯನ್ನು ಸಂಪರ್ಕ ಮಾಡುವುದು ಮುಂದುವರಿಯಿತು. ಈಗ ೪ ಮಕ್ಕಳಿವೆ. ನನ್ನ ಹೆಂಡತಿ ಅದೊಂದು ವಿಷಯದಲ್ಲಿ ಮಾತ್ರ ಸಹಕರಿಸುತ್ತಿಲ್ಲ. ಉಳಿದ ಎಲ್ಲಾ ವಿಷಯದಲ್ಲೂ ನಾವು ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದೇವೆ.

ನಾನು ಸಂಪರ್ಕ ಮಾಡುವಾಗ ಶೀಘ್ರ ಸ್ಖಲನವಾಗುವುದಿಲ್ಲ, ಸ್ಖಲನವಾಗುವುದಕ್ಕೆ ಕನಿಷ್ಠ ೪೦ ನಿಮಿಷಗಳಾದರೂ ಬೇಕು. ನಾನು ತುಂಬಾ ಆರೋಗ್ಯವಂತ.

ಹೆಸರು, ಊರು ಬೇಡ

**ಸಲಹೆ**

ವಿವಾಹವಾಗಿ ನಾಲ್ಕು ಮಕ್ಕಳನ್ನು ಪಡೆದು ಇನ್ನು ನಿಮ್ಮ ಲೈಂಗಿಕ ಜೀವನದಲ್ಲಿ ಸಮಸ್ಯೆಗಳನ್ನು ಪರಿಹರಿಸಿಕೊಳ್ಳದಿರುವುದು ಆಶ್ಚರ್ಯ! ವಿವಾಹವಾದ ಮೇಲೆ ಹೆಣ್ಣನ್ನು ಭೋಗ್ಯ ವಸ್ತು ಎನ್ನುವ ಅಭಿಪ್ರಾಯವನ್ನು ನೀವು ನಿಮ್ಮ ಪತ್ನಿಯ ಮನಸ್ಸಿನ ಮೇಲೆ ಪ್ರಭಾವ ಹೇರಿದ್ದೀರಿ. ಅವಳು ಅನಕ್ಷರಸ್ಥಳು ಎಂದು ಹೇಳುವ ಶಿಕ್ಷಕರಾಗಿರುವ ನೀವು ಮೊದಲು ಅವಳನ್ನು ಅಕ್ಷರಸ್ಥಳನ್ನಾಗಿ ಮಾಡಿ ಅಕ್ಷರ ಸಂಸ್ಕಾರ ನೀಡಿದ್ದರೆ ನೀವು ಅವಳನ್ನು ಸುಲಭವಾಗಿ ತಿದ್ದಬಹುದಿತ್ತು. ಎಷ್ಟೋ ಭಾವನೆಗಳನ್ನು ಬಾಯಿ ಮಾತಿನಿಂದ ಹೇಳಲಾಗುವುದಿಲ್ಲ. ನಿಮ್ಮ ಕಾಗದ ನೋಡಿದರೆ ನೀವೆಂದೂ ಅವಳ ಭಾವನೆಗಳಿಗೆ ಬೆಲೆ ಕೊಟ್ಟಿಲ್ಲ. ದಾಂಪತ್ಯ ಜೀವನವೇನೆಂದೇ ತಿಳಿಯದ ಅವಳಿಗೆ ಹೆದರಿಕೆ, ಭಯ ಏಕೆಂದು ತಿಳಿದುಕೊಳ್ಳಲು ಯತ್ನಿಸಿಲ್ಲ. ಎಷ್ಟೋ ಹೆಣ್ಣು ಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಲೈಂಗಿಕ ಜೀವನದ ಬಗ್ಗೆ ಭಯಸ್ಥರಾಗಲು, ಫ್ರಿಜಿಡ್ ಆಗಿರುವುದೂ ಉಂಟು. ಇದಕ್ಕೆ ಕಾರಣ ಅವರು ಬೆಳೆದ ಪರಿಸರ, ಅವರು ಕಣ್ಣಾರೆ ಕಂಡ ಲೈಂಗಿಕ ವ್ಯಭಿಚಾರ, ಅವರ ಮೇಲೆ ಎಸಗಿರಬಹುದಾದ ಬಲಾತ್ಕಾರ, ದೌರ್ಜನ್ಯಗಳೂ ಇರುತ್ತವೆ. ವಿದ್ಯಾವಂತರಾದರೆ ಅವರ ಮನಸ್ಸನ್ನು ಸರಿಪಡಿಸಲು ಸುಲಭ. ಪ್ರೀತಿ, ಆತ್ಮೀಯತೆ, ಸ್ನೇಹ ಇವುಗಳಿಂದ ಗೆಲ್ಲಲಾರದವು ಯಾವುದೂ ಇಲ್ಲ. ಈಗಲೂ ಕಾಲ ಮಿಂಚಿಲ್ಲ. ನಿಮ್ಮ ಪತ್ನಿಯನ್ನು ಒಲಿಸಿಕೊಳ್ಳುವುದು ನಿಮ್ಮ ಕೈಯಲ್ಲಿದೆ. ಅವಳ ಮನಸ್ಸಿನಾಳದ ಅಂಜಿಕೆ, ಭಯ ಇವುಗಳನ್ನು ಅವಳು ವೈದ್ಯರುಗಳಿಗಿಂತ ನಿಮ್ಮಲ್ಲಿ ಸುಲಭವಾಗಿ ತೋಡಿಕೊಳ್ಳಬಲ್ಲಳು. ಎಷ್ಟೋ ದಂಪತಿಗಳಲ್ಲಿ ಸಾಮರಸ್ಯವಿರುವುದಿಲ್ಲ. ಹಾಗೆಂದು ಪರಸ್ತ್ರೀ ಸಹವಾಸ ಮಾಡುವುದು, ಧೂಮಪಾನ ಮಾಡುವುದು, ಲೈಂಗಿಕ ಪುಸ್ತಕಗಳನ್ನು ಓದುವುದನ್ನು ಬಿಟ್ಟು, ಬದುಕಿನಲ್ಲಿ ರತಿಕ್ರೀಡೆಯೊಂದೇ ಅಷ್ಟು ಮುಖ್ಯವಲ್ಲ. ಒಂದಾಗಿ ಹೊಂದಿಕೊಂಡು ಬಾಳುವುದಕ್ಕೆ ಅನೇಕ ಪ್ರಕಾರಗಳಿವೆ. ನಿಮ್ಮ ಮನಸ್ಸಿಗೆ ಅವಳು ಅನಕ್ಷರಸ್ಥಳು. ಅವಳಿಗೆ ಲೈಂಗಿಕಾಸಕ್ತಿಯಿಲ್ಲ. ಇದನ್ನು ಕಿತ್ತೊಗೆದು ಅವಳನ್ನು ನಿಮ್ಮ ಬಾಳಿನ ಇನ್ನೊಂದು ಮುಖ ನಿಮ್ಮ ಮಕ್ಕಳ ತಾಯಿ, ಮನೆಯೊಡತಿ. ಈ ಸ್ಥಾನದಲ್ಲಿರಿಸಿ ನೋಡಿ.

## ಹೆಣ್ಣಿಗೆ ಗಂಡನ ಪ್ರೀತಿಯೊಂದೇ ಸಾಲದು!

ನಾನು ೨೦ ವರ್ಷದ ಯುವಕನಾಗಿದ್ದು ದ್ವಿತೀಯ ಪಿ.ಯು.ಸಿ. ಮುಗಿಸಿರುವೆ. ನಿರುದ್ಯೋಗಿ. ನಾನು ಸುಮಾರು ಒಂದು ವರ್ಷದಿಂದ ನಮ್ಮ ಪಕ್ಕದ ಮನೆಯ ಹುಡುಗಿಯನ್ನು ಪ್ರೀತಿಸುತ್ತಿದ್ದೇನೆ. ಅವಳು ಕೂಡ ನನ್ನನ್ನು ಮನಸಾರೆ ಪ್ರೀತಿಸುತ್ತಿದ್ದಳು. ಇನ್ನೊಂದು ವಿಷಯವೇನೆಂದರೆ ಆಕೆಯ ಮದುವೆ ನಿಶ್ಚಿತಾರ್ಥವಾಗಿದೆ.

ವಿನಾಕಾರಣ ಈಗ ಅವಳು ನನ್ನನ್ನು ತಿರಸ್ಕರಿಸುತ್ತಿದ್ದಾಳೆ. ನನ್ನನ್ನು ನೋಡಿದರೆ ಅಪರಿಚಿತರಂತೆ ನಡೆದುಕೊಳ್ಳುವಳು. ನಾನು ಇದೇ ಚಿಂತೆಯಲ್ಲೇ ಅನಾರೋಗ್ಯದಿಂದ ಬಳಲುತ್ತಿದ್ದೇನೆ. ಸದಾ ಪಾದರಸದಂತೆ ಚಟುವಟಿಕೆಯಿಂದ ಕೂಡಿರುತ್ತಿದ್ದ ನನಗೆ ಸುಮಾರು ೪ ತಿಂಗಳಿನಿಂದ ಮಂಕು ಕವಿದಂತಾಗಿದೆ. ನಮ್ಮ ಮನೆಯಲ್ಲಿ ನನ್ನ ಬಗ್ಗೆ ಬಹಳ ಚಿಂತಿಸುತ್ತಿದ್ದಾರೆ.

***ಹೆಸರು ಬೇಡ,*** *ಮುದ್ದೇ ಬಿಹಾಳ*

**ಸಲಹೆ**

**ದ್ವಿತೀಯ ಪಿಯುಸಿ ಓದುತ್ತಿರುವ ನೀವು ಪ್ರೀತಿ, ಪ್ರೇಮ ಇವುಗಳ ಬಲೆಗೆ ಸಿಕ್ಕಿಹಾಕಿಕೊಳ್ಳದೆ ಓದಿನತ್ತ ಗಮನ ಹರಿಸಿ. ನಿಮ್ಮ ಭವಿಷ್ಯ ಭದ್ರ ಮಾಡಿಕೊಳ್ಳಿ. ನಿಮ್ಮ ಹರೆಯದ ಪ್ರೀತಿ, ಪ್ರೇಮ ಎಲ್ಲಾ ಕ್ಷಣ ಭಂಗುರ. ಆ ಹುಡುಗಿಗೆ ಅಕ್ಕ ಬುದ್ಧಿ ಹೇಳಬಹುದು. ಅವಳು ನಿರ್ಧಾರ ಬದಲಾಯಿಸಿರಬಹುದು. ನೀವು ನಿಜವಾಗಿ ಆ ಹುಡುಗಿಯನ್ನು ಪ್ರೀತಿಸುವುದೇ ಆದರೆ ಅವಳಿಗೆ ನಿಶ್ಚಯ ವಾಗಿರುವ ಗಂಡಿನೊಂದಿಗೆ ಅವಳು ವಿವಾಹವಾಗಿ ಸುಖವಾಗಿರಲೆಂದು ಹಾರೈಸಿ. ಒಂದು ಹೆಣ್ಣಿಗೆ ಬರಿಯ ಗಂಡನ ಪ್ರೀತಿಯೊಂದೇ ಸಾಲದು. ಅವಳಿಗೆ ಬದುಕು ನೀಡಿ ಕಾಪಾಡಬಲ್ಲವನೂ ಆಗಿರಬೇಕು. ಪ್ರಾಕ್ಟಿಕಲ್ ಆಗಿ ಯೋಚಿಸಿ. ಆ ಹುಡುಗಿಯನ್ನು ಬಾಳಲು ಬಿಟ್ಟು ನಿಮ್ಮ ಭವಿಷ್ಯ ರೂಪಿಸಿಕೊಳ್ಳಿ, ಮುಂದೆ ನಿಮ್ಮನ್ನು ಪ್ರೀತಿಸಿ ನಿಮ್ಮೊಡನೆ ಬದುಕು ಹಂಚಿಕೊಳ್ಳಲು ಈ ಹುಡುಗಿಗಿಂತ ಹೆಚ್ಚಿನವಳು ಸಿಗಬಹುದು.**

## ಅಕ್ಕ ತಮ್ಮನ ಸ್ನೇಹ

ನಾನು ೪ ವರ್ಷಗಳಿಂದ ಒಬ್ಬ ಹುಡುಗಿಯನ್ನು ಅಕ್ಕನ ಸಮಾನ ಪ್ರೀತಿಸುತ್ತಿದ್ದೇನೆ. ಪಕ್ಕದ ಮನೆಯಲ್ಲಿರುವ ಅವರೂ ನನ್ನನ್ನು ತಮ್ಮನ ರೀತಿ ಕಾಣುತ್ತಾರೆ. ನಮಗೆ ಒಬ್ಬರನ್ನೊಬ್ಬರು ಬಿಟ್ಟು ಇರಲು ಆಗುತ್ತಿಲ್ಲ. ಹುಡುಗಿಯ ಮನೆಯವರು ಮುಂದಿನ ವರ್ಷ ಆಕೆಗೆ ಮದುವೆ ಮಾಡುತ್ತಾರೆ. ಅವರು ಮದುವೆ ಆಗುವುದೂ ನನಗೂ ಇಷ್ಟ. ಆದರೆ ಮದುವೆಯಾದ ಮೇಲೆ ಅಕ್ಕ ನನ್ನನ್ನು ಬಿಟ್ಟು ಹೇಗಿರುತ್ತಾರೂ ಎಂಬುದು ಸಮಸ್ಯೆ. ಒಟ್ಟಿನಲ್ಲಿ ನಾವಿಬ್ಬರೂ ಸಾಯುವ ತನಕ ಜೊತೆಯಲ್ಲೇ ಇರುವ ಹಾಗೆ ಸಲಹೆ ಕೊಡಿ.

***ಅನಾಮಿಕ,*** *ಊರು ಬೇಡ*

**ಸಲಹೆ**

**ಅಕ್ಕನಂತೆ ಪ್ರೀತಿಸುವ ನೀವು ಅವಳು ಎಲ್ಲಾದರೂ ಸುಖವಾಗಿರಲಿ ಎಂದು ಆಶಿಸಬೇಕು, ಮದುವೆಯಾಗಿ ಹೋದರೂ, ಬೇಕೆನಿಸಿದಾಗ ಅವಳನ್ನು ನೀವು ಹೋಗಿ ನೋಡಿ ಬರಬಹುದು. ಯಾವುದೂ ಅತಿಯಾದರೆ ವಿಷ. ನಿಮ್ಮ ಮನಸ್ಸಿನಲ್ಲಿರುವ ಆಕೆಯ ಬಗ್ಗೆ ಪ್ರೀತಿ, ವಿಶ್ವಾಸ ಭದ್ರವಾಗಿಟ್ಟುಕೊಳ್ಳಿ, ವಿನಾಕಾರಣ ಅವಳ ಬಾಳಿನಲ್ಲಿ ಸಮಸ್ಯೆಯಾಗಬೇಡಿ. ಹೆಣ್ಣಿಗೆ ಪತಿಯ ಪ್ರೀತಿ, ವಿಶ್ವಾಸ ದೊರಕಿದ ಮೇಲೆ ಇನ್ನೆಲ್ಲಕ್ಕೂ ಎರಡನೆಯ ಸ್ಥಾನ. ಅವಳ ಕಷ್ಟಗಳಲ್ಲಿ ಸಹಾಯ ಮಾಡಿ. ಆದಷ್ಟು ದೂರದಿಂದಲೇ ಅವಳು ಸುಖವಾಗಿ ಸಂತೋಷವಾಗಿರಲೆಂದು ಹರಸಿ. ಭಾವೋದ್ವೇಗಗಳನ್ನು ಹಿಡಿತದಲ್ಲಿರಿಸಿಕೊಳ್ಳಿ, ಇಲ್ಲದಿದ್ದಲ್ಲಿ ಅವೆಲ್ಲವೂ ವಿಷವಾದೀತು!**

## ಕೆಂಡಕಾರುವ ಹುಡುಗಿ

ನಾನೀಗ ಪಿ.ಯು.ಸಿ. (ವಿಜ್ಞಾನ) ತೇರ್ಗಡೆಯಾಗಿದ್ದೇನೆ. ನನಗೆ ಉನ್ನತ ಹುದ್ದೆ ಕೊಡಿಸುವ ಆಸೆ ನಮ್ಮ ಮನೆಯವರಿಗಿದೆ. ಈ ಮಧ್ಯೆ ನಾನು ಸುಮಾರು ೮ ತಿಂಗಳಿಂದ ಒಬ್ಬ ಹುಡುಗಿಯನ್ನು ಪ್ರೀತಿಸುತ್ತಿರುವೆ. ಅವಳು ಎಸ್.ಎಸ್.ಎಲ್.ಸಿ. ಓದುತ್ತಿದ್ದಾಳೆ. ನಮ್ಮಿಬ್ಬರದು ಬೇರೆ ಬೇರೆ ಜಾತಿ. ಈಗ ಆಕೆ ನನ್ನನ್ನು ನೋಡಿದರೆ ಕಾರಣವಿಲ್ಲದೆ ಕೆಂಡಕಾರುವಳು. ೨ ೧/೨ ತಿಂಗಳಿಂದ ನನ್ನನ್ನು ಕಂಡರೂ ಕಾಣದಂತೆ ಹೋಗುವಳು. ಇನ್ನೊಂದು ವಿಷಯವೆಂದರೆ ನಾವಿಬ್ಬರು ಪ್ರೀತಿಸುವುದಕ್ಕೆ ಮುಂಚೆಯೇ ಆಕೆಯ ಎಂಗೇಜ್‌ಮೆಂಟ್ ಆಗಿತ್ತು. ನಮ್ಮಿಬ್ಬರ ಮನೆಗಳು ಅಕ್ಕಪಕ್ಕದಲ್ಲೇ ಇರುವುದರಿಂದ ನನಗೆ ಆಕೆಯನ್ನು ಮರೆಯಲು ಆಗುತ್ತಿಲ್ಲ. ನನ್ನ ನೊಂದ ಮನಕ್ಕೆ ಸಾಂತ್ವನ ಹೇಳಿ.

***ಹೆಸರು ಬೇಡ,*** *ಇಳಕಲ್ಲ*

**ಸಲಹೆ**

**ಪಕ್ಕದ ಮನೆಯ ಹುಡುಗಿಯೆಂದು ಮೊದಲೇ ಮದುವೆ ನಿಶ್ಚಯ ವಾಗಿರುವ ಹುಡುಗಿಯನ್ನು ಪ್ರೀತಿಸಲು ಯತ್ನಿಸಿದುದು ನಿಮ್ಮ ಬಲಹೀನತೆ, ಮೂರ್ಖತನವನ್ನು ತೋರಿಸುತ್ತದೆ. ಬಲಹೀನ ಮನಸ್ಸುಳ್ಳವರಿಗೆ ಸಮಸ್ಯೆಗಳು ಕೊನೆಗೊಳ್ಳುವುದಿಲ್ಲ. ದೃಢ ನಿರ್ಧಾರ ಮಾಡಿ ಅವಳನ್ನು ಮನಸ್ಸಿನಿಂದ ಹೊರ ಹಾಕಿ. ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಿ, ಮನಸ್ಥೈರ್ಯ, ನಿಮ್ಮ ನಿಲುವು, ನಿರ್ಧಾರಗಳನ್ನು ಬೌದ್ಧಿಕವಾಗಿ, ವಿಚಾರವಂತಿಕೆಯಿಂದ ತೀರ್ಮಾನಿಸಲು ನಿಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಿ.**

## ಅಂಜುಬುರುಕರು ಪ್ರೀತಿಸಬಾರದು!

ನಾನು ಹಾಗೂ ನನ್ನ ಪ್ರೇಯಸಿ ಒಂದೇ ಕಾಲೇಜಿನಲ್ಲಿ ಓದುತ್ತಿದ್ದೇವೆ. ನಾವು ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೇವೆ. ಆದರೆ ಅವಳ ಮುಂದೆ ಹೋದಾಕ್ಷಣ ನನ್ನ ನಾಲಗೆ ಹೊರಳುವುದಿಲ್ಲ. ಹೀಗೇಕಾಗುತ್ತದೆ?

***ಹೆಸರು ಬೇಡ,*** *ಔರಾದ (ಬಾ)*

**ಸಲಹೆ**

**ನಿಮ್ಮಂತಹ ನಾಲಿಗೆಯಿಲ್ಲದವರು, ಪುಕ್ಕಲು ಸ್ವಭಾವದವರು ಪ್ರೀತಿಸಬಾರದು. ಪ್ರೀತಿ ಮಾಡಬಾರದು-ಮಾಡಿದರೆ ಜಗಕೆ ಹೆದರಬಾರದು. ಗಟ್ಸ್ ಇಲ್ಲದವರು, ಧೈರ್ಯವಿಲ್ಲದವರು ಜೀವನದಲ್ಲಿ ಏನೂ ಸಾಧಿಸಲಾರರು. ಮೊದಲು ಧೈರ್ಯವಾಗಿ ಏನನ್ನಾದರೂ ಎದುರಿಸಲು ಕಲಿಯಿರಿ. ಆಮೇಲೆ ಪ್ರೀತಿ ಮಾಡಿ.**

ಉಷಾ ನವರತ್ನರಾಮ್ ಅವರೊಡನೆ

### ಆಪ್ತ ಸಮಾಲೋಚನೆ

ನಿಮ್ಮ ಯಾವುದೇ ವೈಯಕ್ತಿಕ ಸಮಸ್ಯೆ, ಸಾಮಾಜಿಕ-ಕೌಟುಂಬಿಕಬಿಕ್ಕಟ್ಟು ಕುರಿತು ಚುಟುಕಾಗಿ, ನಿರ್ದಿಷ್ಟವಾಗಿ ಬರೆದು ಕಳಿಸಿ. ಇದು ಕೇವಲ ಹೆಂಗಸರಿಗೇ ಮೀಸಲಾದ ಅಂಕಣವಲ್ಲ. **ಈ ವಿಭಾಗಕ್ಕೆ ಗಂಡಸರೂ ತಮ್ಮ ಸಮಸ್ಯೆಗಳನ್ನು ಬರೆದು** ಕಳಿಸಬಹುದು. ಅನುಭವೀ ಬರಹಗಾರ್ತಿ **ಉಷಾ ನವರತ್ನರಾಮ್** ಅವರು ನಿಮ್ಮ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾರೆ. ಪತ್ರದಲ್ಲಿ ನಿಮ್ಮ ಹೆಸರು, ವಿಳಾಸ ನಮೂದಿಸುವ ಅಗತ್ಯವಿಲ್ಲ.

ವಿಳಾಸ: **ಬಿಸಿಲ ಬದುಕು** ಮಾಸ ಪತ್ರಿಕೆ **ಆಪ್ತ ಸಮಾಲೋಚನೆ** ವಿಭಾಗ,
ಅಂಚೆ ಪೆಟ್ಟಿಗೆ ೭೯೫೧ ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಮಹಿಳೆಯರಿಗೊಂದು 'ಸುವರ್ಣ' ಸುದ್ದಿ!

ಇದು ಬಂಗಾರದ ವರ್ಷವಾಗಿದೆ. ಕಾರಣ ಈ ಹಣಕಾಸು ವರ್ಷದ ಪ್ರಾರಂಭದಿಂದಲೂ ಬಂಗಾರದ ಬೆಲೆ ಕಡಿಮೆಯಾಗುತ್ತಿರುವುದು ನಮ್ಮ ಸಮಾಜದ ಈ ಮೋಹಕ ಲೋಹದ ಪ್ರಿಯರಿಗೆ ಅದರಲ್ಲೂ ವಿಶೇಷವಾಗಿ ಸ್ತ್ರೀಯರಿಗೆ ಸಾಕಷ್ಟು ಸಂತೋಷವಾಗಿದೆ. ಸ್ಟ್ಯಾಂಡರ್ಡ್ ಬಂಗಾರ ಹಾಗೂ ಇಪ್ಪತ್ತೆರಡು ಕ್ಯಾರೆಟ್ ಬಂಗಾರದ ಬೆಲೆಗಳೆರಡೂ ಇಳಿಮುಖ ಪ್ರವೃತ್ತಿ ಮುಂದುವರೆಯುತ್ತಿರುವುದು ಸಾಮಾನ್ಯ ಜನತೆಗೆ ಆಶ್ಚರ್ಯದ ಜೊತೆಗೆ ಹರ್ಷವನ್ನು ತಂದಿದೆ.

ಸರಕಾರ ಬಹು ವರ್ಷಗಳಿಂದ ಬಂಗಾರದ ಮೇಲೆ ನಿಯಂತ್ರಣ ಹೊಂದಿತ್ತು. ಇದರಿಂದ ಬಂಗಾರದ ಕಳ್ಳ ಸಾಗಾಣಿಕೆಯ ವ್ಯವಹಾರಕ್ಕೆ ಅವಕಾಶವಾಯಿತು. ಈ ಕಳ್ಳ ಸಾಗಾಣಿಕೆಯ ವ್ಯವಹಾರ ನಿಯಂತ್ರಿಸಲು ೧೯೯೨ರಲ್ಲಿ, ಬಂಗಾರದ ಮೇಲಿನ ನಿಯಂತ್ರಣ ತೆಗೆಯಲಾಯಿತು. ನಂತರ ಡಾ। ಮನ್‌ಮೋಹನ್ ಸಿಂಗರ ಆರ್ಥಿಕ ಉದಾರಿಕರಣದಿಂದಾಗಿ ಅನಿವಾಸಿ ಭಾರತೀಯರಿಗೆ ವಿದೇಶಗಳಿಂದ ಬಂಗಾರ ತರಲು ಅವಕಾಶ ಮಾಡಿಕೊಡಲಾಯಿತು. ಹೀಗಾಗಿ ದೇಶಾದ್ಯಂತ ಬಂಗಾರಕ್ಕೆ ಭಾರಿ ಬೇಡಿಕೆ ಹೆಚ್ಚಿತು. ಅದು ಈ ಕೆಳಗಿನಂತೆ ಇದೆ.

### ಭಾರತದಲ್ಲಿ ಬಂಗಾರದ ಬೇಡಿಕೆ

| ವರ್ಷಗಳು | ಬಂಗಾರದ ಬೇಡಿಕೆ |
|---|---|
| ೧೯೯೨ | ೪೫೪ ಟನ್ನುಗಳು |
| ೧೯೯೩ | ೪೦೫ ಟನ್ನುಗಳು |
| ೧೯೯೪ | ೪೧೫ ಟನ್ನುಗಳು |
| ೧೯೯೫ | ೪೭೭ ಟನ್ನುಗಳು |
| ೧೯೯೬ | ೫೦೭ ಟನ್ನುಗಳು |
| ೧೯೯೭ (ಅಂದಾಜು) | ೫೫೦ ಟನ್ನುಗಳು |

ಈ ರೀತಿ ಹೆಚ್ಚುತ್ತಿರುವ ಬೇಡಿಕೆಗೆ ಮುಖ್ಯವಾಗಿ ೪ ಕಾರಣಗಳನ್ನು ಸೂಚಿಸಬಹುದು.

೧. ಬಂಗಾರದ ಒಡವೆಗಳನ್ನು ಹೊಂದುವ ಮಹದಾಸೆ

೨. ಬಂಗಾರದ ಆಕರ್ಷಕ ಹಾಗೂ ಕುಶಲ ಒಡವೆಗಳನ್ನು ತಯಾರಿಸಿ ರಫ್ತು ಮಾಡಲು.

೩. ಉಳಿತಾಯದ ಹಣವನ್ನು ಬಂಗಾರದ ರೂಪದಲ್ಲಿ ಇಡಲು.

೪. ಸಾಮಾಜಿಕ ಸಂಪ್ರದಾಯಗಳನ್ನು ಅನುಸರಿಸಲು.

ಹೀಗಾಗಿ ಭಾರತದಲ್ಲಿ ಈ ಹಳದಿ ಲೋಹಕ್ಕೆ ಭಾರೀ ಬೇಡಿಕೆ ಇದೆ.

ಈಗಿನ ಸಂಯುಕ್ತ ರಂಗ ಸರಕಾರವು ಅಕ್ಟೋಬರ್ ೧೬, ೧೯೯೭ರಂದು ಬಂಗಾರದ ಆಮದು ನೀತಿಯಲ್ಲಿ ಮತ್ತಷ್ಟು ಉದಾರೀಕರಣವನ್ನು ಪ್ರಕಟಿಸಿದ ಪರಿಣಾಮವಾಗಿ ಅನಿವಾಸಿ ಭಾರತೀಯರು ವಿದೇಶಗಳಿಂದ ಬರುವಾಗ ಹತ್ತು ಕೇಜಿವರೆಗೆ ಬಂಗಾರವನ್ನು ತರಬಹುದಾಗಿದೆ. ಹೀಗೆ ತರುವ ಪ್ರತಿ ೧೦ ಗ್ರಾಂ ಬಂಗಾರಕ್ಕೆ ರೂ. ೨೨೦ ಆಮದು ಶುಲ್ಕವನ್ನು ಕೊಡಬೇಕಾಗುತ್ತದೆ. ಸರಕಾರ ತನ್ನ ಕಸ್ಟಮ್ ತೆರಿಗೆಯ ಆದಾಯವನ್ನು ಅಧಿಕಗೊಳಿಸುವುದರ ಜೊತೆಗೆ ಬಂಗಾರದ ಕಳ್ಳ ಸಾಗಾಣಿಕೆಯನ್ನು ಸಾಕಷ್ಟು ನಿಯಂತ್ರಿಸಿದೆ.

### ಬಂಗಾರದ ಬೆಲೆಯಲ್ಲಿ ಇಳಿಕೆ

| ಬಂಗಾರದ ವಿಧ | ಪ್ರಮಾಣ | ಅಕ್ಟೋಬರ್ ೧೯೯೬ | ಅಕ್ಟೋಬರ್ ೧೯೯೭ |
|---|---|---|---|
| ಅ. ಸ್ಟ್ಯಾಂಡರ್ಡ್ ಬಂಗಾರ | ೧೦ ಗ್ರಾಂ | ರೂ. ೫,೧೫೦ | ರೂ. ೪,೨೭೦ |
| ಆ. ೨೨ ಕ್ಯಾರೆಟ್ ಬಂಗಾರ | ೧೦ ಗ್ರಾಂ | ರೂ. ೪,೭೬೫ | ರೂ. ೩,೯೫೦ |
| ಇ ಬಂಗಾರದ ಬಿಸ್ಕಿಟ್ | ೧೦ ತೊಲಾ | ರೂ. ೬೦,೨೫೦ | ರೂ. ೫೦,೦೦೦ |

ಈ ಉದಾರೀಕರಣದ ನೀತಿಗೆ ಪ್ರೋತ್ಸಾಹಿಸಲು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬಂಗಾರದ ಪೂರೈಕೆ ಅಧಿಕವಾಗಲು ಕೆಲವು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಕೇಂದ್ರ ಬ್ಯಾಂಕುಗಳು ತಮ್ಮಲ್ಲಿಯ ಹೆಚ್ಚಿನ ಬಂಗಾರವನ್ನು ಮಾರಾಟ ಮಾಡುತ್ತಿರುವುದು ಪ್ರಮುಖ ಕಾರಣವಾಗಿದೆ. ಪ್ರಾರಂಭದಲ್ಲಿ ಹಾಲಂಡ್, ಆಸ್ಟ್ರೇಲಿಯಾದ ಕೇಂದ್ರ ಬ್ಯಾಂಕುಗಳು ಬಂಗಾರವನ್ನು ಮಾರಾಟ ಮಾಡಿದರೆ, ಈ ದಿಸೆಯಲ್ಲಿ ಜರ್ಮನಿ ಸಿದ್ಧತೆ ನಡೆಸಿದೆ. ಇದರ ಜೊತೆಗೆ ಸ್ವಿಸ್ ನ್ಯಾಶನಲ್ ಬ್ಯಾಂಕ್ ೧,೪೦೦ ಟನ್ನು ಬಂಗಾರವನ್ನು ಮಾರಾಟ ಮಾಡಲು ನಿರ್ಧರಿಸಿರುವುದರಿಂದ ಲಂಡನ್, ಹಾಂಕಾಂಗ್ ಮಾರುಕಟ್ಟೆಗಳ ಜೊತೆಗೆ ಮುಂಬೈ ಮಾರುಕಟ್ಟೆಯಲ್ಲೂ ಬಂಗಾರದ ಬೆಲೆಯ ಭಾರಿ ಕುಸಿತ ಮತ್ತೆ ಪ್ರಾರಂಭವಾಗಿದೆ. ಕಳೆದ ವರ್ಷಕ್ಕೆ ಹೋಲಿಸಿದರೆ ಬಂಗಾರದ ಬೆಲೆಯಲ್ಲಿ ಸಾಕಷ್ಟು ಕುಸಿತವಾಗಿರುವುದು ಕಂಡುಬರುತ್ತದೆ.

ಲಂಡನ್ ಮಾರುಕಟ್ಟೆಯಲ್ಲಿ ಅಕ್ಟೋಬರ್ ೨೩, ೧೯೯೭ರಲ್ಲಿ ಪ್ರತಿ ಒಂದು ಔನ್ಸ್ ಬಂಗಾರಕ್ಕೆ $ ೩೨೪.೩೦ ಅಮೇರಿಕನ್ ಡಾಲರುಗಳಷ್ಟು ಇದ್ದದ್ದು ಮರುದಿನ ಆದರ ಬೆಲೆ $ ೩೦೮ ಡಾಲರ್‌ಗಳಿಗೆ ಕುಸಿದಿತ್ತು. ಈ ರೀತಿಯ ಬೆಲೆ ಕಳೆದ ೧೨ ವರ್ಷಗಳ ಹಿಂದೆ ಸಂಭವಿಸಿತ್ತೆಂದು ಕಂಡುಬಂದಿದೆ. ಭಾರತದಲ್ಲೂ ಸಹ ಅಕ್ಟೋಬರದಲ್ಲಿ ಸ್ಟ್ಯಾಂಡರ್ಡ್ ಬಂಗಾರ ಪ್ರತಿ ೧೦ ಗ್ರಾಂಗೆ ಇರುವ ಬೆಲೆ ರೂ. ೪,೨೭೦ ನಾಲ್ಕು ವರ್ಷಗಳ ಹಿಂದೆ ೧೯೯೩ ಎಪ್ರಿಲ್ ೧೯ರಂದು ಇದ್ದ ಬೆಲೆಗೆ ಹೋಲುತ್ತದೆ.

ಬಂಗಾರದ ಬೆಲೆಯ ಇಳಿಮುಖ ಪ್ರವೃತ್ತಿಯು ಇನ್ನೂ ಮುಂದುವರೆಯುವ ಸಾಧ್ಯತೆಗಳಿವೆ. ಅದು ಪ್ರತಿ ೧೦ ಗ್ರಾಂಗೆ ರೂ. ೩,೬೦೦ ತಲುಪುವ ಲಕ್ಷಣಗಳಿವೆ. ಆದರೆ ತಜ್ಞರ ಪ್ರಕಾರ ಪ್ರಚಲಿತ ಬಂಗಾರದ ಬೆಲೆಯು ಇಳಿಮುಖ ಪ್ರವೃತ್ತಿ ತಾತ್ಪೂರ್ತಿಕವಾದದ್ದು ಎಂದು ಅಭಿಪ್ರಾಯಪಟ್ಟಿದ್ದಾರೆ. ಕಾರಣವೇನೆಂದರೆ, ಮಾರುಕಟ್ಟೆಯಲ್ಲಿಯ ಪೂರೈಕೆ ಹಾಗೂ ಬೇಡಿಕೆಗಳಿಂದ ಈ ರೀತಿಯ ಬೆಲೆಯಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ. ವಾಸ್ತವಿಕವಾಗಿ ಈ ಬೆಲೆಯು (೧೦ ಗ್ರಾಂಗೆ ರೂ. ೩,೬೦೦) ಬಂಗಾರದ ಉತ್ಪಾದನಾ ವೆಚ್ಚಕ್ಕಿಂತ ಕಡಿಮೆ ಇರುವುದು ಆಶ್ಚರ್ಯಕರವಾದ ಸಂಗತಿ. ಇಂತಹ ಸಂದರ್ಭಗಳಲ್ಲಿ ಪ್ರಜ್ಞಾವಂತ ನಾಗರಿಕರು ತಮ್ಮ ಪ್ರಜ್ಞೆಗೆ ಅನುಗುಣವಾಗಿ ಬಂಗಾರ ಕೊಳ್ಳುವ ಒಳ್ಳೆಯ ಅವಕಾಶಗಳು ಸದ್ಯ ಹಾಗೂ ಭವಿಷ್ಯದ ಕೆಲವೇ ದಿನಗಳಲ್ಲಿ ಕಾಣಬಹುದಾಗಿದೆ.

○ **ಶಿವಯೋಗಿ ಕಬ್ಬಿಣಕಂತಿಮಠ**
ಹಾವೇರಿ



## ನನ್ನೊಳಗಿನ ನಾನು

(ಕವನ ಸಂಕಲನ)
ಲೇ : **ಸಿದ್ದರಾಮ ಹಿರೇಮಠ**
ಪ್ರ : ಸಂಕ್ರಮಣ ಪ್ರಕಾಶನ, ಧಾರವಾಡ -೧
ಮುದ್ರಣ : ೧೯೯೬, ಪುಟ : ೬೪, ಬೆಲೆ : ರೂ. ೨೦/-

**ಈ** ಸಂಕಲನದ ಮಿತ್ರ ಸಿದ್ದರಾಮ ಹಿರೇಮಠ ಸಾಹಿತ್ತಿಕವಾಗಿ ನಿರುಪದ್ರವಿ ಅಂತ ನನಗೆ ಚೆನ್ನಾಗಿ ಗೊತ್ತು. ಇವರೂರಿನವರೇ ಆದ ಅಲ್ಲಮಪ್ರಭುವಿನಂತೆ, ಅಥವಾ ಉತ್ತರ ಕರ್ನಾಟಕದ ಅನೇಕ ಬದಲಾವಣೆಗೆ ತುಡಿಯುವ ಲೇಖಕರಂತೆ ಇವರಲ್ಲ. ಇವರು ತಮ್ಮಷ್ಟಕ್ಕೆ ತಾವು ಸ್ಮಾರ್ಟಾಗಿರಲಿಕ್ಕೆ ಹೇಗೆ ಪ್ರಯತ್ನಿಸಿದಾರೋ ಹಾಗೆಯೇ ಕವಿತೆಯೂ ಸ್ಮಾರ್ಟಾಗಿರಬೇಕೆಂದು ಪ್ರಯತ್ನಿಸಿರುವುದನ್ನು ಇಲ್ಲಿ ನೋಡಬಹುದು.

**- ಕುಂ. ವೀರಭದ್ರಪ್ಪ**

## ಅಂಬೇಡ್ಕರ್ ಮೇಲೆ ಆಕ್ರಮಣ

(ಪ್ರತಿಕ್ರಿಯೆಗಳು)
ಲೇ : **ಡಾ. ಕಾಂಚ ಐಲಯ್ಯ, ಗೋವಿಂದ ತಳವಲ್ಕರ್, ಮಂಗ್ಳೂರ ವಿಜಯ, ಕೆ. ವೀರಮಣಿ**
ಪ್ರ: ಸಂಬುದ್ಧ ಪ್ರಕಾಶನ, ವಿದ್ಯಾ ಟ್ಯುಟೋರಿಯಲ್ ಪಕ್ಕ, ವಿಶ್ವನಾಥ ನಾಗನಹಳ್ಳಿ, ಬೆಂಗಳೂರು - ೫೬೦ ೦೩೨
ಮುದ್ರಣ : ೧೯೯೭ ಪುಟ: ೨೪ ಬೆಲೆ : ರೂ.೫

**ಮಂ**ಡಲ್ ವರದಿ ಜಾರಿಯನ್ನು ವಿರೋಧಿಸಿ ಸಮೂಹಮಾಧ್ಯಮಗಳ ಮುಖಾಂತರ, ಸಮಾಜದಲ್ಲಿ ಸಮೂಹ ಸನ್ನಿಯನ್ನು ಸೃಷ್ಟಿಸುವಲ್ಲಿ, ಪ್ರಧಾನಪಾತ್ರವನ್ನು ವಹಿಸಿದ ಅರುಣಶೌರಿ ಎಂಬ ಲೇಖಕ, ಈಗ ಭಾರತರತ್ನ, ಬಾಬಾಸಾಹೇಬ್ ಡಾ. ಬಿ.ಆರ್. ಅಂಬೇಡ್ಕರ್ ವ್ಯಕ್ತಿತ್ವದ ಮೇಲೆ ಆಕ್ರಮಣ ಮಾಡುವ ಮೂಲಕ ತಮ್ಮ ಆಲೋಚನಾ ಧಾಟಿಯ ಅಸಲಿ ಬಣ್ಣವೇನು ಎಂಬುದನ್ನು ಬಯಲುಗೊಳಿಸಿದ್ದಾರೆ.

ಶೌರಿ ತಮ್ಮ ಪುಸ್ತಕ ''ವರ್‌ಷಿಪಿಂಗ್ ಫಾಲ್ಸ್ ಗಾಡ್ಸ್'' ರಚಿಸಲು ಭಾರಿ ಸಂಶೋಧನೆ ಕೈಗೊಂಡು ಕಳೆದ ಸುಮಾರು ಆರು ದಶಕಗಳ ಪತ್ರ ವ್ಯವಹಾರ, ಭಾಷಣಗಳು, ಚರ್ಚೆಗಳು, ಸಭೆಗಳ ನಡವಳಿಕೆಗಳು ಎಲ್ಲವನ್ನೂ ಪರಿಶೀಲಿಸಿ ಡಾ. ಅಂಬೇಡ್ಕರ್ ವ್ಯಕ್ತಿತ್ವದ ತಥಾಕಥಿತ ಹುಳುಕುಗಳನ್ನು ಬಹಿರಂಗಪಡಿಸಿರುವುದಾಗಿ ಅವರು ಸಾರಿಕೊಂಡಿದ್ದಾರೆ. ಆದರೆ ವಾಸ್ತವವೆಂದರೆ, ಶೌರಿ ನಡೆಸಿರುವ ಅಧ್ಯಯನದ ಧ್ಯೇಯವೇ ಅನೀತಿಯದ್ದಾಗಿದೆ. ಹಾಗಾಗಿ ಅವರು ಕಾಮಾಲೆ ಕಣ್ಣಳಿಂದಲೇ ಅಧ್ಯಯನ ನಡೆಸಿದ್ದಾರೆ. ಅವರ ಹೃದಯ ಕೊಳಕಾಗಿರುವುದನ್ನು, ಮನಸ್ಸು ರೋಗಿಷ್ಟವಾಗಿರುವುದನ್ನು ಅವರ ಕೃತಿ ಸಾಬೀತುಪಡಿಸುತ್ತದೆ.

ಡಾ. ಅಂಬೇಡ್ಕರ್ ಚಿಂತನೆ ಮತ್ತು ಬದುಕು ಕುರಿತಂತೆ ವಿಮರ್ಶೆ - ಟೀಕೆಗಳನ್ನು ಯಾರೂ ಪ್ರಕಟಿಸಬಹುದಾಗಿದೆ. ಈ ವಿಮರ್ಶೆ - ಟೀಕೆಗಳು ಪೂರ್ವಾಪರ ಚಿಂತನೆ ಸಮಗ್ರ ಅಧ್ಯಯನಗಳನ್ನು ಆಧಾರವಾಗಿ ಹೊಂದಿರಬೇಕಲ್ಲದೇ ಹೊರತು ಪೂರ್ವಾಗ್ರಹ - ಪಕ್ಷಪಾತ ದೃಷ್ಟಿ ಹೊಂದಿರಬಾರದು ಅಷ್ಟೇ. ಆದರೆ ಸಂಪೂರ್ಣವಾಗಿ ಪಕ್ಷಪಾತ ದೃಷ್ಟಿಯಿಂದ ಪ್ರಕಟಿಸಿದ. ಕೃತಿ ಮೂಲಕ ಶೌರಿ, ಚರಿತ್ರೆಗೆ ತೀವ್ರ ಅಪಚಾರ ಎಸಗಿದ್ದಾರೆ.

ಡಾ. ಅಂಬೇಡ್ಕರ್ ಕುರಿತಂತೆ, ಶೌರಿ ಪುಸ್ತಕವು ಹಲವರಲ್ಲಿ ಮೂಡಿಸಿರಬಹುದಾದ ಗೊಂದಲಗಳು, ಈ ಕಿರುಪುಸ್ತಕದ ಬರಹಗಳಿಂದ ಕೊಂಚವಾದರೂ ದೂರವಾದರೆ, ಇದೇ ನೆಪವಾಗಿಯಾದರೂ, ನಮ್ಮ ಯುವಜನ ಡಾ. ಅಂಬೇಡ್ಕರ್ ಕುರಿತಂತೆ ಚರಿತ್ರೆಯನ್ನು ಅಭ್ಯಾಸ ಮಾಡಲು ಮುಂದಾದರೆ ಈ ಕಿರುಪುಸ್ತಕ ಹೊರತಂದಿದ್ದು ಸಾರ್ಥಕವಾಗುತ್ತದೆ.

**- ಪ್ರಕಾಶಕರು**

## ಚಾತುರ್ವರ್ಣ ಧರ್ಮದರ್ಶನ

(ಪ್ರಬಂಧಗಳ ಸಂಕಲನ)
ಲೇ: **ಕುಮಾರ ಕಕ್ಕಯ್ಯ ಪೋಳ**
ಪ್ರ: ಲೋಹಿಯಾ ಪ್ರಕಾಶನ, ಬಳ್ಳಾರಿ.
ಮುದ್ರಣ : ೧೯೯೭, ಪುಟ : ೧೯೨ ಬೆಲೆ : ರೂ.೭೫/-

## ಮುನ್ನುಡಿಯಿಂದ

ಇಲ್ಲಿಯ ವಿಚಾರಗಳು ''ವೈಚಾರಿಕ ವೈಜ್ಞಾನಿಕ ಹಾಗೂ ವಾಸ್ತವಿಕವಾಗಿವೆ. ಒಂದು ವ್ಯವಸ್ಥೆಯು ಶೋಷಣೆಯ ಕೂಪಕ್ಕೆ ತಳ್ಳಲ್ಪಟ್ಟು ಎಂತಹ ಯಾತನೆಯನ್ನು ಅನುಭವಿಸುತ್ತದೆ ಎಂಬುದನ್ನು ಇಲ್ಲಿ ತೆರೆದು ತೋರಲಾಗಿದೆ. ಈ ಕೃತಿಯನ್ನು ಕೊಟ್ಟವರು ಶರಣರಾದ ಕುಮಾರ ಕಕ್ಕಯ್ಯ ಪೋಳ ಇವರು. ಈ ಕೃತಿಯ ರಚನೆಗೆ ಬೇಕಾದ ವಿಚಾರವನ್ನು ಸಂಗ್ರಹಿಸಿ, ವಿವೇಚಿಸಲು ಕೃತಿಕರ್ತರು ಬಹಳ ಪರಿಶ್ರಮಿಸಿದ್ದಾರೆ. ಇಲ್ಲಿಯ ವಿಚಾರಗಳು ಅಷ್ಟೇ ತಾರ್ಕಿಕವಾಗಿವೆ. ಇಡೀ ಸಮಾಜದ ವ್ಯವಸ್ಥೆಯನ್ನು ಈ ಪುಸ್ತಕ ದಿಗ್ದರ್ಶಿಸುತ್ತದೆ. ಈ ಪುಸ್ತಕವನ್ನು ರಚಿಸಿದವರು ಈಗಿಲ್ಲ; ಆದರೆ ಅವರ ವಿಚಾರಗಳನ್ನು ಹೊತ್ತ ಈ ಪುಸ್ತಕ ಮಾತ್ರ ಇದೆ. ಸಾಹಿತಿಗೆ ಸಾವುಂಟು; ಸಾಹಿತ್ಯಕ್ಕೆ ಸಾವಿಲ್ಲ.

**- ಶ್ರೀ ಮುರುಘರಾಜೇಂದ್ರ ಸ್ವಾಮೀಜಿ**
**ಚಿತ್ರದುರ್ಗ**

## ತಾಯಿ ನೆಲದಲ್ಲಿ

(ಕವನ ಸಂಕಲನ)
ಲೇ: **ನಿಂಗಪ್ಪ ಮುದೇನೂರು**
ಪ್ರ: ಸಮತಾ ಪ್ರಕಾಶನ, ಹೊಸಪೇಟೆ.
ಮುದ್ರಣ : ೧೯೯೭, ಪುಟ : ೬೨ ಬೆಲೆ : ರೂ.೩೦/-

**ಮು**ಟ್ಟಿದರೆ ಮುದುಡಿ ಹೋಗುವಷ್ಟು ಕೋಮಲವಾದ ಭಾವನೆಗಳನ್ನು ತುಂಬಿಕೊಂಡಿರುವ ಈ ಕವಿ, ಲೋಕವನ್ನು ಹೃದಯದ ಮೂಲಕವೇ ನೋಡಬಯಸುವವರು. ಹೀಗಾಗಿ ಭಾವುಕತೆಯ ಮುಸುಕು ಈ ಕವಿತೆ

ಗಳನ್ನೆಲ್ಲ ಆವರಿಸಿಕೊಂಡಿದೆ. ಭಾವುಕತೆಯ ಗುಣವೆಂದರೆ ತೀವ್ರತೆ. ಈ ತೀವ್ರತೆ, ಕೆಲವೊಮ್ಮೆ ಈ ಲೋಕದ ಕಾಠಿಣ್ಯವನ್ನು ತದಕಿ ನೋಡಲು ಬೇಕಾದ ವೈಚಾರಿಕ ಸಂಕೀರ್ಣತೆಯನ್ನೂ ಬಿಟ್ಟುಕೊಡಬಲ್ಲದು. ಬದುಕನ್ನು ಉತ್ಕಟವಾಗಿ ಪ್ರೀತಿಸುವ ಈ ಕವಿ ತುಂಬ ಆರ್ದ್ರವಾಗಿ ಬರೆಯುತ್ತಾರೆ. ತನಗೆ ಬೇಕಾದ ಚೈತನ್ಯ ಪಡೆಯಲು ಅವ್ವನ ತಾಯ್ತನಕ್ಕೆ ಧಾವಿಸುವ ಕವನಗಳು ಅವ್ವನ ಕಥನವಾಗುತ್ತವೆ. ತನ್ನ ಕಲ್ಪನೆಯ ಆದರ್ಶ ಲೋಕಕ್ಕೆ ಘಾತಕೊಡುವ ಸಂಗತಿಗಳು ಬಂದಾಗ ಹೊಟ್ಟೆಯೊಳಗಿನ ಸಂಕಟವನ್ನೆಲ್ಲ ಹೊರಚೆಲ್ಲುವಂತೆ ಬರೆಯುವಾಗ ಕವನಗಳು ತಲ್ಲಣದ ಕಥನವಾಗುತ್ತವೆ. ಇವುಗಳ ಆಪ್ತತೆ ಹಾಗೂ ಮಾನವೀಯ ಮಿಡಿತಗಳು ಓದುಗರ ಒಳಗನ್ನು ತಟ್ಟುವಷ್ಟು ಬೆಚ್ಚಗಿವೆ.

– ರಹಮತ್ ತರೀಕೆರೆ

## ಮನೆಯ ಮಾಣಿಕ್ಯ ಮಕ್ಕಳು

(ಸೂಕ್ತಿ ಸಂಗ್ರಹ)

ಲೇ/ಪ್ರ : **ಟಿ.ವಿ. ವೆಂಕಟರಮಣಯ್ಯ**, ಬೆಂಗಳೂರು

ಮುದ್ರಣ : ೧೯೯೭, ಪುಟ : ೫೨ ಬೆಲೆ : ರೂ.೨೦/-

ಹೆಣ್ಣು ಆಗೋದಕ್ಕಿಂತ ಮಣ್ಣು
ಆಗೋದು ಲೇಸು
ಮಣ್ಣಿನ ಮೇಲೆ ಮರವಾಗಿ ಇದ್ದರೆ
ದಾರಿಕಾರರಿಗೆ ನೆರಳಾದೆ

ಬಂಜೆ ಹೆಣ್ಣು ಮಗಳ ದೀನಾವಸ್ಥೆಯನ್ನು ಚಿತ್ರಿಸುವ ಈ ಜನಪದ ಗೀತೆ ಮಕ್ಕಳಿಲ್ಲದೆ ಯಾವ ಹೆಣ್ಣಿನ ಜನ್ಮವೂ ಸಾರ್ಥಕವಾಗುವುದಿಲ್ಲ ಎಂದು ಧ್ವನಿಸುತ್ತದೆ. ದಾಂಪತ್ಯ ಜೀವನದ ಗುರಿ ಕೇವಲ ಭೋಗ ವಿಲಾಸದ ಬಾಳ್ವೆಗೆ ಮೀಸಲಾಗದೆ ಸಂತಾನ ಪ್ರಾಪ್ತಿಯು ಬಹಳ ಮುಖ್ಯವೆಂಬುದು ಭಾರತೀಯ ಮನೋಧರ್ಮ.

ಪ್ರಸ್ತುತ ಸಂಗ್ರಹದಲ್ಲಿ ಮಕ್ಕಳ ಕುರಿತು ವಿವಿಧ ಚಿಂತಕರ ಚಿಂತನೆಗಳಲ್ಲದೆ, ಜನಪದ ಗೀತೆಗಳು, ಗಾದೆಗಳು ಹಾಗೂ ಜನಪದ ನಂಬಿಕೆಗಳನ್ನು ಅಳವಡಿಸಲಾಗಿದೆ.

– ಟಿ.ವಿ. ವೆಂಕಟರಮಣಯ್ಯ

## ಹುಳಿಮಾವಿನ ಮರ

(ಒಂದು ಆತ್ಮಕಥನ)

ಲೇ : **ಪಿ. ಲಂಕೇಶ್**

ಪ್ರ: ಪತ್ರಿಕೆ ಪ್ರಕಾಶನ, ಬಸವನಗುಡಿ, ಬೆಂಗಳೂರು - ೫೬೦ ೦೦೪. ಮುದ್ರಣ : ೧೯೯೭, ಪುಟ : ೩೫೨ ಬೆಲೆ : ರೂ.೧೦೦/-

ನಾನು ನನ್ನ ಐವತ್ತೆಂಟನೇ ವರ್ಷದವರೆಗೆ ಆತ್ಮಚರಿತ್ರೆಯನ್ನು ಬರೆಯುವ ಯೋಚನೆಯಲ್ಲಿಯೇ ಇರಲಿಲ್ಲ. ಐವತ್ತೆಂಟು ದಾಟುತ್ತಿದ್ದಂತೆ ಇದ್ದಕ್ಕಿದ್ದಂತೆ ಆರೋಗ್ಯ ಕೆಟ್ಟು Stock-verification ರೀತಿಯ ಚಿಂತನೆ ಶುರುವಾಯಿತು. ಈ ಸಾಮಾನ್ಯ ಬದುಕಿನಲ್ಲೂ ಒಂದು ರೀತಿಯ ಲಯಬದ್ಧತೆ ಇರುವಂತೆ ಕಂಡಿತು. ಅದು ಅಸ್ಪಷ್ಟವಾಗಿಯೇ ಇತ್ತು. ಬರೆಯತೊಡಗಿದರೆ ನೆನಪು ಮರುಕಳಿಸಬಹುದು ಎಂದು ಅರಿವಿನ ಮೊದಲ ರೂಹುಗಳನ್ನು ಕಾಗದದ ಮೇಲೆ ಗುರುತಿಸುತ್ತಾ ಹೋದೆ. ನೆನಪುಗಳೇ ವಿಚಿತ್ರ. ನಾನು ಚಿಕ್ಕಂದಿನಲ್ಲಿ ಕಂಡ ಯಾವುದೋ ಹೆಣ್ಣು ಮತ್ತೆಮತ್ತೆ ನೆನಪಾಗಿ ಅವಳ ಆಲಿಂಗನ ಇವತ್ತಿಗೂ ಹೃದಯವನ್ನು ಬೆಚ್ಚಗೆ ಮಾಡುತ್ತದೆ; ಅವಳ ಸೆರಗಿನ ಕಮ್ಮನೆಯ ವಾಸನೆ ಮೈ ನವಿರೇಳಿಸುತ್ತದೆ. ಆಕೆ ನನ್ನ ಅವ್ವನೋ, ಅಕ್ಕನೋ, ನೆರೆಮನೆಯವಳೋ ಇರಬಹುದು. ಆದರೆ ಇದಕ್ಕಿಂತ ಸೋಜಿಗದ್ದು ನಮ್ಮ ಗದ್ದೆಯ ಹತ್ತಿರ ಇದ್ದ ಹುಳಿಮಾವಿನ ಮರ. ಪುಟ್ಟ ಹುಡುಗನಿಗೆ ಹೂವು, ಕಾಯಿ, ಹಣ್ಣು ಇವುಗಳಿಂದ ಖುಷಿ ಕೊಡುತ್ತಿದ್ದುದು ಮಾತ್ರವಲ್ಲದೆ ತನ್ನ ದೈತ್ಯಕಾರದಿಂದ ಭಯ ಹುಟ್ಟಿಸುತ್ತಿದ್ದ, ತನ್ನ ನೂರಾರು ವರ್ಷಗಳ ಜೀವಿತದಿಂದ ಅಮರತ್ವಕ್ಕೆ ಸಂಕೇತದಂತಿದ್ದ ಈ ಹುಳಿಮಾವಿನ ಮರ ನಾನು ಕಾಲೇಜಿನಲ್ಲಿ ಓದುತ್ತಿದ್ದ ದಿನಗಳಲ್ಲಿ ಬಿದ್ದುಹೋಯಿತು. ನಾನು ಪಟ್ಟಣದಿಂದ ಹೋಗಿ ಅದನ್ನು ನೋಡುವಷ್ಟರಲ್ಲಿ ಕೊಂಬೆಗಳೆಲ್ಲ ಹೊರಟುಹೋಗಿ ಬೊಡ್ಡೆ ಮಾತ್ರ ಉಳಿದಿತ್ತು. ಆದರೆ ನನ್ನ ಕಾಲೇಜು ದಿನಗಳು ಮುಗಿದು ಈ ಬದುಕು ಅನಿರೀಕ್ಷಿತ ಪಾತ್ರಗಳಲ್ಲಿ ಹರಿಯುತ್ತಿದ್ದಾಗ ಈ ಮರ ನನ್ನ ಮನಸ್ಸಿನಲ್ಲಿ ಬೆಳೆಯುತ್ತಾ ಹೋಯಿತು. ಹೀಗಿದ್ದಾಗ ಒಂದು ದಿನ ಮಾವಿನ ಮರ ಕುರಿತ ಬಾಗಲೋಡಿ ದೇವರಾಯರ 'ಅಜ್ಜ ನೆಟ್ಟ ಮರ' ಕತೆಯನ್ನು ಓದಿ ವಿಸ್ಮಯನಾದೆ. ಹೀಗಾಗಿ ಈ ಪುಸ್ತಕಕ್ಕೆ 'ಹುಳಿಮಾವಿನ ಮರ' ಎಂದೇ ಹೆಸರಿಟ್ಟೆ.

– ಪಿ. ಲಂಕೇಶ್

## ಮಹಾತ್ಮಾ ಗಾಂಧಿ

(ಮನುಕುಲ ಬೆಳಗಿದ ಮಹನೀಯರು)

ಲೇ: **ಮೈಕೆಲ್ ನಿಕೋಲ್ಸನ್**

ಕನ್ನಡಕ್ಕೆ : **ಚಂದ್ರಕಾಂತ ವಡ್ಡು**

ಪ್ರ : ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ಎಂ.ಜಿ. ರಸ್ತೆ, ಬೆಂಗಳೂರು ಮುದ್ರಣ : ೧೯೯೭, ಪುಟ : ೬೪ ಬೆಲೆ : ರೂ.೪೦/-

ಮಹಾತ್ಮ ಗಾಂಧೀಜಿ ಲೌಕಿಕದಲ್ಲಿ ಕ್ರಿಯಾಶೀಲರಾಗಿದ್ದ ಸಂತರಾಗಿದ್ದರು. ಧಾರ್ಮಿಕ ಪ್ರವೃತ್ತಿಯುಳ್ಳ ಅವರು ಇತರ ನಂಬಿಕೆಗಳ ಬಗ್ಗೆ ಸಮಾನ ಗೌರವ ಬೋಧಿಸಿದರು. ಹೊಸ ಸಂದೇಶಗಳನ್ನೇನೂ ನೀಡಬಯಸದಿದ್ದ ಅವರು ತಾವು ಹೇಳಿದ್ದೆಲ್ಲಾ ಪರ್ವತಗಳಷ್ಟು ಪುರಾತನವೆಂದರು. ತಾವು ಮಾಡಿದ್ದನ್ನು ಇತರರೂ ಮಾಡಬಹುದೆಂದು ಅವರ ಆಗ್ರಹ. ತಮ್ಮ ಹಾದಿ ಸರಿಯೆಂದು ಮನವರಿಕೆಯಾದರೆ ಮಾತ್ರ ಜನ ತಮ್ಮನ್ನು ಅನುಸರಿಸಬೇಕೆಂದರು. ಸ್ವಾತಂತ್ರ್ಯದ ತರುವಾಯ ಅವರು ಯಾವ ಅಧಿಕಾರ ಗದ್ದುಗೆಯನ್ನೂ ಏರಲಿಲ್ಲ. ಆಸ್ತಿ ಮಾಡಲಿಲ್ಲ. ಜನರಿಗೆ ನೀಡಿದ ಹಾಗೂ ಜನರಿಂದ ಪಡೆದ ಪ್ರೀತಿಯೇ ಅವರ ಸಂಪತ್ತು. ಅವರು ತುಂಬಾ ವಿನೋದಮಯಿಯಾಗಿದ್ದರು. ಒಂದು ಸಾಮ್ರಾಜ್ಯದೊಂದಿಗಿನ ಸೆಣಸಾಟದ ನಡುವೆಯೂ ಶ್ರೀಸಾಮಾನ್ಯರ ನೋವು-ನಲಿವು ಹಂಚಿಕೊಳ್ಳುವ ವ್ಯವಧಾನ ಅವರಿಗಿತ್ತು. ಸಾವಿನ ಅಂಜಿಕೆ ಅವರ ಬಳಿ ಸುಳಿಯಲಿಲ್ಲ. ಧರ್ಮಾಂಧನಿಂದ ಹತನಾದಾಗಲೂ ಅವರ ತುಟಿಗಳು ದೇವನಾಮ ಉಲಿದವು.

ಮಹಾತ್ಮಗಾಂಧಿಯವರು ಜಗತ್ತಿಗೆ ನೆರವಾದ ಬಗೆಯನ್ನರಿಯಲು ತರುಣ ಓದುಗರಿಗೆ ಈ ಪುಸ್ತಕ ಸಹಾಯಕವಾಗಲಿ.

– ದಿವಂಗತ ರಾಜೀವ್ ಗಾಂಧಿ





**ಎಸ್. ಹನುಮಂತ ಜೋಯ್ಸ**
63/3, ನವಜ್ಯೋತಿ ಕಟ್ಟಡ
ಜೋಸೆಫ್ ನಗರ, ಸಾಗರ - 577 401
ಶಿವಮೊಗ್ಗ ಜಿಲ್ಲೆ

ತನ್ಮಯತೆ



ನೆಲ-ಜಲ
ತುಷಾರ - ೯೭ರ
ಬೆಳ್ಳಿ ಸಂಭ್ರಮದ
ಫೋಟೋ ಸ್ಪರ್ಧೆಯಲ್ಲಿ
ದ್ವಿತೀಯ ಬಹುಮಾನ
ಪಡೆದ ಚಿತ್ರ



**ಸಾಗರದ**
**ಹನುಮಂತ ಜೋಯ್ಸರು**
**ವೃತ್ತಿಯಲ್ಲಿ ಶಿಕ್ಷಕರು ; ಈಗ**
**ನಿವೃತ್ತರು. ಪ್ರವೃತ್ತಿಯಿಂದ**
**ಛಾಯಾಚಿತ್ರಗ್ರಾಹಕರು ;**
**ಸಾಗರದಾಚೆಗೂ ಖ್ಯಾತರು.**
**ಅವರ ಕೆಲವು ಅಪರೂಪದ**
**ಚಿತ್ರಗಳನ್ನು ಕಲಾವಿದ**
**ಜಿ.ಎಂ. ಹೆಗಡೆಯವರು**
**ಒದಗಿಸಿದ್ದಾರೆ.**





ಕನಸಿಗೆಷ್ಟು
ಕಮಾನುಗಳು?



ಉರುಳಿಬಿದ್ದರೆ ಹೊಳಪು ಮಾಸೀತೇ?



# ಭಾರತಕ್ಕೆ ಭರ್ಜರಿ ಏರಿಕೆಯ ಕಾಲ!

**ಕೇಂದ್ರ ನೌಕರರ ಸಂಬಳ ಏರಿಕೆಗಳೊಡನೆ ರಾಜ್ಯ ನೌಕರರ ಸಂಬಳಗಳೂ ಏರಬಹುದು. ಅದೂ ನಿಜ! ತತ್ಪರಿಣಾಮವಾಗಿ ಕಾರ್ಪೊರೇಷನ್, ಮುನಸಿಪಲ್ ನೌಕರರ ಸಂಬಳಗಳೂ ಏರುತ್ತವೆ - ಅದಕ್ಕೆ ಸ್ಪರ್ಧಿಯಾಗಿ ಗಿಂಬಳ ರೇಟೂ ಏರುತ್ತವೆ!**

## ವಕ್ರಾಯುಧ

○ ಎನ್.ಕೆ. ಕುಲಕರ್ಣಿ
''ಪರಿಮಳ''
ರೇಲ್ವೆಗೂಡ್ಸ್‌ಶೆಡ್ ಬಳಿ, ಧಾರವಾಡ - ೮

**ಕೇ**ಳ್ತೀರಾ? ಇಂತಹ ಭರಭರಾಟೆಯ ಏರಿಕೆಯ ಕಾಲವನ್ನು ನಮ್ಮ ಭಾರತ ಹಿಂದೆ ನೋಡಿಲ್ಲ, ಮುಂದೆ ನೋಡಲಿಕ್ಕಿಲ್ಲ. ಹೌದು ಒಬ್ಬಿಬ್ಬರು ಮಹಾಜ್ಯೋತಿಷಿಗಳು ವರ್ಷ ಭವಿಷ್ಯದಲ್ಲಿ ಬರೆದುದನ್ನು ಓದಿದಂತೆಯೂ ನನಗೆ ನೆನಪು. ''ಇಂತಹ ಏರಿಕೆಯ ಕಾಲವನ್ನು, ಭಾರತೀಯರೆ ನೀವೇ ನಿಮ್ಮ ಕಾಲಕ್ಕೆ, ನಿಮ್ಮ ಕಾಲ ಮೇಲೇ ನಿಂತುಕೊಂಡು, ನಿಮ್ಮ ಕಣ್ಣಿನಿಂದಲೇ ಕಾಣುತ್ತೀರಿ'' ಎಂದು ಬರೆದಿದ್ದರು!

ಹೌದು, ಅದು ಈಗ ನಿಜ ಎನಿಸುತ್ತಿದೆ. ಈ ಜ್ಯೋತಿಷಿಗಳನ್ನು ನಾವು ನಂಬಲೇಬೇಕು. ನಂಬದಿದ್ದರೆ ಹೇಗೆ ಸ್ವಾಮಿ! ಇಲ್ಲದಿದ್ದರೆ ಹಿಂದೆ ಆಗಿ ಹೋದ ಮಹಾ ಮಹಾ ಪ್ರಧಾನ-ಮುಖ್ಯಮಂತ್ರಿಗಳು ಚಿರವಲ್ಲದಿದ್ದರೂ ಚರ ಸಿಂಹಾಸನಗಳನ್ನು ಅರ್ಥಾತ್ ಕುರ್ಚಿಗಳನ್ನು ಏರುತ್ತಿದ್ದರೆ? ಪಂ.ನೆಹರೂ ಅವರೊಬ್ಬರಿಗೆ ಮಾತ್ರ ಜ್ಯೋತಿಷಿಗಳಲ್ಲಿ ನಂಬುಗೆ ಇದ್ದಿರಲಿಲ್ಲವಂತೆ. ಆದರೆ ಅವರ ಮಗಳಿಗಿದ್ದದ್ದು ಸುಳ್ಳೆ? ಅಪ್ಪ ಹದಿನೆಂಟು ವರ್ಷ ಆಳಿದ್ದರೆ ಮಗಳು ಹದಿನಾಲ್ಕು ವರ್ಷ (ವನವಾಸವಲ್ಲ ಮತ್ತೆ-ಸಿಂಹಾಸನ) ಆಳಿದ್ದು ಜ್ಯೋತಿಷ್ಯ ಬಲದಿಂದಲೆ ಅಲ್ಲವೇ? ಶ್ರದ್ಧೆ ಬೇಕು ಸ್ವಾಮೀ ದೈವೀ ಶ್ರದ್ಧೆ ಬೇಕು, ಹೆಚ್ಚಾಗಿ ಜ್ಯೋತಿಷ್ಯ ಶ್ರದ್ಧೆಬೇಕು. ಜ್ಯೋತಿಷಿಗಳು ಪರಿಹಾರವನ್ನು ಸೂಚಿಸುತ್ತಾರೆ. ಆ ಪರಿಹಾರಾರ್ಥವಾಗಿ ಕೋಳಿ ಎಂದರೆ ಕೋಳಿಯ ಬಲಿ, ಕೋಣನೆಂದರೆ ಕೋಣನಬಲಿ, ಹೆಗ್ಗಣ (ಹಿರಿಯ ಗಣರಾಜ್ಯಕ್ಕೆ ಸರಿಯಾಗಿ)ವೆಂದರೆ ಹೆಗ್ಗಣ ಬಲಿ ಕೊಡಬೇಕು; ಕುರ್ಚಿಗಿಟ್ಟಿಸಬೇಕು. ಚಂಡೀ ಹೋಮವೆಂದು ಚಂಡೀ ಹೋಮ, ಮನೆಯಲ್ಲೇ (ಹೆಗ್) ಗಣಹೋಮ (home) ಇತ್ಯಾದಿಗಳನ್ನು ಆಚರಿಸಬೇಕಾಗುತ್ತದೆ.




ಒಂದು ಹರಿಕಥೆಯ ಅಡ್ಡಗತೆ ನೆನಪಾಗುತ್ತದೆ. ''ಈಗಿನ ಕಾಲ ಅಂದರ ಹ್ಯಾಂಗೇನದಲ್ಲಾ, ಕಾಯಿಪಲ್ಯಾ ತರಲಿಕ್ಕೆ ಅಂತ ಪೇಟೆಗೆ ಹೋದ ಯಜಮಾನ; ವಿಮಾ ಕಂತು ತುಂಬಲಿಕೆಂದು ಕಚೇರಿ ಮೆಟ್ಟಿಲು ಹತ್ತಿದ ಮಹಾನುಭಾವ ಏನಕೇನ ಆಕಸ್ಮಿಕಕ್ಕೆ ಬಲಿ ಆಗಿ ಯಮಲೋಕಕ್ಕೇ ಹೋದರ ಭಯ-ಅಲ್ಲಲ್ಲ ಅಚ್ಚರಿ-ಪಡಬೇಕಾಗಿಲ್ಲ''. ಎಂದು ಹರಿಕಥೆ ಕೇಳಿದ ಗೃಹಿಣಿ ಮನೆಗೆ ಬಂದಾಗ ಕಾಯಿಪಲ್ಯೆ ತರಲೆಂದು ಹೊರಗೆ ಹೊರಟ ಯಜಮಾನರನ್ನು ಕೇಳಿದಳಂತೆ - ''ರೀ, ಕಾಯಿಪಲ್ಯೆ ತರಲಿಕ್ಕೆ ಹೊರಟೀರಿ ಮತ್ತ ನಿಮ್ಮ ವಿಮಾ ಕಾಗದ ಪತ್ರ ಎಲ್ಲಿ ಅವೆ?'' ಅಂತ. ಗಂಡ ಇದೇನು ಗಂಡಾಂತರ ಬಂತಪಾ ಅಂತ ಗಾಬರಿಗೊಂಡು-''ಯಾಕ? ಹೀಗ್ಯಾಕ ಕೇಳ್ತಿ?'' ಎಂದಾಗ, ''ಹೌದ್ರಿ ಇತ್ತಿತ್ತ ಹರಿಕಥಿ ದಾಸರು ಹೇಳಿದರು - ''ಕಾಯಿಪಲ್ಯಾಕ್ಕ ಹೋದ ಮಗ ಮನೀಗೆ ಬರತಾನಿಲ್ಲೋ ಹೇಳಲಿಕ್ಕೆ ಬರೂದಿಲ್ಲ. ಅದಕ್ಕ ಮೊದಲ ನಿಮ್ಮ ವಿಮಾ ಪತ್ರ ಮತ್ತು ನಿಮ್ಮ ವರ್ಷದ ಜಾತಕಫಲಾ ಕೊಟ್ಟು ಹೋಗ್ರಿ'' ಎಂದಳಂತೆ!

ಅದಕ್ಕೇ ಹೇಳೋದೂ ಸ್ವಾಮಿ ಒಂದಿಷ್ಟು ಜ್ಯೋತಿಷ್ಯದಲ್ಲಿ, ಹರಿಕಥೆಗಳಲ್ಲಿ ಶ್ರದ್ಧಾಬೇಕು - ಅಂತ! ದಿಲ್ಲಿಯಿಂದ-ಹಳ್ಳಿಯವರೆಗೂ ಇಂದು

ಜಗತ್ತು ನಡೆಯುವುದೇ ಜ್ಯೋತಿಷ್ಯದ ಮೇಲೆ. ಆ ವರ್ಷ ಜ್ಯೋತಿಷ್ಯದ ಅನುಭವದಿಂದಲೇ ನಾನೀಗ ಹೇಳುತ್ತಿರುವುದು, ನಮ್ಮ ಭಾರತಕ್ಕೆ ಭರಾಟೆಯ ಏರಿಕೆಯ ಕಾಲ, ಇದೇ ವರ್ಷ ಭಾದ್ರಪದ ಸರ್ವಪಿತೃ ಅಮಾವಾಸ್ಯೆಯಿಂದ ಆರಂಭ ಎಂದು! ಇದಕ್ಕೆ ಆಧಾರ, ಉದಾಹರಣೆಗಳು ಬೇಕೆ?

ಮೊದಲಿಗೇ ಪೆಟ್ರೋಲ್ ದರ ಏರಿತು! ಇದು ಏರಿಕೆಯ ಮೊದಲನೆಯ ಮೆಟ್ಟಿಲು. ಈ ಏರಿಕೆಯಿಂದ ನಿಮಗೆ ಕಹಿಯಾಗಬಾರದೆಂದು ಸಕ್ಕರೆಯ ದರ ಏರಿತೆಂಬುದು ಅರಿಕೆಯಲ್ಲಿದೆ ಅಷ್ಟೆ? ಅದರಿಂದ ನಿಮಗೆ ಶಾಕ್ ಆಗಬಾರದೆಂದು ವಿದ್ಯುತ್ ದರ ಏರಿತು! ಸಾಲದೆ? ಶಾಕ್‌ನಿಂದ ಯಾವ ಪೀಡೆಯೂ ತಗುಲದಿರಲಿ ಎಂದು ಜಲ ಮಂಡಲಿ ನೀರಿನ ದರ ಏರಿಸಿತು! ಏನಂತೀರಾ? ನೀರಿನ ದರದ ಏರಿಕೆಗೆ ಸಮ ಪ್ರಮಾಣದಲ್ಲಿ ಮಳೆರಾಯನೂ ನದೀ ನೀರಿನ ಮಟ್ಟಗಳು ತುಟ್ಟತುದಿವರೆಗೆ ಏರುವಂತೆ ಮಾಡಿದ! ಕೃಷ್ಣರಾಜಸಾಗರ ಸಾಗರೋಪಾದಿಯಲ್ಲಿ ತುಂಬಿ ಹರಿಯಿತು, ಶರಾವತಿ ಗರಿಷ್ಟ ಮಟ್ಟಕ್ಕೇರಿತು! ಕಾವೇರಿ ಜಲಾಶಯ, ತಿಪ್ಪಗೊಂಡನಹಳ್ಳಿ, ಮಲಪ್ರಭೆ, ಘಟಪ್ರಭೆ, ನೀರಸಾಗರ ಎಲ್ಲಾ ಮಟ್ಟಗಳೂ ಏರಿದವು. ಆದರೂ ವಿದ್ಯುತ್ ಲೋಡ್‌ಶಟ್ ಡೌನ್, ನಲ್ಲಿಯ ನೀರಿನ ಪೂರೈಕೆಯಲ್ಲಿ ವ್ಯತ್ಯಯಗಳು ತಪ್ಪಿದ್ದಲ್ಲ. ಇರಲಿ, ಇವೂ ಏರಿಕೆಯ ಉದಾಹರಣೆಗಳಲ್ಲಿಯೇ ಬರುತ್ತವೆ. ಇದಾಯಿತೆ ಈ ಏರಿಕೆಗಳ ಇರಿತದಿಂದ ಪಾರಾಗಲು ಎಲ್ಲಿಗಾದರೂ ಪ್ರವಾಸ ಹೋಗೋಣವೆಂದರೆ ಬಸ್ ದರಗಳು? ಅವೂ ಏರಿಕೆಯನ್ನು ತೋರಿಸಬೇಡವೆ? ತೋರಿಸಿಯೆ ಬಿಟ್ಟವು ಏರಿಕೆಯ ಕೈಯನ್ನು ಇನ್ನೇನು ರೈಲು ಬಾಕಿ ಉಳಿಯಿತಲ್ಲವೆ? ಛೆ! ರೈಲಿಗೇನು ಅಷ್ಟು ಹೇವವಿಲ್ಲವೆ? ಮತ್ತೆ ಅಡಿಗೆ ಗ್ಯಾಸ್, ಶವದಹನ ಸೌದೆ, ಕರೆಂಟ್ ಆಫ್ ಆದಾಗಿನ ಮೇಣಬತ್ತಿ, ಚಿಮಣಿ ಎಣ್ಣೆಗಳಿಗೂ ಏರಿಕೆ! ಆಯಿತು. ಏರಿಕೆ ವೈಭವಕ್ಕೆ ಇನ್ನೇನು ಕಡಿಮೆ? ದಿನದ ಊಟಕ್ಕೆ ಅತಿ ಸೋವಿ ಆದ ಸೊಪ್ಪಿನ ಪಲ್ಯೆ, ಅದರಲ್ಲೂ ಹರಿವಿಪಲ್ಯೆ-ಮನೆಯ ಹಿತ್ತಲದಲ್ಲಿ ಕೊಳಚೆ ಭಾಗದಲ್ಲಿ ಕೆತ್ತಿ ಬೆಳೆಯುವ ತೊಪ್ಪಲು - ಅದೂ ಎರಡು ರೂಪಾಯಿಗೆ ಒಂದು ಸಿವುಡಾಗಬೇಕೆ? ಇದರ ಮೇಲಿಂದ ಬಟ್ಟೆಬರೆ, ಶ್ಯೂಜು, ಔಷಧಿ ಮಾತ್ರೆಗಳು, ಕಾಸ್ಮ್ಯಾಟಿಕ್ಸ್ ಒಟ್ಟು ಬದುಕಲು ಬೇಕಾದ ಆಹಾರದಿಂದ, ವಿಹಾರದ ವಸ್ತುಗಳ ವರೆಗೆ, ಪ್ರವಾಸ, ವಾಸ, ಹೋಟೆಲ್ ಗ್ರಾಸ - ಮಸಾಲೆ ದೋಸೆ, ಮೈಸೂರು ಪಾಕಿನಿಂದ ಚೊಚೊ-ಚಹಾದವರೆಗೆ!

ಇದು ಭಾರತದ ಏರಿಕೆ ಕಾಲ! ನನಗೆ ಕಾನ್‌ಸ್ಟಿಪೇಶನ್ ಕಂಪ್ಲೇಂಟು! ಅದಕ್ಕೆ 'ಸೀರಿಯಾ' ಎಂಬ ಒಂದು ಮಾತ್ರೆಗೆ ಈಗ ಬೆಲೆ ನಾಲ್ಕು ರೂಪಾಯಿ! ಸ್ವಾಮಿ ಒಮ್ಮೆ ಸಂಡಾಸ್‌ಗೆ ಹೋಗಿ ಬರಲಿಕ್ಕೆ ನಾಲ್ಕು ರೂಪಾಯಿ ತೆರುವುದೆ? ಒಂದು ಸಂಡಾಸ್ ಸಡಗರವೇ ಇಷ್ಟು ದುಬಾರಿಯಾದರೆ ಉಳಿದ Life saving drugs ಎಲ್ಲಾ Life taking drugs ಸರಿ! ಅದರಲ್ಲೂ reaction ಉಂಟು ಮಾಡುವಂಥ ವಿಪರೀತ ಬುದ್ಧಿಯ Specialist ಡಾಕ್ಟರರ 'ಪ್ರಿಸ್ಕ್ರಿಪ್ಶನ್' ಮಾತ್ರೆಗಳ ಆ್ಯಂಟಿ ಡೋಸ್‌ಗಳಿಗೆ ಮತ್ತೆ ಹಣದಂಡ! Insat-D2ಹಣೇಬರೆಹವೆ ಸರಿ ಇಂತಹ ಏರಿಕೆ ಕಾಲದ ಫಲಗಳೆಲ್ಲಾ!

ಏರಿಕೆ ಕಾಲವೆಂದರೆ ಅರ್ಥವಾಯಿತಲ್ಲವೆ? ಆಯಿತು. ಆದರೆ 'ಸ್ವಾಮೀ ಕೇಂದ್ರ ನೌಕರರ ಐದನೆಯ ಪೇ ಕಮೀಶನ್'ದ ಕೊಡುಗೆಗ ಳೆಂದರೆ ಕರೆನ್ಸಿಯ ಕರಿ ಎರೆದಂತೆ ಆಯಿತಲ್ಲ? ಕರೆನ್ಸಿ ನೋಟುಗಳಿಂದ ಎರೆದುಕೊಳ್ಳುವಷ್ಟು ಸಂಬಳದ ಏರಿಕೆ!-ಇದಕ್ಕೇನಂತೀರಿ? - ಎಂದು ನೀವು ಕೇಳಬಹುದು. ನಿಜ. ಉಚ್ಚ ಅಧಿಕಾರಿಗಳ ಸಂಬಳ ಗಿಂಬಳ ವಗ್ಗೆರೆ ಗಗನಕ್ಕೇರಿ ಬಿಟ್ಟಿತಲ್ಲ ಸಾಲದೆ?-ಎನ್ನಬಹುದು ನೀವು? ಇಷ್ಟೇ ಅಲ್ಲ ಕೇಂದ್ರ ನೌಕರರ ಸಂಬಳ ಏರಿಕೆಗಳೊಡನೆ ರಾಜ್ಯ ನೌಕರರ ಸಂಬಳಗಳೂ ಏರಬಹುದು. ಅದೂ ನಿಜ! ತತ್ಪರಿಣಾಮವಾಗಿ ಕಾರ್ಪೊರೇಷನ್, ಮುನಸಿಪಲ್ ನೌಕರರ ಸಂಬಳಗಳೂ ಏರುತ್ತವೆ - ಅದಕ್ಕೆ ಸ್ಪರ್ಧಿಯಾಗಿ ಗಿಂಬಳ ರೇಟೂ ಏರುತ್ತವೆ! ಹೌದು. ಅದೂ ನಿಜ. ಆದರೆ ಸ್ವಾಮಿ ಒಂದೇ ಮಾತು. ಸರಕಾರೀ ನೌಕರರಿಗೆಲ್ಲಾ ಏರಿಕೆ ಕಾಲ! ನಿಜ. ಆದರೆ ಸುದಾಮನ ಒಕ್ಕಲಾದ ಶ್ರೀ ಸಾಮಾನ್ಯನ ಗತಿಯೇನು? ಸರಕಾರೀ ಸಂಬಳ ಏರಿಕೆ ಎಂದು ಸರಕುಗಳ ದರಗಳು ಮತ್ತೂ ಏರುತ್ತವೆ. ಸರಕುಗಳ ದರ ಏರುತ್ತವೆಂದು ಡಿ.ಎ. ದರ ಮತ್ತೆ ಏರುತ್ತದೆ. ಈ ಮೇಲಾಟ ಏರಾಟಗಳಲ್ಲಿ ಒಬ್ಬ ಈ ಸಾಮಾನ್ಯ ಮಾಡಬೇಕೇನು?

ಶ್ರೀ ಸಾಮಾನ್ಯನ ಪೋಸ್ಟ್‌ಕಾರ್ಡೂ ಇಪ್ಪತ್ತೈದು ಪೈಸೆಗಳಾದವು! ಹಿರಿಯ ನಾಯಕ ಶ್ರೀ ನಿಜಲಿಂಗಪ್ಪನಂತಹರೂ ಹದಿನೈದು ಪೈಸೆಯ ಕಾರ್ಡುಗಳನ್ನೇ ಬಳಸುತ್ತಿದ್ದರು. ಖ್ಯಾತ ವಿಜ್ಞಾನಿ ಎಚ್.ನರಸಿಂಹಯ್ಯನವರು ಲುಂಗಿ-ಶರ್ಟು-ಟೊಪ್ಪಿಗೆ ಬಿಟ್ಟು ಬೇರೆ ಕಿರೀಟ ಧರಿಸಲಿಲ್ಲ-ಸ್ಕೂಟರ್ ಸವಾರರ ಕಬ್ಬಿಣದ ಕಿರೀಟಗಳ ಮಾತು ಬಿಡಿ, ಈಗ ಅದರ ಕಡ್ಡಾಯದ ಬಳಕೆಯನ್ನು ಐಚ್ಛಿಕವಾಗಿಸಿದ್ದಾರೆ. ಶ್ರೀ ಸಾಮಾನ್ಯನಂತೆ ಉಡಿಗೆ ತೊಡಿಗೆಯಲ್ಲದೆ, ಶ್ರೀ ಸಾಮಾನ್ಯನ ಒಂದು ಚಾಪೆಯ ಮೇಲೆ ಮಲಗುತ್ತಾರೆ. ಇನ್ನೂ ಬರಿಗಾಲಿನಿಂದ ಓಡಾಡುವ, ಸೈಕಲ್ ಮೇಲೆ ಸವಾರಿ ಮಾಡುವ ಶಾಸಕರು, ಮಂತ್ರಿಗಳು, ನಾಯಕರು ಆಗಿ ಹೋದರು. ಅಂಥವರಿಗೆ ಏರಿಕೆ ಕಾಲ ಬರಲೇ ಇಲ್ಲ. ತನ್ನ ಹರಿದ ಬಟ್ಟೆಯನ್ನು ತಾನೇ ಹೊಲಿದುಕೊಳ್ಳುತ್ತಿದ್ದಂತಹ 'ಹೋಚಿಮಿನ್' ನಂತಹ ವಿಯಟ್ನಾಂ ರಾಷ್ಟ್ರಪತಿ ಇನ್ನೆಲ್ಲಿಯಾದರೂ ಸಿಕ್ಕಾರೆಯೆ?

ಮನುಷ್ಯನ ಇರುವಿಕೆಯ ದರ ಇಳಿಯ ಬೇಕು ಎಂದರೆ ಆತನ ಅಂತಸ್ತು ಬೆಳೆಯುತ್ತದೆ; ಏರುತ್ತದೆ. ಆದರೆ ಬದುಕಿನ ಎಲ್ಲ ಪದಾರ್ಥಗಳ ದರಗಳೂ ಏರಿ ಮನುಷ್ಯನ ದರ ಮಾತ್ರ ಇಳಿದರೆ ಅಂತಹ ಮನುಷ್ಯರಿರುವ ದೇಶ ಎಂದೂ ಏರಿಕೆಯ ದೇಶವಾಗಲಾರದು. ಮುಖ್ಯಮಂತ್ರಿ, ಪ್ರಧಾನಮಂತ್ರಿಗಳು ಓಡಾಡುವ ಮಾರ್ಗಗಳ ಸಾಗಾಣಿಕೆಯನ್ನು ತಾಸುಗಟ್ಟಲೆ ತಡೆದು ನಿಲ್ಲಿಸಿ ದರೆ ಅವರ ದರ್ಜೆ ಏರಿಕೆಯದಾಗಿರುತ್ತದೆಂಬ ಭ್ರಮೆಯುಳ್ಳ ಖಾಕಿಗಳೂ ನಮ್ಮಲ್ಲಿರುವುದು ನಮ್ಮ ದುರ್ದೈವ. ಅಮೇರಿಕೆಯ ಅಧ್ಯಕ್ಷರನ್ನು ಒಬ್ಬ ಶ್ರೀ ಸಾಮಾನ್ಯ ಕೈ ಕುಲುಕಲು ಯಾವ ಅಡ್ಡಿಯೂ ಇಲ್ಲ. ಅದು ಪ್ರಜಾಸತ್ತೆ. ಆದರೆ ನಮ್ಮಲ್ಲಿಯ ಮುಖ್ಯಮಂತ್ರಿ ಪ್ರಧಾನಿಗಳ ರುಬಾಬ್ ದುಬಾರಿಯಾಗಲಿಕ್ಕೆ ಕಾರಣ ಅವರಿಗಿರುವ ಬುಲೆಟ್ ಭಯ! ಜಯಲಲಿತಾರ ಬುಲೆಟ್ ಪ್ರೂಫ್ ನಿಲುವಂಗಿ, ಹಿಂದಿನ ಪ್ರಧಾನಿಯ ಬುಲೆಟ್ ಪ್ರೂಫ್ ಕಾರ್, ವೇದಿಕೆ ಗಳಿಗೆ ಬುಲೆಟ್ ಪ್ರೂಫ್ ಎನ್‌ಕ್ಲೋಜರ್- ಇವೆಲ್ಲಾ ನಮ್ಮ ದೇಶದ ವಿ.ವಿ.ಐ.ಪಿ. ಗಳಿಗೆ ಇರುವ ಉನ್ನತಿಕೆ, ಏರಿಕೆಯ ಲಕ್ಷಣವಲ್ಲ ಹೆಂಡ, ಹಣ, ಹೆಣ್ಣುಗಳಿಂದ ಬ್ಯಾಲೆಟ್‌ಬಾಕ್ಸ್ ಕೊಂಡುಕೊಂಡ ಕುರ್ಚಿಗಿರುವ ಬುಲೆಟ್ ಭಯ.

# ವಿದ್ಯೋ-ಉದ್ಯೋಗ

## ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಬಹು ಆಯ್ಕೆ ರೂಪದ ಪ್ರಶ್ನೆಗಳು

### ವಿಜ್ಞಾನ

೧. ಸೂರ್ಯನ ಹೊರಮೈ ಉಷ್ಣಾಂಶ
ಅ. ೮೦೦೦ಡಿ.ಸೆಂ. ಬ. ೫೦೦೦ಡಿ.ಸೆಂ. ಕ. ೬೫೦೦ಡಿ.ಸೆಂ. ಡ. ೬೦೦೦ಡಿ.ಸೆಂ

೨. ಭೂಮಿ ತಿರುಗುವ ದಿಕ್ಕಿನ ಪಥ
ಅ. ಉತ್ತರದಿಂದ- ದಕ್ಷಿಣಕ್ಕೆ ಬ. ಪೂರ್ವದಿಂದ- ಪಶ್ಚಿಮಕ್ಕೆ
ಕ. ಪಶ್ಚಿಮದಿಂದ ಪೂರ್ವಕ್ಕೆ ಡ. ದಕ್ಷಿಣದಿಂದ ಉತ್ತರಕ್ಕೆ

೩. ಸೂರ್ಯನ ಸುತ್ತ ವೇಗವಾಗಿ ಸುತ್ತುವ ಗ್ರಹ
ಅ. ಬುಧ ಬ. ಗುರು ಕ. ಶುಕ್ರ ಡ. ಪ್ಲೂಟೋ

೪. ಸೌರವ್ಯೂಹದಲ್ಲಿ ಗ್ರಹಗಳಲ್ಲಿ ಅತ್ಯಂತ ಚಿಕ್ಕ ಗ್ರಹ
ಅ. ಗುರು ಬ. ನೆಪ್ಚೂನ್ ಕ. ಬುಧ ಡ. ಶನಿ

೫. ಜೀವಿಗಳಿರಬಹುದೆಂದು ಸಂಶೋಧನೆಗೆ ಒಳಪಟ್ಟ ಗ್ರಹ
ಅ. ಮಂಗಳ ಬ. ಪ್ಲೂಟೋ ಕ. ಶುಕ್ರ ಡ. ಚಂದ್ರ

೬. ಸೂರ್ಯನಿಗೆ ಅತ್ಯಂತ ಸಮೀಪ ಗ್ರಹ
ಅ. ಮಂಗಳ ಬ. ನೆಪ್ಚೂನ್ ಕ. ಗುರು ಡ. ಬುಧ

೭. ಸೌರವ್ಯೂಹದ ದೊಡ್ಡ ಗ್ರಹ
ಅ. ಶುಕ್ರ ಬ. ಶನಿ ಕ. ಗುರು ಡ. ಚಂದ್ರ

೮. ದೂರದರ್ಶಕವನ್ನು ಕಂಡುಹಿಡಿದವರು
ಅ. ಥಾಮಸ್ ಅಲ್ವಾ ಎಡಿಸನ್ ಬ. ಗೆಲಿಲಿಯೋ ಕ. ಗ್ರಾಹಂಬೆಲ್
ಡ. ರಾಸಗನ್

೯. ಅಧಿಕ ವರ್ಷ ಎಂದರೆ
ಅ. ೩೬೬ ದಿನಗಳು ಬ. ೩೬೫ ೧/೪ ದಿನಗಳು ಡ. ೩೭೦ ದಿನಗಳು
ಡ. ೩೬೮ ದಿನಗಳು

೧೦. ಹ್ಯಾಲಿ ಧೂಮಕೇತು ಕಾಣಿಸುವುದು
ಅ. ೧೦೦ ವರ್ಷಕ್ಕೊಮ್ಮೆ ಬ. ೫೦ ವರ್ಷಕ್ಕೊಮ್ಮೆ ಕ. ೭೬ ವರ್ಷಕ್ಕೆ
ಡ. ೬೫ ವರ್ಷಕ್ಕೆ

೧೧. ಮಾನವ ಮೊದಲು ಚಂದ್ರನ ಮೇಲೆ ಪಾದಾರ್ಪಣ ಮಾಡಿದ್ದು
ಅ. ೧೯೬೯ ಜುಲೈ ೨೧ ಬ. ೧೯೬೯ ಜೂನ್ ೨೧ ಕ. ೧೯೭೦ ಜನವರಿ ೧೬
ಡ. ೧೯೬೮ ಜುಲೈ ೧೦

೧೨. 'ಕೆಂಪುಗ್ರಹ' ಎಂದು ಕರೆಯಲ್ಪಡುವ ಗ್ರಹ
ಅ. ಶನಿ ಬ. ಯುರೇನಸ್ ಕ. ಗುರು ಡ. ಮಂಗಳ

೧೩. ಜಲಾವೃತ ಗ್ರಹ
ಅ. ಶುಕ್ರ ಬ. ನೆಪ್ಚೂನ್ ಕ. ಭೂಮಿ ಡ. ಪ್ಲೂಟೋ

೧೪. ಮಧ್ಯರಾತ್ರಿ ಸೂರ್ಯನಾಡು ಎಂದು ಪ್ರಸಿದ್ಧವಾದ ದೇಶ
ಅ. ಸ್ವೀಡನ್ ಬ. ಬ್ರೆಜಿಲ್ ಕ. ನಾರ್ವೆ ಡ. ಚಿಲಿ

೧೫. ದೀರ್ಘ ಹಗಲು ಹೊಂದಿರುವ ದಿನ
ಅ. ಡಿಸೆಂಬರ್ ೧೦ ಬ. ಜುಲೈ ೨೧ ಕ. ಜೂನ್ ೧೦ ಡ. ಜೂನ್ ೨೧

### ರಾಜ್ಯಶಾಸ್ತ್ರ

೧೬. ರಾಷ್ಟ್ರಪತಿ ತನ್ನ ರಾಜಿನಾಮೆಯನ್ನು ಯಾರಿಗೆ ಸಲ್ಲಿಸುತ್ತಾರೆ?
ಅ. ಪ್ರಧಾನಮಂತ್ರಿ ಬ. ಲೋಕಸಭಾ ಅಧ್ಯಕ್ಷರು ಕ. ಉಪರಾಷ್ಟ್ರಪತಿ
ಡ. ಸುಪ್ರೀಂ ಕೋರ್ಟ್ ಮುಖ್ಯ ನ್ಯಾಯಾಧೀಶರು

೧೭. ರಾಜ್ಯಸಭೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವವರು ಯಾರು?
ಅ. ಉಪರಾಷ್ಟ್ರಪತಿ ಬ. ರಾಜ್ಯ ಸಭಾ ಕಾರ್ಯದರ್ಶಿ ಕ. ರಾಷ್ಟ್ರಪತಿ
ಡ. ಹಿರಿಯ ಸದಸ್ಯರು

೧೮. ರಾಜ್ಯಸಭಾ ಸದಸ್ಯನಾಗಲು ವಯಸ್ಸಿನ ಅರ್ಹತೆ ಎಷ್ಟು?
ಅ. ೨೫ ಬ. ೩೫ ಕ. ೨೮ ಡ. ೩೦

೧೯. ಯೋಜನಾ ಆಯೋಗದ ಅಧ್ಯಕ್ಷರಾಗಿ ಯಾರು ಇರುತ್ತಾರೆ?
ಅ. ರಾಷ್ಟ್ರಪತಿ ಬ. ಉಪರಾಷ್ಟ್ರಪತಿ ಕ. ಪ್ರಧಾನಮಂತ್ರಿ ಡ. ಲೋಕಸಭಾ ಅಧ್ಯಕ್ಷರು

೨೦. ರಾಜ್ಯಸಭಾ ಸದಸ್ಯತ್ವದ ಅವಧಿ ಎಷ್ಟು?
ಅ. ೬ ವರ್ಷ ಬ. ೫ ವರ್ಷ ಕ. ೪ ವರ್ಷ ಡ. ೩ ವರ್ಷ

೨೧. ಸಂಸತ್‌ನ್ನು ಎದುರಿಸದೆ ರಾಜೀನಾಮೆ ನೀಡಿದ ಏಕೈಕ ಪ್ರಧಾನಿ ಯಾರು?
ಅ. ವಿ.ಪಿ. ಸಿಂಗ್ ಬ. ಚಂದ್ರಶೇಖರ್ ಕ. ಮೊರಾರ್ಜಿ ದೇಸಾಯಿ
ಡ. ಚರಣ ಸಿಂಗ್

೨೨. ರಾಷ್ಟ್ರಪತಿ, ಉಪರಾಷ್ಟ್ರಪತಿ ಇಬ್ಬರು ರಾಜೀನಾಮೆ ನೀಡಿದಾಗ ರಾಷ್ಟ್ರಪತಿಯಾಗಿ ಯಾರು ಇರುತ್ತಾರೆ?
ಅ. ಸುಪ್ರೀಂಕೋರ್ಟಿನ ಮುಖ್ಯ ನ್ಯಾಯಾಧೀಶ ಬ. ಪ್ರಧಾನ ಮಂತ್ರಿ
ಕ. ಲೋಕಸಭಾ ಅಧ್ಯಕ್ಷ ಡ. ಗೃಹಮಂತ್ರಿ

೨೩. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ನಿವೃತ್ತಿ ವಯಸ್ಸೆಷ್ಟು
ಅ. ೬೦ ಬ. ೫೮ ಕ. ೬೨ ಡ. ೬೫

೨೪. ಚುನಾವಣಾ ಆಯೋಗದ ಮುಖ್ಯ ಆಯುಕ್ತರನ್ನು ಯಾರು ನೇಮಕ ಮಾಡುತ್ತಾರೆ?
ಅ. ಪ್ರಧಾನ ಮಂತ್ರಿ ಬ. ಗೃಹಮಂತ್ರಿ ಕ. ರಾಷ್ಟ್ರಪತಿ ಡ. ಉಪರಾಷ್ಟ್ರಪತಿ

೨೫. ರಾಜ್ಯಸಭೆಯ ಉಪಾಧ್ಯಕ್ಷರು ಯಾರು?
ಅ. ಪಿ.ಎ. ಸಂಗ್ಮಾ ಬ. ನೆಜ್ಮಾ ಹೆಪ್ತುಲ್ಲಾ ಕ. ಕೃಷ್ಣಕಾಂತ
ಡ. ಶಿವರಾಜ ಪಾಟೀಲ

೨೬. ಅತ್ಯಂತ ಕಡಿಮೆ ಅವಧಿ ಪ್ರಧಾನಮಂತ್ರಿಯಾಗಿದ್ದವರು ಯಾರು?
ಅ. ಚರಣ ಸಿಂಗ್ ಬ. ಚಂದ್ರಶೇಖರ ಕ. ಎಚ್.ಡಿ. ದೇವೇಗೌಡ
ಡ. ಅಟಲ್ ಬಿಹಾರಿ ವಾಜಪೇಯಿ

೨೭. ಮೊಟ್ಟ ಮೊದಲು ಸಂವಿಧಾನ ತಿದ್ದುಪಡಿ ಯಾವಾಗ ಮಾಡಲಾಯಿತು?
ಅ. ೧೯೫೭ ಬ. ೧೯೫೧ ಕ. ೧೯೫೦ ಡ. ೧೯೪೮

೨೮. ದೇಶದಲ್ಲಿ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆದದ್ದು ಯಾವಾಗ?
ಅ. ೧೯೪೮ ಬ. ೧೯೫೦ ಕ. ೧೯೫೧ ಡ. ೧೯೫೬

೨೯. ಜೈಜವಾನ್ ಜೈ ಕಿಸಾನ್ ಇದು ಯಾರ ಘೋಷಣೆ?
ಅ. ಜವಾಹರಲಾಲ್ ನೆಹರು ಬ. ಇಂದಿರಾ ಗಾಂಧಿ
ಕ. ಲಾಲ್ ಬಹದ್ದೂರ ಶಾಸ್ತ್ರಿ ಡ. ಚರಣ ಸಿಂಗ್

೩೦. ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ರಾಷ್ಟ್ರಪತಿಯಾಗಿ ಆಯ್ಕೆಯಾದವರು ಯಾರು?
ಅ. ರಾಧಾಕೃಷ್ಣನ್ ಬ. ಫಕ್ರುದ್ದಿನ್ ಅಲಿ ಅಹ್ಮದ್ ಕ. ವಿ.ವಿ. ಗಿರಿ
ಡ. ನೀಲಂ ಸಂಜೀವ ರೆಡ್ಡಿ

## ಇತಿಹಾಸ

೩೧. ಕರ್ನಾಟಕ ರಾಜ ಪರಂಪರೆಯ ಕೊನೆಯ ಅರಸರು ಯಾರು?
ಅ. ನಾಲ್ವಡಿ ಕೃಷ್ಣರಾಜ ಒಡೆಯರ್ ಬ. ಶ್ರೀಕಂಠ ದತ್ತ ಒಡೆಯರ್
ಕ. ಜಯಚಾಮರಾಜೇಂದ್ರ ಒಡೆಯರ್ ಡ. ಮುಮ್ಮಡಿ ಕೃಷ್ಣರಾಜ ಒಡೆಯರ್

೩೨. ಶ್ವೇತಾಂಬರರು ದಿಗಂಬರರ ಧರ್ಮ ಯಾವುದು?
ಅ. ಬೌದ್ಧ ಬ. ಹಿಂದೂ ಕ. ಜೈನ ಡ. ಪಾರ್ಸಿ

೩೩. ಮೊದಲನೆ ಮಹಾಯುದ್ಧ ಕೊನೆಗೊಂಡ ವರ್ಷ ಯಾವುದು?
ಅ. ೧೯೧೪ ಬ. ೧೯೧೫ ಕ. ೧೯೩೯ ಡ. ೧೯೧೮

೩೪. ಆರ್ಯ ಸಮಾಜದ ಸ್ಥಾಪಕರು ಯಾರು?
ಅ. ಸ್ವಾಮಿ ದಯಾನಂದ ಸರಸ್ವತಿ ಬ. ರಾಜಾರಾಮ್ ಮೋಹನ್‌ರಾಯ್ ಕ. ತುಳಸಿರಾಮ್ ಡ. ಸ್ವಾಮಿ ವಿವೇಕಾನಂದ

೩೫. ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸ್ಥಾಪಕರು ಯಾರು?
ಅ. ಬಾಲ ಗಂಗಾಧರ್ ತಿಲಕ್ ಬ. ಗೋಪಾಲಕೃಷ್ಣ ಗೋಖಲೆ ಕ. ಎ.ಒ. ಹ್ಯೂಮ್ ಡ. ಎಂ.ಜಿ. ರಾನಡೆ

೩೬. ಮೊದಲ ಸ್ವಾತಂತ್ರ ಚಳುವಳಿ ೧೮೫೭ರಲ್ಲಿ ನಡೆದಾಗ ಗವರ್ನರ್ ಜನರಲ್ ಆಗಿದ್ದವರು ಯಾರು?
ಅ. ಲಾರ್ಡ್ ಕ್ಯಾನಿಂಗ್ ಬ. ಲಾರ್ಡ್ ಲಾರೆನ್ಸ್ ಕ. ಲಾರ್ಡ್ ಕರ್ಜನ್ ಡ. ಲಾರ್ಡ್ ರಿಪ್ಪನ್

೩೭. ಕರ್ನಾಟಕದಲ್ಲಿ ಬಹಮನಿಯರ ಮೊದಲ ರಾಜಧಾನಿ ಯಾವುದಾಗಿದ್ದಿತು?
ಅ. ಗುಲಬರ್ಗಾ ಬ. ಬೀದರ ಕ. ಬಿಜಾಪುರ ಡ. ಬಾದಾಮಿ

೩೮. ಜೈನ ಪರಂಪರೆಯಲ್ಲಿ ೨೪ನೇ ತೀರ್ಥಂಕರು ಯಾರು?
ಅ. ವೃಷಭದೇಶ ಬ. ಪಾರ್ಶ್ವನಾಥ ಕ. ಭದ್ರಬಾಹು ಡ. ಮಹಾವೀರ

೩೯. ಮೊಘಲರ ಆಡಳಿತದ ಕೊನೆಯ ದೊರೆ ಯಾರು?
ಅ. ಫಿರುಕ್ ನಿಯರ್ ಬ. ಮಹಮ್ಮದ್‌ಶಾ ಕ. ಬಹದ್ದೂರ್ ಶಾ
ಡ. ಜಹಂದರ್ ಶಾ

೪೦. ಸಾಮಾಜಿಕ, ಧಾರ್ಮಿಕ ಸುಧಾರಣೆಗಳಿಗೆ ಸಮನಾದ ಪ್ರಾಧಾನ್ಯತೆ ಕೊಟ್ಟ ಶೈವ ಪಂಥ ಯಾವುದು?
ಅ. ಪಾಶುಪತರು ಬ. ಶುದ್ಧ ಶೈವರು ಕ. ವೀರ ಶೈವರು
ಡ. ಮತ್ತಮಯಾರರು

## ಅರ್ಥಶಾಸ್ತ್ರ

೪೧. ಪ್ರಪಂಚದಲ್ಲಿ ಅತಿ ಹೆಚ್ಚು ಚಹಾ ಬೆಳೆಯುವ ರಾಷ್ಟ್ರ ಯಾವುದು?
ಅ. ಬ್ರೆಜಿಲ್ ಬ. ಶ್ರೀಲಂಕಾ ಕ. ಇರಾನ್ ಡ. ಭಾರತ




೪೨. ಭಾರತ ದೇಶದ ಮೊದಲ ಬಟ್ಟೆ ಗಿರಣಿಯನ್ನು ಎಲ್ಲಿ ಸ್ಥಾಪಿಸಲಾಯಿತು?
ಅ. ಮುಂಬಯಿ ಬ. ಕಲ್ಕತ್ತಾ ಕ. ಮದ್ರಾಸ್ ಡ. ಅಹಮದಾಬಾದ್

೪೩. ಜಗತ್ತಿನಲ್ಲಿ ಅಧಿಕ ರಬ್ಬರ್ ಬೆಳೆಯುವ ದೇಶ ಯಾವುದು?
ಅ. ಚೀನಾ ಬ. ಶ್ರೀಲಂಕಾ ಕ. ಭಾರತ ಡ. ಮಲೇಶಿಯಾ

೪೪. ಭಾರತದೊಂದಿಗೆ ಅತ್ಯಧಿಕ ವಿದೇಶಿ ವ್ಯಾಪಾರ ಹೊಂದಿದ ದೇಶ ಯಾವುದು?
ಅ. ಜಪಾನ್ ಬ. ಬ್ರಿಟನ್ ಕ. ಚೀನಾ ಡ. ಅಮೆರಿಕ

೪೫. ಮೊದಲ ಬಾರಿ ಬ್ಯಾಂಕ್ ರಾಷ್ಟ್ರೀಕರಣ ಯಾವ ವರ್ಷ ಮಾಡಲಾಯಿತು?
ಅ. ೧೯೭೦ ಬ. ೧೯೬೯ ಕ. ೧೯೭೫ ಡ. ೧೯೮೦

೪೬. ಗ್ರೀನ್‌ವಿಚ್ ವೇಳೆ ರೇಖಾಪಟ್ಟಿ ಯಾವ ದೇಶದಲ್ಲಿ ಹಾದು ಹೋಗಿದೆ?
ಅ. ಚೀನಾ ಬ. ಜರ್ಮನ್ ಕ. ಇಂಗ್ಲಂಡ್ ಡ. ಅಮೆರಿಕ

೪೭. ಗಂಗ ಮತ್ತು ಬ್ರಹ್ಮಪುತ್ರ ನದಿಗಳು ಕೂಡುವ ಸ್ಥಳವನ್ನು ಏನೆಂದು ಕರೆಯುತ್ತಾರೆ?
ಅ. ಕೂಡಲ ಸಂಗಮ ಬ. ತ್ರಿವೇಣಿ ಸಂಗಮ ಕ. ಪದ್ಮ ಡ. ಸಂಗಮ

೪೮. ಭಾರತ ಅತಿದೊಡ್ಡ ಸ್ವಾಭಾವಿಕ ಬಂದರು ಯಾವುದು?
ಅ. ವಿಶಾಖಪಟ್ಟಣ ಬ. ಮಂಗಳೂರು ಕ. ಕಲ್ಕತ್ತಾ ಡ. ಕೊಚ್ಚಿನ್

೪೯. ದೇಶದ ಅತಿ ದೊಡ್ಡ ಸಾರಿಗೆ ವ್ಯವಸ್ಥೆ ಯಾವುದು?
ಅ. ರೈಲು ಸಾರಿಗೆ ಬ. ವಾಯು ಸಾರಿಗೆ ಕ. ರಸ್ತೆ ಸಾರಿಗೆ ಡ. ಜಲಸಾರಿಗೆ

೫೦. ತಾಮ್ರ ನಿಕ್ಷೇಪಗಳು ಯಾವ ರಾಜ್ಯದಲ್ಲಿ ಅಧಿಕವಾಗಿವೆ?
ಅ. ತಮಿಳುನಾಡು ಬ. ಪಶ್ಚಿಮ ಬಂಗಾಲ ಕ. ಮಹಾರಾಷ್ಟ್ರ
ಡ. ರಾಜಸ್ಥಾನ

### ಉತ್ತರಗಳು

೧. ಡ, ೨. ಕ, ೩. ಬ, ೪. ಕ, ೫. ಅ, ೬. ಡ, ೭. ಕ, ೮. ಬ, ೯. ಅ, ೧೦. ಕ, ೧೧. ಬ, ೧೨. ಡ, ೧೩. ಕ, ೧೪. ಕ, ೧೪. ಡ, ೧೬. ಕ, ೧೭. ಅ, ೧೮. ಡ, ೧೯. ಕ, ೨೦. ಅ, ೨೧. ಡ, ೨೨. ಅ, ೨೩. ಡ, ೨೪. ಕ, ೨೫. ಬ, ೨೬. ಡ, ೨೭. ಬ, ೨೮. ಕ, ೨೯. ಕ, ೩೦. ಕ, ೩೧. ಕ, ೩೨. ಕ, ೩೩. ಡ, ೩೪. ಅ, ೩೫. ಕ, ೩೬. ಅ, ೩೭. ಅ, ೩೮. ಡ, ೩೯. ಕ, ೪೦. ಕ, ೪೧. ಡ, ೪೨. ಅ, ೪೩. ಡ, ೪೪. ಡ, ೪೫. ಬ, ೪೬. ಕ, ೪೭. ಕ, ೪೮. ಡ, ೪೯. ಅ, ೫೦. ಡ

# ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ

೧. ಇತ್ತೀಚೆಗೆ ಧೂಮಪಾನ ನಿಷೇಧಿಸಿದ ರಾಜ್ಯ ಯಾವುದು?
೨. ಶ್ರೀಕೃಷ್ಣದೇವರಾಯ ಯಾವ ವಂಶಸ್ಥಕ್ಕೆ ಸೇರಿದವರು?
೩. ಪ್ರಪಂಚ ಆರೋಗ್ಯ ಸಂಸ್ಥೆ ಪ್ರಧಾನ ಕಾರ್ಯಾಲಯ ಎಲ್ಲಿದೆ?
೪. ಪೆಟ್ರೋಲಿಯಂ ಉತ್ಪಾದನೆಗೆ ಹೆಸರಾದ ರಾಜ್ಯ ಯಾವುದು?
೫. ಬೆಳ್ಳಿ ದೊರೆಯುವ ಎರಡು ರಾಜ್ಯಗಳು ಯಾವುವು?
೬. ಅತ್ಯಧಿಕ ಗೋಡಂಬಿ ಬೆಳೆಯುವ ದೇಶದ ಏಕೈಕ ರಾಜ್ಯ ಯಾವುದು?
೭. ಗೌತಮ ಬುದ್ಧರ ಜನ್ಮಸ್ಥಳ ಯಾವುದು?
೮. ಮಾನವ ಹಕ್ಕುಗಳ ದಿನಾಚರಣೆ ಎಂದು ಆಚರಿಸುತ್ತಾರೆ?
೯. ಅಮೆರಿಕ ಪಾರ್ಲಿಮೆಂಟಿನ ಹೆಸರು?
೧೦. ಡಿಸ್ಕವರಿ ಆಫ್ ಇಂಡಿಯಾ ಪುಸ್ತಕದ ಕರ್ತೃ ಯಾರು?
೧೧. ಮೊಟ್ಟಮೊದಲ ಏಷಿಯನ್ ಕ್ರೀಡೆ ನಡೆದದ್ದು ಯಾವ ನಗರದಲ್ಲಿ?
೧೨. ಪಂಚಾಯತ್‌ರಾಜ್ ವ್ಯವಸ್ಥೆ ಯಾವ ಆಯೋಗದ ಶಿಫಾರಸ್ಸಿನದು?
೧೩. ಉತ್ಕಲ ಎಂದು ಯಾವ ರಾಜ್ಯಕ್ಕೆ ಕರೆಯುತ್ತಾರೆ?
೧೪. ಈ ಬಾರಿ ಬುಕರ್ ಪ್ರಶಸ್ತಿ ಪಡೆದ ಭಾರತೀಯರು ಯಾರು?
೧೫. ಜಲಿಯನ್ ವಾಲಾಬಾಗ್ ದುರ್ಘಟನೆ ಕಾರಣ ಕರ್ತ ಜನರಲ್ ಯಾರು?
೧೬. ಒಂದು ರಾಜ್ಯಕ್ಕೆ ಸೇರಿದ ವ್ಯಕ್ತಿಯನ್ನು ಅದೇ ರಾಜ್ಯಕ್ಕೆ ರಾಜ್ಯಪಾಲರಾಗಿ ನೇಮಿಸಬಹುದೆ?
೧೭. ವಿದೇಶಿ ಪ್ರವಾಸದಲ್ಲಿದ್ದಾಗ ಮರಣಿಸಿದ ಪ್ರಧಾನಿ ಯಾರು?
೧೮. ಬ್ರಹ್ಮಪುತ್ರ ನದಿಯ ಉದ್ದವೆಷ್ಟು?
೧೯. ರವೀಂದ್ರನಾಥ್ ಠಾಗೋರ್ ಅವರಿಗೆ ನೋಬೆಲ್ ಪ್ರಶಸ್ತಿ ಯಾವಾಗ ಬಂದಿತು?
೨೦. ಪುಲಿಟ್ಜರ್ ಪ್ರಶಸ್ತಿ ಯಾವ ದೇಶಕ್ಕೆ ಸೇರಿದ್ದು?
೨೧. ೧೯೯೬ರ ಸಾಹಿತ್ಯಿಕ ಮ್ಯಾಗ್ಸೆಸ್ಸೆ ಪ್ರಶಸ್ತಿ ಪಡೆದ ಭಾರತೀಯರು ಯಾರು?
೨೨. ಮ್ಯಾಗ್ಸೆಸ್ಸೆ ಪ್ರಶಸ್ತಿ ಪಡೆದ ಮೊದಲ ಭಾರತೀಯರು ಯಾರು?
೨೩. ೧೯೯೧ರ ಪ್ರಕಾರ ಭಾರತದ ಸಾಕ್ಷರತಾ ಪ್ರಮಾಣ ಎಷ್ಟು?
೨೪. ಕರ್ನಾಟಕದ ಸಾಕ್ಷರತಾ ಪ್ರಮಾಣ ಎಷ್ಟು?
೨೫. ದಕ್ಷಿಣ ಗಂಗೆ ಎಂದು ಯಾವ ನದಿಗೆ ಕರೆಯುತ್ತಾರೆ?
೨೬. ಜಗತ್ತಿನ ಅತೀ ಚಿಕ್ಕ ರಾಷ್ಟ್ರ ವ್ಯಾಟಿಕನ್ ಸಿಟಿಯ ವಿಸ್ತೀರ್ಣ ಎಷ್ಟು?
೨೭. ಪ್ರಪಂಚದಲ್ಲಿ ಅತ್ಯಧಿಕ ಕಬ್ಬು ಬೆಳೆಯುವ ರಾಷ್ಟ್ರ?
೨೮. ೧೯೯೭ರ ಭಾರತ ಗಣರಾಜ್ಯೋತ್ಸವದ ಮುಖ್ಯ ಅತಿಥಿ ಯಾರು?
೨೯. ಕಾಳಿದಾಸ ಯಾರ ಆಸ್ಥಾನದಲ್ಲಿದ್ದರು?
೩೦. ನೀಲಿ ಬಣ್ಣದ ನಕ್ಷತ್ರ?
೩೧. ಹಗಲು ರಾತ್ರಿಗಳಾಗಲು ಕಾರಣ?
೩೨. ಯುರೇನಸ್ ಗ್ರಹ ಕಂಡುಹಿಡಿದವರು?
೩೩. ಬಾಂಗ್ಲಾ ದೇಶ ಯಾವ ವರ್ಷ ಸ್ವತಂತ್ರ ರಾಷ್ಟ್ರವಾಯಿತು?
೩೪. ಏಷ್ಯಾದ ನೋಬೆಲ್ ಪ್ರಶಸ್ತಿ ಎಂದು ಹೆಸರು ಪಡೆದ ಪ್ರಶಸ್ತಿ ಯಾವುದು?
೩೫. 'ವೆಲ್ತ್ ಆಫ್ ನೇಷನ್' ಪುಸ್ತಕದ ಕರ್ತೃ ಯಾರು?
೩೬. ಆಗಾಖಾನ್ ಕಪ್ ಯಾವ ಆಟಕ್ಕೆ ಸಂಬಂಧಿಸಿದ್ದು?
೩೭. 'ಗೋರಾ' ಕಾದಂಬರಿ ಬರೆದ ಸಾಹಿತಿ ಯಾರು?
೩೮. ಗಡಿನಾಡ ಗಾಂಧಿ ಎಂದು ಯಾರನ್ನು ಕರೆಯಲಾಗುತ್ತಿತ್ತು?
೩೯. ರಾಷ್ಟ್ರೀಯ ವೈಮಾಂತರಿಕ್ಷ ಪ್ರಯೋಗಾಲಯ ಯಾವ ನಗರದಲ್ಲಿದೆ?
೪೦. ವಿಶ್ವ ಜನಸಂಖ್ಯಾ ದಿನವನ್ನು ಎಂದು ಆಚರಿಸುತ್ತಾರೆ?
೪೧. ಜವಾಹರ ರೋಜಗಾರ್ ಯೋಜನೆ ಯಾವ ವರ್ಷ ಆರಂಭಿಸಲಾಯಿತು?
೪೨. ಚದುರಂಗ (ಚೆಸ್) ಆಟದ ತವರೂರು ಯಾವುದು?
೪೩. ಇಸ್ಲಾಂ ಧರ್ಮವನ್ನು ಸ್ಥಾಪಿಸಿದವರು?
೪೪. ಕಲ್ಲಿದ್ದಲು ಉತ್ಪಾದನೆಯಲ್ಲಿ ಅಗ್ರಸ್ಥಾನ ಪಡೆದ ರಾಷ್ಟ್ರ?
೪೫. ಅಸ್ಸಾಂ ರಾಜ್ಯದ ನೃತ್ಯದ ಹೆಸರೇನು?
೪೬. ದಾದಾ ಸಾಹೇಬ ಪಾಲ್ಕೆ ಪ್ರಶಸ್ತಿ ಪಡೆದ ಮೊದಲ ವ್ಯಕ್ತಿ ಯಾರು?
೪೭. 'ಆಪರೇಷನ್ ಫ್ಲಡ್' ಎಂಬ ಪದ ಯಾವುದಕ್ಕೆ ಸೇರಿದ್ದು?
೪೮. ಥಾರ್ ಮರುಭೂಮಿ ಯಾವ ರಾಜ್ಯದಲ್ಲಿದೆ?
೪೯. ಸಸ್ಯಗಳಿಗೂ ಜೀವ ಉಂಟು ಎಂದು ಮೊದಲ ಬಾರಿ ಶೋಧಿಸಿದವರು ಯಾರು?
೫೦. ಅಮೆರಿಕಾದ ಮೊದಲ ಅಧ್ಯಕ್ಷರು ಯಾರು?

## ಉತ್ತರಗಳು :

೧. ದೆಹಲಿ, ೨. ತುಳು, ೩. ಜಿನಿವಾ, ೪. ಅಸ್ಸಾಂ, ೫. ಬಿಹಾರ, ಕರ್ನಾಟಕ, ೬. ಕೇರಳ, ೭. ಲುಂಬಿನಿ, (ನೇಪಾಳ), ೮. ಡಿಸೆಂಬರ್ ೧೦, ೯. ಕಾಂಗ್ರೆಸ್, ೧೦. ಜವಾಹರಲಾಲ್ ನೆಹರು, ೧೧. ದೆಹಲಿ, ೧೨. ಬಲವಂತರಾಯ ಮೆಹತಾ, ೧೩. ಒರಿಸ್ಸಾ, ೧೪. ಅರುಂಧತಿ ರಾಯ್, ೧೫. ಜನರಲ್ ಡಯ್ಯರ್, ೧೬. ಇಲ್ಲ, ೧೭. ಲಾಲ್ ಬಹದ್ದೂರ ಶಾಸ್ತ್ರಿ, ೧೮. ೨೯೬೦ ಕಿ.ಮೀ., ೧೯. ೧೯೧೩, ೨೦. ಅಮೆರಿಕ, ೨೧. ಮಹಾಶ್ವೇತಾ ದೇವಿ, ೨೨. ಆಚಾರ್ಯ ವಿನೋಬಾ ಭಾವೆ, ೨೩. ೫೨.೨೧, ೨೪. ೫೬.೪, ೨೫. ಗೋದಾವರಿ, ೨೬. ೪೪ ಚ.ಕಿ.ಮೀ. ೨೭. ಭಾರತ, ೨೮. ಟ್ರೆನಿಡಾಡ್, ಟೊಬಾಗೊ ಪ್ರಧಾನ ಮಂತ್ರಿ ವಾಸುದೇವ ಪಾಂಡೆ, ೨೯. ಎರಡನೇ ಚಂದ್ರಗುಪ್ತ, ೩೦. ರೀಗಲ್, ೩೧. ಭೂಮಿಯ ದೈನಂದಿನ ಚಲನೆ, ೩೨. ವಿಲಿಯಂ ಹರ್ಷಲ್, ೩೩. ೧೯೭೧ರಲ್ಲಿ, ೩೪. ಮ್ಯಾಗ್ಸೆಸ್ಸೆ, ೩೫. ಆಡಮ್ ಸ್ಮಿತ್, ೩೬. ಹಾಕಿ, ೩೭. ರವೀಂದ್ರನಾಥ್ ಠಾಗೋರ್, ೩೮. ಖಾನ್ ಅಬ್ದುಲ್ ಗಫಾರ್ ಖಾನ್, ೩೯. ಬೆಂಗಳೂರು, ೪೦. ಜುಲೈ ೧೧, ೪೧. ೧೯೮೯, ೪೨. ಭಾರತ, ೪೩. ಮಹಮ್ಮದ್ ಪೈಗಂಬರ, ೪೪. ಅಮೆರಿಕ, ೪೫. ಬಿಹು, ೪೬. ದೇವಿಕಾರಾಣಿ, ೪೭. ಹಾಲು ಉತ್ಪಾದನೆ, ೪೮. ರಾಜಸ್ಥಾನ, ೪೯. ಶರಶ್ಚಂದ್ರ ಬೋಸ್, ೫೦. ಜಾರ್ಜ್ ವಾಷಿಂಗ್ಟನ್.

# ನಿಮ್ಮನ್ನು ಧೀರ ಸೇನಾಧಿಕಾರಿಗಳನ್ನಾಗಿಸುವ ರಾಷ್ಟ್ರೀಯ ರಕ್ಷಣಾ ಅಕಾಡೆಮಿ (NDA)




**ಗ**ಣರಾಜ್ಯೋತ್ಸವದ ದಿನ ಅಥವಾ ಇನ್ನಾವುದೇ ರಾಷ್ಟ್ರೀಯ ದಿನಾಚರಣೆಯ ದಿನ ಕೆಂಪು ಕೋಟೆಯಲ್ಲಿ ಸೈನಿಕರ ಕವಾಯತು ನೋಡಿ, ಅವರ ಶಿಸ್ತು, ಗತ್ತು ನೋಡಿ ನಾನೂ ಹೀಗಾಗಬೇಕು ಎಂದು ನಿಮಗನ್ನಿಸಬಹುದು, ಅದೊಂದು ಗುರಿಯಾಗಿ ಪರಿಣಮಿಸಲೂ ಬಹುದು.

ರಾಷ್ಟ್ರೀಯ ರಕ್ಷಣಾ ಅಕಾಡೆಮಿ ಪರೀಕ್ಷೆಗಳ ಮೂಲಕ ಪ್ರತೀ ವರ್ಷ ಸೇನೆ, ವಾಯು ಮತ್ತು ನೌಕಾದಳಕ್ಕೆ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತದೆ. ಜನವರಿ ೧೯೯೮ರಲ್ಲಿ ಪ್ರಾರಂಭವಾಗುವ ೧೦೧ನೇ ಕೋರ್ಸ್‌ಗಾಗಿ ಸುಮಾರು ೩೬೫ ಹುದ್ದೆಗಳಿಗಾಗಿ ಅರ್ಜಿಗಳನ್ನು ಕರೆಯಲಾಗಿದೆ.

### ಅರ್ಹತೆ

ಅಭ್ಯರ್ಥಿಯು ಭಾರತದ ನಾಗರೀಕನಾಗಿರಬೇಕು ಅಥವಾ ಭೂತಾನ್/ನೇಪಾಳ ಸಂಜಾತನಾಗಿರಬೇಕು, ಟಿಬೆಟ್‌ನಿಂದ ವಲಸೆ ಬಂದವರು ಮತ್ತು ಭಾರತ ಸಂಜಾತರಾಗಿ ವಿದೇಶದಲ್ಲಿ ನೆಲೆಸಿ ನಂತರ ಭಾರತದಲ್ಲಿ ಬಂದು ನೆಲೆಸಿದವರಾಗಿರಬೇಕು.

"ಮದುವೆಯಾಗದ, ಜನವರಿ ೨, ೧೯೮೦ ಮತ್ತು ಜುಲೈ ೧೯೮೨ರ ಅವಧಿಯಲ್ಲಿ ಜನಿಸಿದ ಪುರುಷ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬಹುದು. ಸೇನೆಗೆ ಸೇರಲಿಚ್ಛಿಸುವ ಅಭ್ಯರ್ಥಿಯ ಕನಿಷ್ಠ ಅರ್ಹತೆ ಪದವಿ ಪೂರ್ವ ಶಿಕ್ಷಣ (೧೦+೨)ದ ತೇರ್ಗಡೆ. ವಾಯುದಳ ಮತ್ತು ನೌಕಾದಳಕ್ಕೆ ಸೇರಲಿಚ್ಛಿಸುವ ಅಭ್ಯರ್ಥಿಯು ವಿಜ್ಞಾನದ ವಿದ್ಯಾರ್ಥಿಯಾಗಿರಬೇಕು. (ಭೌತಶಾಸ್ತ್ರ ಮತ್ತು ಗಣಿತ ಶಾಸ್ತ್ರವನ್ನು ಅಧ್ಯಯಿಸಿರಬೇಕು.)

### ಶುಲ್ಕ ವಿವರ

ಪರೀಕ್ಷಾರ್ಥಿಗಳು ರೂ. ೩೫ನ್ನು ಕೇಂದ್ರ ನೇಮಕಾತಿ ಶುಲ್ಕ ಸ್ಟ್ಯಾಂಪ್‌ಗಳ ಮೂಲಕ ಇಲ್ಲವೇ ಕ್ರಾಸ್ ಮಾಡಿದ ಪೋಸ್ಟಲ್ ಆರ್ಡರ್‌ಗಳನ್ನು ಕಾರ್ಯದರ್ಶಿ, ಕೇಂದ್ರ ಲೋಕಸೇವಾ ಆಯೋಗ, ನವದೆಹಲಿ ಇವರ ಹೆಸರಿನಲ್ಲಿ ಸಲ್ಲಿಸಬೇಕು. ಸೇನೆಯಲ್ಲಿ ಸೇವೆ ಸಲ್ಲಿಸುತ್ತಿರುವವರ ಮಕ್ಕಳು ಪರೀಕ್ಷಾ ಶುಲ್ಕವನ್ನು ತೆರುವಂತಿಲ್ಲ. ಸೇನಾ ಶಾಲೆಯಲ್ಲಿ ಓದುತ್ತಿರುವವರು ಶಾಲಾ ಮುಖ್ಯೋಪಾಧ್ಯಾಯರ ಮೂಲಕ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ನೇರವಾಗಿ ಆಯೋಗಕ್ಕೆ ಕಳಿಸಬೇಕು. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಡಿಸೆಂಬರ್ ೧, ೯೭. ಪೂರ್ವಾಂಚಲ ರಾಜ್ಯಗಳ, ಅಂಡಮಾನ್, ನಿಕೋಬಾರ್, ಲಕ್ಷದ್ವೀಪಗಳ ವಾಸಿಗಳಿಗೆ ಕೊನೆಯ ದಿನಾಂಕ ೮ನೇ ಡಿಸೆಂಬರ್ '೯೭.

### ಪರೀಕ್ಷಾ ವಿಧಿ, ವಿಷಯ

ಅಭ್ಯರ್ಥಿಯು ಪರೀಕ್ಷೆಯ ಮೊದಲ ಹಂತದಲ್ಲಿ ೩೦೦ ಅಂಕಗಳ ೨ ೧/೨ ಗಂಟೆ ಅವಧಿಯ ಗಣಿತಶಾಸ್ತ್ರ ಮತ್ತು ೬೦೦ ಅಂಕಗಳ ಸಾಮಾನ್ಯ ಸಾಮರ್ಥ್ಯ ಪರೀಕ್ಷೆಯ ಪತ್ರಿಕೆಯನ್ನು ಉತ್ತರಿಸಬೇಕು. ಪರೀಕ್ಷಾ ಮಾಧ್ಯಮ ಇಂಗ್ಲಿಷ್. ಸಾಮಾನ್ಯ ಸಾಮರ್ಥ್ಯ ಪತ್ರಿಕೆಯಲ್ಲಿ ಸಾಮಾನ್ಯ ಇಂಗ್ಲೀಷ್, ಸಾಮಾನ್ಯ ಜ್ಞಾನ ಪತ್ರಿಕೆಗಳಿವೆ. ಇದಲ್ಲದೆ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಯ ಮೂಲಭೂತ ಜ್ಞಾನವನ್ನು ಅಳೆಯಲು ನೇರ ಸಂದರ್ಶನವಿದ್ದು, ಅದರಲ್ಲಿ ಗುಂಪು ಚರ್ಚೆ, ಭಾಷಣ ಸ್ಪರ್ಧೆ ಇತ್ಯಾದಿ ಪರೀಕ್ಷೆಗಳಿರುತ್ತವೆ.

### ವೈದ್ಯಕೀಯ ಅರ್ಹತೆ

ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿ ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು. ವೈದ್ಯಕೀಯ ದೃಢೀಕರಣ ಸಮಿತಿ 'ಅರ್ಹ'ನೆಂದು ಗಣಿಸಿದ ವ್ಯಕ್ತಿ ಮಾತ್ರ ಅಕಾಡೆಮಿ ಸೇರುತ್ತಾನೆ. ದೇಹದಾರ್ಢ್ಯ ಉತ್ತಮವಿರಬೇಕು. ದೈಹಿಕ/ಮಾನಸಿಕ ರೋಗಗಳಿಂದ ನರಳುತ್ತಿರಬಾರದು, ಕನಿಷ್ಟ ಎತ್ತರ ೧೫೭.೫ ಸೆಂ.ಮೀ. ಇದ್ದು ಎತ್ತರಕ್ಕೆ ತಕ್ಕ ತೂಕವಿರಬೇಕು, ದೃಷ್ಟಿ ದೋಷವಿರಬಾರದು.

ತರಬೇತಿ ಸಮಯದಲ್ಲಿ ತಗಲುವ ಎಲ್ಲ ವೆಚ್ಚಗಳನ್ನು (ಪುಸ್ತಕ, ವಸತಿ, ಊಟ, ಬಟ್ಟೆ) ಸರ್ಕಾರವೇ ಭರಿಸುತ್ತದೆ. ಅಭ್ಯರ್ಥಿಯ ಪೋಷಕರು ಅಭ್ಯರ್ಥಿಯ ಇತರೆ ವೆಚ್ಚಗಳನ್ನು ಭರಿಸುವಲ್ಲಿ ಅಶಕ್ತರಾದಲ್ಲಿ, ಸರ್ಕಾರ ಅಭ್ಯರ್ಥಿಗೆ ಮಾಸಿಕ ವಿದ್ಯಾರ್ಥಿವೇತನ ನೀಡುತ್ತದೆ.

### ತರಬೇತಿ

ಸೇನೆ, ನೌಕಾದಳ ಮತ್ತು ವಾಯುದಳಕ್ಕೆ ಸೇರಿದ ಅಭ್ಯರ್ಥಿಗಳು ೩ ವರ್ಷ ತರಬೇತಿಗೆ ಒಳಪಡಬೇಕು. ೩ ವರ್ಷದ ತರಬೇತಿ ನಂತರ ಅವರಿಗೆ ಜವಹರಲಾಲ್ ವಿಶ್ವವಿದ್ಯಾನಿಲಯದ ಬಿಎ/ಬಿಎಸ್‌ಸಿ ಪದವಿಯನ್ನು ಕೊಡುತ್ತಾರೆ. ತೇರ್ಗಡೆಯಾದ ಸೇನಾ ಕೆಡೆಟ್‌ಗಳು ಡೆಹರಾಡೂನ್‌ನ ಭಾರತೀಯ ಸೇನಾ ಅಕಾಡೆಮಿಗೆ, ವಾಯುದಳ ಅಭ್ಯರ್ಥಿಗಳು ಹೈದರಾಬಾದ್/ಅಲಹಾಬಾದ್‌ನ ವಾಯುದಳ ಅಕಾಡೆಮಿಗೆ ಸೇರುತ್ತಾರೆ. ಸೇನಾ ಕೆಡೆಟ್‌ಗಳು ೧ ವರ್ಷದ ಕಠಿಣ ತರಬೇತಿಯ ನಂತರ ದ್ವಿತೀಯ ದರ್ಜೆಯ ಲೆಫ್ಟಿನೆಂಟ್‌ಗಳಾಗಿ, ನೌಕಾದಳದ ಕೆಡೆಟ್‌ಗಳು ಸಬ್‌ಲೆಫ್ಟಿನೆಂಟ್‌ಗಳಾಗಿ ಮತ್ತು ವಾಯುದಳದ ಕೆಡೆಟ್‌ಗಳು ಕಮೀಷನ್ಡ್ ಆಫೀಸರ್‌ಗಳಾಗಿ ಆಯಾಯ ವಿಭಾಗಕ್ಕೆ ಆಯ್ಕೆಯಾಗುತ್ತಾರೆ. ಸೇವಾವಧಿ ಹೆಚ್ಚಿದಂತೆ ಅತ್ಯಂತ ಉನ್ನತ ಶ್ರೇಣಿಯ ಅಧಿಕಾರಿಗಳಾಗಿ ದೇಶಕ್ಕೆ ಸೇವೆ ಸಲ್ಲಿಸುವ ಸಾಧ್ಯತೆ ಇದೆ.

ಸೇವಾವಧಿ ಮುಗಿದ ನಂತರ ಉಳಿದ ಸರ್ಕಾರಿ ನೌಕರರಂತೆ ಅವರಿಗೆ ಪೆನ್ಷನ್, ಗ್ರಾಚುಯಿಟಿಯ ಸೌಲಭ್ಯವಿದೆ.

ದೇಶಸೇವೆಯ ಅವಕಾಶ ಎಲ್ಲರಿಗೂ ಸಿಗುವುದಿಲ್ಲ. ಯುದ್ಧ ಕಾಲದಲ್ಲಿದ್ದಂತೆ ಶಾಂತಿಯ ಕಾಲದಲ್ಲೂ ಸೈನಿಕರ ಜವಾಬ್ದಾರಿ ಹೆಚ್ಚು. ಅದರಿಂದ ಅವರ ಕೆಲಸಕ್ಕೆ ಗೌರವವೂ ಹೆಚ್ಚು.

ನಿಮಗಿಚ್ಛೆಯಿದ್ದಲ್ಲಿ, ಅರ್ಹತೆಯಿದ್ದಲ್ಲಿ ನೀವೂ ದೇಶ ಸೇವೆ ಮಾಡಬಹುದು.

(ಅಭ್ಯರ್ಥಿ ಪತ್ರ ಉಳಿದ ವಿವರಗಳಿಗಾಗಿ ೧೮-೨೪, ಅಕ್ಟೋಬರ್ '೯೭ರ ಎಂಪ್ಲಾಯ್‌ಮೆಂಟ್ ನ್ಯೂಸ್ ನೋಡಿ.)

○ **ಮಾಧವ ಐತಾಳ್**

# ವಾಣಿಜ್ಯ ತೆರಿಗೆ ಅಧಿಕಾರಿ ಆಗುವುದು ಹೇಗೆ?

**ಆಯಾ ವೃತ್ತಿ, ಹುದ್ದೆಗಳಲ್ಲಿ ಯಶಸ್ವಿಯಾದವರ ಮೂಲಕವೇ ವಿದ್ಯಾರ್ಥಿಗಳಿಗೆ ಅಧಿಕೃತವಾಗಿ ವೃತ್ತಿ ಮಾರ್ಗದರ್ಶನ ಮಾಡಿಸುವ ವಿನೂತನ ಪ್ರಯೋಗವಿದು.**

**ಈ ಬಾರಿ ವಾಣಿಜ್ಯ ತೆರಿಗೆ ಅಧಿಕಾರಿ ಡಿ.ಎಂ.ಶ್ರೀಧರ್ ಅವರು ನಿಮಗೆ ಈ ಮಾಹಿತಿ ನೀಡಿದ್ದಾರೆ**

### ಕೆಲಸದ ಸ್ವರೂಪ :

ವಿವಿಧ ವ್ಯಾಪಾರ ವಹಿವಾಟುಗಳ ಮೇಲೆ ತೆರಿಗೆ ಹಾಕಿ ರಾಜ್ಯ ಬೊಕ್ಕಸಕ್ಕೆ ಹಣ ಸಂಗ್ರಹಿಸುವ ಪ್ರಮುಖ ಕಾರ್ಯ ನಿರ್ವಹಿಸುವ ವಾಣಿಜ್ಯ ತೆರಿಗೆ ಇಲಾಖೆ ಹಣಕಾಸು ಸಚಿವಾಲಯದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತದೆ. ವಾಣಿಜ್ಯ ತೆರಿಗೆ ಅಧಿಕಾರಿಯು ವಿದ್ಯಾವಂತರು ಮತ್ತು ಚಾಕಚಕ್ಯತೆಯುಳ್ಳ ವ್ಯಾಪಾರಿಗಳೊಂದಿಗೆ ವ್ಯವಹರಿಸುವುದರಿಂದಾಗಿ ಹೆಚ್ಚು ಬುದ್ಧಿವಂತಿಕೆಯಿಂದ ಕೆಲಸ ಮಾಡಬೇಕಾಗುತ್ತದೆ. ಈ ಅಧಿಕಾರಿಯು ಕೆಲವು ಸಂದರ್ಭಗಳಲ್ಲಿ ಕಂದಾಯ ಇಲಾಖೆ ಮತ್ತು ಪೊಲೀಸ್ ಇಲಾಖೆಯೊಂದಿಗೆ ಪರಸ್ಪರ ಸಹಕಾರದಿಂದ ಕಾರ್ಯ ನಿರ್ವಹಿಸಿ ತೆರಿಗೆಯನ್ನು ಸಂಗ್ರಹಿಸಬೇಕಾಗುತ್ತದೆ. ವಾಣಿಜ್ಯ ತೆರಿಗೆ ಇಲಾಖೆಯು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸದಿದ್ದಲ್ಲಿ ಹಣಕಾಸು ಸಚಿವನು ತನ್ನ ಸ್ಥಾನದಲ್ಲಿ ಉಳಿಯಲು ಸಾಧ್ಯವಾಗುವುದಿಲ್ಲ. ದಕ್ಷತೆಯಿಂದ ಕಷ್ಟಪಟ್ಟು ಕೆಲಸ ಮಾಡುವವರು ಈ ಇಲಾಖೆಯ ಪ್ರಮುಖ ಸ್ಥಾನದಲ್ಲಿರುತ್ತಾರೆ ಎಂಬುದರಲ್ಲಿ ಎರಡು ಮಾತಿಲ್ಲ.

### ಆಯ್ಕೆ ವಿಧಾನ

ಕರ್ನಾಟಕ ಲೋಕಸೇವಾ ಆಯೋಗವು ವಾಣಿಜ್ಯ ತೆರಿಗೆ ಅಧಿಕಾರಿಗಳ ಆಯ್ಕೆ ಪ್ರಕ್ರಿಯೆಯನ್ನು ನಡೆಸುತ್ತದೆ. ಆಯೋಗವು ಈ ಇಲಾಖೆಯ ಗೆಜೆಟೆಡ್ ಪ್ರೊಬೆಷನರ್ಸ್ (ಕೆ.ಎ.ಎಸ್) ಹುದ್ದೆಗಳಿಗಾಗಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸುತ್ತದೆ. ಕ್ಲಾಸ್ I ಪರೀಕ್ಷೆಯಲ್ಲಿ ತೇರ್ಗಡೆ ಆದವರು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿಯೂ ಕ್ಲಾಸ್ II ಪರೀಕ್ಷೆಯಲ್ಲಿ ತೇರ್ಗಡೆ ಆದವರು ವಾಣಿಜ್ಯ ತೆರಿಗೆ ಅಧಿಕಾರಿಯಾಗಿಯೂ ಕಾರ್ಯ ನಿರ್ವಹಿಸುತ್ತಾರೆ.

ಇಪ್ಪತ್ತೊಂದು ವರ್ಷ ತುಂಬಿದ ಮೂವತ್ಮೂರು ವರ್ಷ ಮೀರದ ಎಲ್ಲಾ ಪದವೀಧರರು ಕೆ.ಎ.ಎಸ್. ಪರೀಕ್ಷೆ ಕೂರಲು ಅರ್ಹರಾಗಿರುತ್ತಾರೆ. ಈ ಪರೀಕ್ಷೆಯನ್ನು ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲಿ ನಡೆಸಲಾಗುತ್ತದೆ. ಅಭ್ಯರ್ಥಿಗಳು ಇಚ್ಛಿಸಿದ ಭಾಷೆಯಲ್ಲಿ ಉತ್ತರಿಸಬಹುದು. ಹುದ್ದೆಗಳು ಖಾಲಿ ಇದ್ದಾಗ ಮಾತ್ರ ಲೋಕಸೇವಾ ಆಯೋಗವು ಆಯ್ಕೆ ಪ್ರಕ್ರಿಯೆಯನ್ನು ನಡೆಸುತ್ತದೆ. ಕಳೆದ ನಾಲ್ಕು ವರ್ಷಗಳಿಂದ ಈ ಆಯ್ಕೆ ನಡೆದೇ ಇಲ್ಲ. ಇನ್ನು ಕೆಲವೇ ದಿನಗಳಲ್ಲಿ ಕೆ.ಎ.ಎಸ್. ಹುದ್ದೆಗಳಿಗೆ ಅರ್ಜಿ ಕರೆಯುವ ಸಾಧ್ಯತೆ ಇದೆ ಎಂದು ಹೇಳಲಾಗುತ್ತಿದೆ.

ವಾಣಿಜ್ಯ ತೆರಿಗೆ ಅಧಿಕಾರಿ ಆಗುವವರು ಕೆ.ಎ.ಎಸ್. ಪರೀಕ್ಷೆಗೆ ಅರ್ಜಿ ಸಲ್ಲಿಸುವಾಗಲೇ ತಾವು ಇಚ್ಛಿಸುವ ಹುದ್ದೆಯನ್ನು ನಿರ್ದಿಷ್ಟ ಕಾಲಂನಲ್ಲಿ ನಮೂದಿಸಬೇಕು. ಅರ್ಜಿಯಲ್ಲಿ ಅಭ್ಯರ್ಥಿಯು ಬಯಸುವ ಹುದ್ದೆಗಳ ಪಟ್ಟಿಯನ್ನು ನೀಡಲಾಗಿರುತ್ತದೆ. ಅಭ್ಯರ್ಥಿಯು ತಾನು ಇಚ್ಛಿಸುವ ಹುದ್ದೆಗಳನ್ನು ಆದ್ಯತೆಯ ಮೇರೆಗೆ ಗುರುತಿಸಬೇಕಾಗುತ್ತದೆ. ವಾಣಿಜ್ಯ ತೆರಿಗೆ ಇಲಾಖೆ ಅಧಿಕಾರಿ ಆಗಬಯಸುವ ನೀವು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಕ್ಲಾಸ್ Iನಲ್ಲಿ) ಮತ್ತು ವಾಣಿಜ್ಯ ತೆರಿಗೆ ಅಧಿಕಾರಿ (ಕ್ಲಾಸ್ IIನಲ್ಲಿ) ಎಂಬ ಹುದ್ದೆಯ ಮುಂದೆ ಪ್ರಥಮ ಆದ್ಯತೆ ಎಂದು ಸೂಚಿಸಬೇಕು. ಲೋಕಸೇವಾ ಆಯೋಗವು ನಿಮ್ಮ ಅರ್ಹತೆಯ ಆಧಾರದ ಮೇಲೆ ಆದ್ಯತೆಯನ್ನು ಪರಿಗಣಿಸುತ್ತದೆ.

### ಪರೀಕ್ಷಾ ಕ್ರಮ

ರಾಜ್ಯ ಸರ್ಕಾರವು ೧೯೯೭ರ ಜುಲೈನಿಂದ ಜಾರಿಗೆ ಬರುವಂತೆ ಕೆ.ಎ.ಎಸ್. ಪರೀಕ್ಷಾ ಕ್ರಮದಲ್ಲಿ ಹಲವಾರು ಬದಲಾವಣೆ ಮಾಡಿದೆ. ಈ ಕ್ರಮವನ್ನು ಇಲ್ಲಿ ವಿವರಿಸಲಾಗಿದೆ.

ಅರ್ಜಿ ಸಲ್ಲಿಸಿದ ಅರ್ಹ ಅಭ್ಯರ್ಥಿಗಳಿಗೆ ಮೊದಲ ಹಂತವಾಗಿ ಪೂರ್ವಭಾವಿ ಪರೀಕ್ಷೆ ನಡೆಸಲಾಗುತ್ತದೆ. ಒಟ್ಟು ೪೫೦ ಅಂಕಗಳ ಈ ಪರೀಕ್ಷೆಯಲ್ಲಿ ಎರಡು ವಿಷಯಗಳಿರುತ್ತವೆ. ಎರಡೂ ವಿಷಯಗಳಲ್ಲಿ ಆಬ್ಜೆಕ್ಟೀವ್ ಮಾದರಿಯಲ್ಲಿ ಪ್ರಶ್ನೆಗಳನ್ನು ಕೊಡಲಾಗಿರುತ್ತದೆ. ಮೊದಲ ವಿಷಯದಲ್ಲಿ ೧೫೦ ಅಂಕಗಳ ಸಾಮಾನ್ಯ ಜ್ಞಾನ ಮತ್ತು ಎರಡನೆಯ ವಿಷಯದಲ್ಲಿ ಅಭ್ಯರ್ಥಿಯ ಆರಿಸಿಕೊಂಡ ಯಾವುದಾದರೂ ಒಂದು ಐಚ್ಛಿಕ ವಿಷಯದ ಮೇಲೆ ೩೦೦ ಅಂಕಗಳ ಪ್ರಶ್ನೆಗಳಿರುತ್ತವೆ. ನೀವು ಕನ್ನಡ ಅಥವಾ ಇಂಗ್ಲೀಷ್ ಭಾಷೆಯಲ್ಲಿ ಉತ್ತರಿಸಬಹುದು.

ಪೂರ್ವಭಾವಿ ಪರೀಕ್ಷೆಯಲ್ಲಿ ತೇರ್ಗಡೆಯಾದವರೆಲ್ಲಾ ಮುಖ್ಯ ಪರೀಕ್ಷೆಗೆ ಅರ್ಹರಾಗುವುದಿಲ್ಲ. ಖಾಲಿ ಇರುವ ಒಂದು ಹುದ್ದೆಗೆ ೨೦ ಮಂದಿ ಎಂಬ ಆಧಾರದ ಮೇಲೆ ಮುಖ್ಯ ಪರೀಕ್ಷೆಗೆ ಆಯ್ಕೆ ನಡೆಯುತ್ತದೆ.

ಮುಖ್ಯ ಪರೀಕ್ಷೆಯಲ್ಲಿ ನೀವು ಕನ್ನಡ, ಇಂಗ್ಲೀಷ್ ಸಾಮಾನ್ಯ ಜ್ಞಾನ ಹಾಗೂ ನಾಲ್ಕು ಐಚ್ಛಿಕ ವಿಷಯಗಳು ಒಟ್ಟು ೨೧೦೦ ಅಂಕಗಳ ಎಂಟು ಪ್ರಶ್ನೆಪತ್ರಿಕೆಗಳಿಗೆ ಉತ್ತರಿಸಬೇಕು.

ಪರೀಕ್ಷೆಯ ಅಂತಿಮ ಮೂರನೆಯ ಹಾಗೂ ಅಂತಿಮ ಹಂತ ವ್ಯಕ್ತಿತ್ವ ಪರೀಕ್ಷೆ (Personality test) ಮುಖ್ಯ ಪರೀಕ್ಷೆಯಲ್ಲಿ ತೇರ್ಗಡೆಯಾದ ಗುಂಪಿನಲ್ಲಿ ಒಂದು ಹುದ್ದೆಗೆ ಐದು ಮಂದಿ ಎಂಬ ಆಧಾರದ ಮೇಲೆ ವ್ಯಕ್ತಿತ್ವ ಪರೀಕ್ಷೆಗೆ ಆಯ್ಕೆ ಮಾಡಲಾಗುವುದು.

ಇದಕ್ಕೂ ಮುನ್ನ ನಡೆಸಿದ ಎರಡೂ ಪರೀಕ್ಷೆಯಲ್ಲಿ ಸಂಪೂರ್ಣ ಯಶಸ್ವಿಯಾದ ನೀವು ಲೋಕಸೇವಾ ಆಯೋಗ ನೇಮಿಸಿದ ಸಂದರ್ಶನ ಸಮಿತಿಯ ಮುಂದೆ ಖುದ್ದಾಗಿ ಹಾಜರಾಗಿ ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಬೇಕು. ಇನ್ನೂರು ಅಂಕಗಳ ಈ

ಪರೀಕ್ಷೆಯಲ್ಲಿ ನಿಮ್ಮ ಚಾಕಚಾಕ್ಯತೆ, ಸಾಮಾಜಿಕ ಪ್ರಜ್ಞೆ, ವಿವಿಧ ವಿಷಯಗಳ ಮೇಲಿನ ಆಳ, ಆಸಕ್ತಿ, ನಾಯಕತ್ವ ಮತ್ತು ಬುದ್ಧಿಶಕ್ತಿಯ ಆಳವನ್ನು ಪರೀಕ್ಷಿಸಲಾಗುವುದು. ಒಂದು ರೀತಿಯಲ್ಲಿ ಸತ್ವ ಪರೀಕ್ಷೆಯಂತಿರುವ ಈ ವೈಯಕ್ತಿಕ ಸಂದರ್ಶನದಲ್ಲಿ ಸಂದರ್ಶಿಸುವವರು ಜಗತ್ತಿನ ಯಾವುದೇ ವಿಷಯದ ಬಗ್ಗೆ ಬೇಕಾದರೂ ಪ್ರಶ್ನಿಸಬಹುದು. ಮುಖ್ಯವಾಗಿ ವಾಣಿಜ್ಯ ತೆರಿಗೆ ಅಧಿಕಾರಿ ಆಗಬಯಸುವ ನಿಮ್ಮನ್ನು ತೆರಿಗೆ ಪದ್ಧತಿಯ ಬಗ್ಗೆಯೇ ಹೆಚ್ಚು ಪ್ರಶ್ನಿಸಬಹುದಾಗಿದೆ. ಈ ಪರೀಕ್ಷೆಯ ನಂತರ ವೈದ್ಯಕೀಯ ಪರೀಕ್ಷೆ ನಡೆಸಿ ಆಯ್ಕೆಯ ಅಂತಿಮ ಪಟ್ಟಿಯನ್ನು ಪ್ರಕಟಿಸಲಾಗುವುದು.

ಈ ಮೂರು ಹಂತಗಳ ಪರೀಕ್ಷೆಗಳನ್ನು ಎದುರಿಸಲು ಅತ್ಯಂತ ಶ್ರದ್ಧೆ ಹಾಗೂ ಶಿಸ್ತಿನ ಸಿದ್ಧತೆ ಅತ್ಯಗತ್ಯ. ಮೊದಲ ವರ್ಷದ ಪದವಿಯಲ್ಲಿಯೇ ನೀವು ಸಾಮಾನ್ಯಜ್ಞಾನದ ವಿಷಯಗಳ ಮೇಲೆ ಆಸಕ್ತಿ ವಹಿಸಬೇಕು. ಐಚ್ಛಿಕ ವಿಷಯಗಳನ್ನು ಕರತಲಾಮಲಕ ಮಾಡಿಕೊಳ್ಳಬೇಕು. ಪದವಿ ನಂತರ ಈ ಪರೀಕ್ಷೆಗೆ ಸಿದ್ಧಗೊಳ್ಳುವ ಕೆಲಸದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕು.



ಈಗಾಗಲೇ ಇಂತಹ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಅಧಿಕಾರಿಯಾಗಿರುವವರನ್ನು ಸಂಪರ್ಕಿಸಿ ಸಮಾಲೋಚನೆ ನಡೆಸಬೇಕು. ಇದೇ ರೀತಿ ಪರೀಕ್ಷೆ ತೆಗೆದುಕೊಂಡ ಇತರರೊಂದಿಗೆ ವಿಚಾರ ವಿನಿಮಯ ಮಾಡಬೇಕು. ಮಾದರಿ ಪ್ರಶ್ನೆಪತ್ರಿಕೆಗಳಿಗೆ ಉತ್ತರಿಸುವ ಮೂಲಕ ಅಭ್ಯರ್ಥಿಯು ಹೆಚ್ಚು ಹೆಚ್ಚು ಪಕ್ವಗೊಳ್ಳಬಹುದು. ಉತ್ತರಗಳು ಅನಾವಶ್ಯಕವಾಗಿ ಉದ್ದವಾಗಿರದೆ ಅಗತ್ಯಕ್ಕೆ ತಕ್ಕಷ್ಟು ಮಾತ್ರ ಇರಬೇಕು.

ಪೂರ್ವಭಾವಿ ಪರೀಕ್ಷೆಯನ್ನು ಚೆನ್ನಾಗಿ ಬರೆದಿದ್ದೇನೆ ಎಂಬ ಆತ್ಮವಿಶ್ವಾಸವಿದ್ದರೆ ಕಾಹರಣ ಮಾಡದೆ ಮುಖ್ಯ ಪರೀಕ್ಷೆಗೆ ಸಿದ್ಧರಾಗಬೇಕು. ಪೂರ್ವಭಾವಿ ಪರೀಕ್ಷೆ ಮತ್ತು ಮುಖ್ಯ ಪರೀಕ್ಷೆ ನಡುವಿನ ಕಾಲಾವಕಾಶ ತೀರಾ ಕಡಿಮೆ ಇರುವ ಸಾಧ್ಯತೆ ಇರುವುದರಿಂದ ಮುಂಜಾಗ್ರತಾ ಅಭ್ಯಾಸ ಅತ್ಯಗತ್ಯವಾಗಿದೆ.

ವೈಯಕ್ತಿಕ ಸಂದರ್ಶನಕ್ಕೆ ಹಾಜರಾಗುವ ಅಭ್ಯರ್ಥಿಗಳು ಆತ್ಮವಿಶ್ವಾಸದಿಂದ ಯಾವುದೇ ಹಿಂಜರಿಕೆ ಇಲ್ಲದೆ ಶಿಸ್ತುಬದ್ಧರಾಗಿ ಹೋಗಬೇಕು. ಸಂದರ್ಶಕರು ಕೇಳಿದ ಪ್ರಶ್ನೆಗೆ ಉತ್ತರ ಸಮರ್ಪಕವಾಗಿ ಗೊತ್ತಿದ್ದರೆ ಮಾತ್ರ ಹೇಳಬೇಕೇ ಹೊರತು, ಉದ್ದೇಶ ಪೂರ್ವಕವಾಗಿ ತಪ್ಪು ತಪ್ಪಾಗಿ ಉತ್ತರಿಸಬಾರದು. ನೀವು ನಿಮಗೆ ತಿಳಿದ ವಿಷಯವನ್ನು ನಿಖರವಾಗಿ ಮಂಡಿಸಿ. ಸ್ಪಷ್ಟವಾಗಿ ಮಾತನಾಡಬೇಕು. ಯಾವುದೇ ಮುಚ್ಚುಮರೆ ಇರಬಾರದು.

ಸಂದರ್ಶಕರು ಪ್ರಚಲಿತ ವಿಷಯಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿದಾಗ




ಯಾವುದೇ ವಿವಾದಕ್ಕೆ ಎಡೆಯಾಗುವ ಚರ್ಚೆ ನಡೆಸದೆ ವಿಷಯವನ್ನು ಮಾತ್ರ ಮಂಡಿಸಬೇಕು. ಅದರ ಬಗ್ಗೆ ನೀವು ಆಳವಾದ ತಿಳುವಳಿಕೆ ಹೊಂದಿದ್ದರೆ ಮಾತ್ರ ನಿಮ್ಮ ವಾದಕ್ಕೆ ಸಮರ್ಥನೆ ಸಿಗುತ್ತದೆ. ಉದಾಹರಣೆಗೆ, ಕಾಶ್ಮೀರ ವಿಷಯ ಕುರಿತಂತೆ ಒಂದು ಪ್ರಶ್ನೆ ಕೇಳಿದರೆ, ನೀವು ಕಾಶ್ಮೀರದ ಸಮಸ್ಯೆಯ ಹುಟ್ಟಿನಿಂದ ಈವರೆಗೂ ತಿಳಿದುಕೊಂಡಿರುವುದು ಮುಖ್ಯವಾಗುತ್ತದೆ.

## ವಾಣಿಜ್ಯ ತೆರಿಗೆ ಅಧಿಕಾರಿ

# ಡಿ.ಎಂ. ಶ್ರೀಧರ್

**ಇಂಗ್ಲಿಷ್ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಹಾಗೂ ಕಾನೂನು ಪದವಿಯನ್ನು ಪಡೆದಿರುವ ೪೨ ವರ್ಷದ ಡಿ.ಎಂ. ಶ್ರೀಧರ್ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ೧೯೭೦ರ ದಶಕದಲ್ಲಿ ಭಾರತದಲ್ಲಿ ನಡೆದ ಜಯಪ್ರಕಾಶ್ ನಾರಾಯಣ್ ಅವರ ವಿಚಾರ ಆಂದೋಲನದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದ ಶ್ರೀಧರ್ ಸಾಹಿತಿ ಪಿ. ಲಂಕೇಶ್ ನಿರ್ದೇಶಿಸಿದ 'ಎಲ್ಲಿಂದಲೊ ಬಂದವರು' ಚಿತ್ರ, ನಿರ್ಮಾಪಕರಲ್ಲೊಬ್ಬರು.**

**ಹೀಗೆ ಸಾಂಸ್ಕೃತಿಕ, ಸಾಮಾಜಿಕ ಮತ್ತು ಅನೇಕ ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಇದರೊಂದಿಗೆ ವಾಣಿಜ್ಯ ತೆರಿಗೆ ಅಧಿಕಾರಿ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಿಕೊಂಡು ಬರುತ್ತಿರುವ ಶ್ರೀಧರ್ ಅವರು ಸ್ವಯಂ ಸೇವಾ ಸಂಸ್ಥೆಯೊಂದಕ್ಕೆ ನೆರವಾಗಿ ನಿಂತಿದ್ದಾರೆ.**

**ಗ್ರಾಮೀಣ ಬಡಜನರಿಗೆ ಸಾಲದ ನೆರವು ನೀಡಿ ಅವರ ಬಡತನವನ್ನು ನಿರ್ಮೂಲ ಮಾಡುವ ಸಂಕಲ್ಪದಿಂದ ಕೆಲಸ ಮಾಡುತ್ತಿರುವ 'ಗ್ರಾಮ' ಎಂಬ ಸ್ವಯಂಸೇವಾ ಸಂಸ್ಥೆಯೊಂದಿಗೆ ಇವರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.**

**ಶ್ರೀಧರ್ ಅವರ ಈ ಕಾರ್ಯದಿಂದಾಗಿ, ಸುಮಾರು ಐದು ಸಾವಿರ ಗ್ರಾಮೀಣ ಮಹಿಳೆಯರು ಸ್ವಾವಲಂಬಿತರಾಗಿ ಬದುಕು ಸಾಗಿಸುತ್ತಿದ್ದಾರೆ. ವಾಷಿಂಗ್ಟನ್‌ನಲ್ಲಿ ನಡೆದ ಸಣ್ಣ ಸಾಲ ಒಪ್ಪಂದ ಕುರಿತ ಸಮಾವೇಶ, ನೆದರ್‌ಲ್ಯಾಂಡ್‌ನಲ್ಲಿ ನಡೆದ ಆದಾಯ ಹೆಚ್ಚಳ ಕಾರ್ಯಕ್ರಮಗಳಲ್ಲಿ ಇವರು ಪಾಲ್ಗೊಂಡಿದ್ದಾರೆ.**

**ಶ್ರೀಧರ್ ಸ್ವಯಂಸೇವಾ ಸಂಸ್ಥೆಗಳ ಕಾರ್ಯಕರ್ತರಾಗಿ ನ್ಯೂಯಾರ್ಕ್ ಹಾಗೂ ಬಾಂಗ್ಲಾದೇಶದ ಇತರ ಭಾಗಗಳಿಗೆ ಭೇಟಿ ನೀಡಿ ಅಲ್ಲಿನ ಬಡಜನತೆಯನ್ನು ಅಭಿವೃದ್ಧಿ ಹೊಂದಲು ಪ್ರೇರೇಪಿಸಿದ್ದಾರೆ.**

**ಕೋಶ ಓದಿ-ದೇಶ ಸುತ್ತಿ ಅಪಾರ ಅನುಭವ ಪಡೆದಿರುವ ಶ್ರೀಧರ್ 'ಬದುಕು' ಓದುಗರಿಗಾಗಿ ವಾಣಿಜ್ಯ ತೆರಿಗೆ ಅಧಿಕಾರಿ ಆಗುವ ಬಗೆಯನ್ನು ವಿವರಿಸಿದ್ದಾರೆ.**

ಹೀಗಾಗಿ ನೀವು ಆಯ್ದುಕೊಳ್ಳುವ ಎಲ್ಲಾ ವಿಷಯಗಳ ಬಗ್ಗೆ ಆಳವಾಗಿ ಅಭ್ಯಸಿಸಬೇಕು.

ನಿಮ್ಮ ಮನಸ್ಥಿತಿಯನ್ನು ಅಭ್ಯಸಿಸುವ ಸಲುವಾಗಿ ಸಂದರ್ಶಕರು ನಿಮ್ಮ ವೈಯಕ್ತಿಕ ಬದುಕಿನ ಬಗ್ಗೆಯೂ ಪ್ರಶ್ನೆ ಕೇಳಬಹುದು. ನಿಮ್ಮ ವಾಸ್ತವಿಕ ಮತ್ತು ಅವಾಸ್ತವಿಕ ಪ್ರಜ್ಞೆಯನ್ನು ಪರೀಕ್ಷಿಸುವ ಸಲುವಾಗಿ ಅವರು ನಿಮ್ಮನ್ನು ಅನೇಕ ರೀತಿಯಲ್ಲಿ ಪ್ರಶ್ನಿಸಬಹುದು. ನೀವು ಆಗ ಎಲ್ಲಕ್ಕೂ ವಿಚಾರ ಮಾಡಿ ಉತ್ತರಿಸಬೇಕು. ಆದಷ್ಟು ನೇರ ನಡೆ-ನುಡಿ ಇಲ್ಲಿ ಅತ್ಯಗತ್ಯ. ಸಂದರ್ಶಕರು ಪ್ರಶ್ನೆ ಹಾಕುವಾಗ ನೀವು ಮಧ್ಯ ಮಾತನಾಡಲು ಹೋಗಬೇಡಿ. ಪ್ರಶ್ನೆಯನ್ನು ಏಕಾಗ್ರತೆಯಿಂದ ಆಲಿಸಿ ಒಂದೆರಡು ನಿಮಿಷ ಯೋಚಿಸಿ ಉತ್ತರಿಸಿದರೆ ಒಳ್ಳೆಯದು.

ಸಂದರ್ಶಕರು ನಿಮ್ಮೊಂದಿಗೆ ಯಾವುದಾದರೂ ಒಂದು ವಿಷಯದ ಮೇಲೆ ಚರ್ಚೆಗಿಳಿದರೆ ನೀವು ಮಂಡಿಸಿದ ವಾದ ಸರಿ ಇರಲಿ, ಅಥವಾ ತಪ್ಪೇ ಇರಲಿ. ನೀವು ಮಾತ್ರ ತರ್ಕಬದ್ಧವಾಗಿ ಸಮರ್ಥಿಸಿಕೊಳ್ಳಬೇಕು.

ಇಂತಹ ಹಲವು ನಿಯಮಗಳನ್ನು ಅಳವಡಿಸಿಕೊಂಡು ಸಮರ್ಥವಾಗಿ ಅಭ್ಯಾಸ ಮಾಡಿದ್ದಲ್ಲಿ ನೀವೆಲ್ಲ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ರಾಜ್ಯದ ಬೊಕ್ಕಸಕ್ಕೆ ಹಣ ತೊಡಗಿಸಲು ಮುಂದಾಗುತ್ತೀರಾ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ●

## ಬಿಜಾಪುರ ಸೈನಿಕ ಶಾಲೆಗೆ ಅರ್ಜಿ

ವಿಜಾಪುರದಲ್ಲಿರುವ ಸೈನಿಕ ಶಾಲೆಯ ೧೯೯೮ನೇ ಸಾಲಿಗೆ ೬ನೇ ಮತ್ತು ೯ನೇ ತರಗತಿ ಸೇರಲು ಬಯಸುವ ವಿದ್ಯಾರ್ಥಿಗಳಿಂದ ಪ್ರವೇಶ ಪರೀಕ್ಷೆಗೆ ಅರ್ಜಿ ಆಹ್ವಾನಿಸಿದೆ.

ಪ್ರವೇಶ ಪರೀಕ್ಷೆಯು ಫೆಬ್ರವರಿ ೧೫, ೧೯೯೮ರಂದು ನಡೆಯಲಿದೆ. ಹೆಚ್ಚಿನ ವಿವರಗಳಿಗೆ ಪ್ರಾಚಾರ್ಯರು, ಸೈನಿಕ ಶಾಲೆ, ವಿಜಾಪುರ-೫೮೬ ೧೦೨ ಈ ವಿಳಾಸವನ್ನು ಸಂಪರ್ಕಿಸಬಹುದು. ಡಿಸೆಂಬರ್ ೩೧ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನವಾಗಿರುತ್ತದೆ.

## ಆರೋಗ್ಯ ಸಹಾಯಕಿಯರ ತರಬೇತಿ

ರಾಜ್ಯದ ೧೯ ಜಿಲ್ಲೆಗಳಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಶಾಲೆಗಳಲ್ಲಿ ೧೮ ತಿಂಗಳುಗಳ ತರಬೇತಿಗಾಗಿ ಮಹಿಳಾ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ. ಅರ್ಜಿಗಳನ್ನು ದಿ. ೩-೧೧-೯೭ರಿಂದ ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಚೇರಿಯಿಂದ ಪಡೆದು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. ದ್ವಿಪ್ರತಿಗಳ ಅರ್ಜಿಯ ಬೆಲೆ ರೂ. ೧೦.೦೦. ನಗದು ಪಾವತಿ ಮಾಡಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಆಯಾ ಜಿಲ್ಲೆಗಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಚೇರಿಯಲ್ಲಿ ದಿ. ೨-೧೨-೯೭ರ ವರೆಗೆ ಮಾತ್ರ ಸ್ವೀಕರಿಸಲಾಗುವುದು.

**ಅರ್ಹತೆ:** ೧. ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಹೆಚ್ಚಿನ ವಿದ್ಯಾರ್ಹತೆ ಉಳ್ಳವರಿಗೆ ಪ್ರಾಶಸ್ತ್ಯವನ್ನು ನೀಡಲಾಗುವುದು. ೨. ವಯೋಮಿತಿ: ಕನಿಷ್ಠ ೧೮ ವರ್ಷಗಳು ಮತ್ತು ಗರಿಷ್ಠ ೩೫ ವರ್ಷಗಳು. (ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕಡೆ ದಿನಾಂಕಕ್ಕೆ ವಯೋಮಿತಿಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದು) ೩. ಇತರೆ ನಿಬಂಧನೆಗಳು: ೧. ಅಭ್ಯರ್ಥಿಗಳು ಭಾರತೀಯ ನಾಗರೀಕರಾಗಿದ್ದು ಕನಿಷ್ಠ ೫ ವರ್ಷಗಳು ಕರ್ನಾಟಕ ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡಿರಬೇಕು. ೪. ಆದ್ಯತೆ: ೧. ಆಯಾ ಜಿಲ್ಲೆಯ ಗ್ರಾಮಾಂತರ ಪ್ರದೇಶದ ಅಭ್ಯರ್ಥಿಗಳಿಗೆ - ೨. ಗಂಡನಿಂದ ಪರಿತ್ಯಕ್ತರಾದವರಿಗೆ, ವಿಧವೆಯರಿಗೆ ಮತ್ತು ಮದುವೆಯಾಗದ ಮಹಿಳೆಯರಿಗೆ ೩. ಆರೋಗ್ಯ ಮತ್ತು ಕುಕ ಸೇವೆಯ ಇಲಾಖೆಯಲ್ಲಿ ಕೆಲಸ ಮಾಡಿರುವ ಅಥವಾ ಕೆಲಸ ಮಾಡುತ್ತಿರುವವರಿಗೆ ಅರ್ಹತೆಯಿದ್ದಲ್ಲಿ ಆದ್ಯತೆ ನೀಡಲಾಗುವುದು. ೫. ಅರ್ಜಿಯೊಂದಿಗೆ ಸಲ್ಲಿಸಬೇಕಾದ ಲಗತ್ತುಗಳು : ೧. ಅಭ್ಯರ್ಥಿಯು ಸಹಿ ಮಾಡಿರುವ ಎರಡು ಪಾಸ್‌ಪೋರ್ಟ್ ಸೈಜಿನ ಭಾವಚಿತ್ರಗಳನ್ನು ಅರ್ಜಿಯ ಬಲಭಾಗದ ಮೇಲ್ಭಾಗದಲ್ಲಿ ಅಂಟಿಸಬೇಕು. ೨. ದೃಢೀಕರಿಸಿದ ಈ ಕೆಳಗಿನ ದಾಖಲೆಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. ಅ. ಜನ್ಮ ದಿನಾಂಕದ ದಾಖಲೆ ಆ. ವಿದ್ಯಾರ್ಹತೆಯ ದಾಖಲೆ ಇ. ವರಮಾನ ಪ್ರಮಾಣ ಪತ್ರ ಈ. ಜಾತಿ ಪ್ರಮಾಣ ಪತ್ರ ಉ. ಇಬ್ಬರು ಗಣ್ಯವ್ಯಕ್ತಿಗಳಿಂದ ಪಡೆದ ನಡವಳಿಕೆ ಪ್ರಮಾಣ ಪತ್ರ ಊ. ಅಭ್ಯರ್ಥಿಯು ಸ್ವತಃ ಬರೆದ ಕನ್ನಡ ಬರವಣಿಗೆಯ ಒಂದು ಪುಟ ಋ. ವೈದ್ಯಕೀಯ ಪ್ರಮಾಣ ಪತ್ರ ಮತ್ತು ಅರ್ಜಿಯಲ್ಲಿ ತಿಳಿಸಿರುವ ಇತರ ಪ್ರಮಾಣ ಪತ್ರಗಳು. ೬. ಸೂಚನೆಗಳು: ೧. ಸಂಬಂಧಿಸಿದ ಅಧಿಕಾರಿಗಳು ನೀಡಿದ ಜಾತಿ ಮತ್ತು ವರಮಾನ ಪ್ರಮಾಣ ಪತ್ರಗಳನ್ನು ಮಾತ್ರ ಪರಿಗಣಿಸಲಾಗುವುದು. ೨. ಇಲಾಖಾ ಅಭ್ಯರ್ಥಿಗಳು ಮೇಲಾಧಿಕಾರಿಗಳ ಮುಖಾಂತರ ಅರ್ಜಿಗಳನ್ನು ಸಲ್ಲಿಸಬೇಕು. ೩. ಗರ್ಭವತಿಯರಾದ ಅಭ್ಯರ್ಥಿಗಳಿಗೆ ತರಬೇತಿಗೆ ಸೇರಲು ಅವಕಾಶವಿರುವುದಿಲ್ಲ ಮತ್ತು ತರಬೇತಿ ಅವಧಿಯಲ್ಲಿ ಗರ್ಭವತಿಯಾದ ವಿದ್ಯಾರ್ಥಿನಿಯರನ್ನು ತರಬೇತಿಯಿಂದ ಮುಕ್ತಗೊಳಿಸಲಾಗುವುದು. ೪. ತರಬೇತಿ ಅವಧಿ: ತರಬೇತಿ ಅವಧಿಯು ಪ್ರಾರಂಭದ ದಿನದಿಂದ ೧೮ ತಿಂಗಳು, ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯು ಪ್ರಾರಂಭವಾಗುವ ದಿನಾಂಕವನ್ನು ಸೂಕ್ತ ಸಮಯದಲ್ಲಿ ತಿಳಿಸಲಾಗುವುದು. ೫. ತರಬೇತಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಕೆಲಸವನ್ನು ಒದಗಿಸುವ ಕಟ್ಟುಪಾಡು ಸರ್ಕಾರಕ್ಕಿರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ ಸರ್ಕಾರವು ನೀಡುವ ಶಿಷ್ಯವೇತನವನ್ನು ನೀಡಲಾಗುವುದು. ಶಿಷ್ಯ ವೇತನವನ್ನು ಪಡೆಯುವ ಅಭ್ಯರ್ಥಿಗಳು ಸರ್ಕಾರದಲ್ಲಿ ೩ ವರ್ಷಗಳ ಸೇವೆ ಸಲ್ಲಿಸುವುದಾಗಿ ಜಾಮೀನು ಪತ್ರವನ್ನು ಗೊತ್ತುಪಡಿಸಿದ ನಮೂನೆಯಲ್ಲಿ ಸಲ್ಲಿಸಬೇಕು. ೬. ಮೀಸಲಾತಿ ಸರ್ಕಾರಿ ಆದೇಶ ಸಂ:ಸಿಆಸುಇ ೦೮ ಸಹಿಮ ೯೫ ದಿ. ೨೦ನೇ ಜೂನ್ ೯೫ರ ಅನ್ವಯ ಮಾಡಲಾಗುವುದು. ತರಬೇತಿಯ ಒಟ್ಟು ಸ್ಥಾನಗಳು: ಪ್ರತಿ ಜಿಲ್ಲೆಗೆ ೩೦ ಅಭ್ಯರ್ಥಿಗಳಂತೆ ೧೯ ಜಿಲ್ಲೆಗಳಿಗೆ ೫೭೦. ಇದರಲ್ಲಿ ಸಾಮಾನ್ಯ ವರ್ಗ-೨೮೫ ಸ್ಥಾನಗಳು. ಮೀಸಲಾತಿ ಸ್ಥಾನಗಳು-೨೮೫. ಹೆಚ್ಚಿನ ವಿವರಗಳನ್ನು ಆಯಾ ಜಿಲ್ಲೆಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರಿಂದ ಪಡೆಯಬಹುದು.

# ಕೆ.ಪಿ.ಎಸ್.ಸಿ.

## ಅಧ್ಯಕ್ಷ ಎಸ್.ಎಂ. ಪಂಚಗಟ್ಟಿ :

### ಒಂದು ವ್ಯಕ್ತಿಚಿತ್ರ

**ಧಾ**ರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಯಲ್ಲಾಪುರ ಗ್ರಾಮದಲ್ಲಿ ೧೮-೦೧-೩೯ರಂದು, ಬಿಜಾಪುರದಲ್ಲಿ ಕನ್ನಡ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ದಿವಂಗತ ಮು.ಹು. ಪಂಚಗಟ್ಟಿಯವರ ಎರಡನೇ ಪುತ್ರನಾಗಿ ಜನಿಸಿದರು.

ಪ್ರಾಥಮಿಕ ಶಿಕ್ಷಣವನ್ನು ಯಲ್ಲಾಪುರ ಮತ್ತು ಸೊರಣಗಿ ಗ್ರಾಮಗಳಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಸರಕಾರಿ ಕೃಷಿ ಮಾಧ್ಯಮಿಕ ಶಾಲೆ, ಬಿಜಾಪುರದಲ್ಲಿ ೧೯೫೫ರಲ್ಲಿ ಪೂರೈಸಿ ೨ ವರ್ಷಗಳ ಕಾಲೇಜು ಶಿಕ್ಷಣವನ್ನು ವಿಜಯ ಕಾಲೇಜು, ಬಿಜಾಪುರದಲ್ಲಿ ಪೂರೈಸಿ, ೩ ವರ್ಷಗಳ ಇಂಜಿನಿಯರಿಂಗ್ ಶಿಕ್ಷಣವನ್ನು ಹುಬ್ಬಳ್ಳಿಯ ಬಿ.ವಿ.ಬಿ. ಕಾಲೇಜಿನಲ್ಲಿ ವ್ಯಾಸಂಗ ಮಾಡಿ ೧೯೬೦ರಲ್ಲಿ ಬಿ.ಇ. (ಸಿವಿಲ್) ಪದವಿಯನ್ನು ಪಡೆದರು.

೦೭-೦೬-೧೯೬೦ರಂದು ಮೈಸೂರು ಲೋಕೋಪಯೋಗಿ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ ಆಗಿ ಸಣ್ಣ ನೀರಾವರಿ ತನಿಖಾ ಉಪವಿಭಾಗ, ಬಿಜಾಪುರದಲ್ಲಿ ಸೇವೆಯನ್ನು ಪ್ರಾರಂಭಿಸಿದರು. ೧೯೬೨ರಿಂದ ೧೯೬೪ರ ವರೆಗೆ ಭಾಗೇವಾಡಿ ಹಾಗೂ ಇಂಡಿಯ ಲೋಕೋಪಯೋಗಿ ಉಪವಿಭಾಗಗಳು ಹಾಗೂ ವಿಜಾಪುರ ಲೋಕೋಪಯೋಗಿ ವಿಭಾಗ ಕಛೇರಿಯಲ್ಲಿ ಸೇವೆ ಸಲ್ಲಿಸಿದರು.

೨೦-೧-೧೯೬೪ರಂದು ಭಾರತೀಯ ಸೈನ್ಯದಲ್ಲಿ ಅಧಿಕಾರಿಗಳಾಗಿ ಆಯ್ಕೆಗೊಂಡು ಡೆಹರಾಡೂನಿನಲ್ಲಿ ಇಂಡಿಯನ್ ಮಿಲಿಟರಿ ಅಕಾಡೆಮಿಯಲ್ಲಿ ೬ ತಿಂಗಳ ಅವಧಿಯ ಹಾಗೂ ಪುಣೆಯ ಮಿಲಿಟರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ೯ ತಿಂಗಳ ತರಬೇತಿ ಪಡೆದರು.

ನಂತರ ೨ ವರ್ಷಗಳ ಕಾಲ ಮಿಝೋ ಗುಡ್ಡಗಾಡು ಪ್ರದೇಶದಲ್ಲಿ ರಸ್ತೆ ಮತ್ತು ಸೇತುವೆ ನಿರ್ಮಾಣ ಕೆಲಸಗಳ ಸಂಬಂಧ ಕಾರ್ಯ ನಿರ್ವಹಿಸಿದರು. ತದನಂತರ ೩ ವರ್ಷಗಳ ಕಾಲ ಗೋರಖಪುರ ವಾಯುಪಡೆ ನೆಲೆಯಲ್ಲಿ ವಾಯುಪಡೆಗೆ ಪೂರಕವಾಗಿರುವ ಸಿವಿಲ್ ಕೆಲಸಗಳನ್ನು ಅಸಿಸ್ಟಂಟ್ ಗಾರಿಜನ್ ಇಂಜಿನಿಯರ್ (ಕ್ಯಾಪ್ಟನ್) ಹುದ್ದೆಯಲ್ಲಿಯೂ ನಂತರ ಗ್ಯಾರಿಜನ್ ಇಂಜಿನಿಯರ್ (ಮೇಜರ್) ಸ್ಥಾನಕ್ಕೆ ಪದೋನ್ನತಿ ಪಡೆದು ಅಲ್ಲಿಯೇ ಕೆಲಸ ನಿರ್ವಹಿಸಿದರು.

ಹೀಗೆ ೨೦-೧-೧೯೬೪ರಿಂದ ೧೯-೮-೧೯೬೭ರ ವರೆಗಿನ ಅವಧಿಯಲ್ಲಿ ಭಾರತದ ಸೈನ್ಯದಲ್ಲಿ ಸೇವೆ ಸಲ್ಲಿಸಿ ನಂತರ ಕರ್ನಾಟಕ ಲೋಕೋಪಯೋಗಿ ಸೇವೆಗೆ ಮರಳಿದರು. ೩೦-೧-೧೯೭೮ರಿಂದ ೨೪-೮-೧೯೮೧ರ ವರೆಗೆ ಮಲಪ್ರಭಾ ಯೋಜನೆಯ ವೃತ್ತ ಕಛೇರಿ ಮತ್ತು ವಿಭಾಗ ಕಛೇರಿಯಲ್ಲಿ ತಾಂತ್ರಿಕ ಸಹಾಯಕರಾಗಿ ಕರ್ತವ್ಯ ನಿರ್ವಹಿಸಿದರು. ನಂತರ ಕಾರ್ಯನಿರ್ವಾಹಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ಪಡೆದು ಸುಮಾರು ೪ ವರ್ಷಗಳ ಕಾಲ ಕೃಷ್ಣಾ ಮೇಲ್ದಂಡೆ ಯೋಜನೆಯ ಹುಣಸಗಿ ವಿಭಾಗದಲ್ಲಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಸುಮಾರು ೨೧,೦೦೦ ಹೆಕ್ಟೇರು ಪ್ರದೇಶಕ್ಕೆ ವಿಶ್ವಬ್ಯಾಂಕ್ ಸಹಾಯದಡಿಯಲ್ಲಿ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಯಿತು.

ಮುಂದೆ ಬೆಂಗಳೂರಿನ ರಾಷ್ಟ್ರೀಯ ಹೆದ್ದಾರಿ ವಿಭಾಗಕ್ಕೆ ವರ್ಗಾವಣೆಗೊಂಡರು. ಈ ವಿಭಾಗದಲ್ಲಿ ಒಂದೂವರೆ ವರ್ಷಗಳ ಕಾಲ ಸೇವೆ ಸಲ್ಲಿಸಿ ಬೆಂಗಳೂರು-ನೆಲಮಂಗಲ ನಡುವೆ ೪ ಪಥಗಳ ಮಾರ್ಗವನ್ನು ನಿರ್ಮಿಸುವುದರ ಜೊತೆಗೆ ನೆಲಮಂಗಲ-ಹಾಸನ ನಡುವೆಯ ರಾಷ್ಟ್ರೀಯ ಹೆದ್ದಾರಿಯನ್ನು ಸುಧಾರಿಸಲು ಎಲ್ಲಾ ಕ್ರಮಗಳನ್ನೂ ಕೈಗೊಳ್ಳಲಾಯಿತು. ೨ ವರ್ಷಗಳ ಕಾಲ ಕರ್ನಾಟಕ ನಿರ್ಮಾಣ ನಿಗಮದಲ್ಲಿ ಸೇವೆ ಸಲ್ಲಿಸಿದ ಅನುಭವವೂ ಇವರಿಗಿದೆ.

ನಂತರ ಅಧೀಕ್ಷಕ ಅಭಿಯಂತರ ವೃಂದಕ್ಕೆ ಪದೋನ್ನತಿ ಪಡೆದು ಧಾರವಾಡದ ಲೋಕೋಪಯೋಗಿ ವೃತ್ತಕ್ಕೆ ನೇಮಕಗೊಂಡು ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಇದಾದ ನಂತರ ಮುಖ್ಯ ಇಂಜಿನಿಯರ್ ಸ್ಥಾನಕ್ಕೆ ಬಡ್ತಿ ಪಡೆದು ಕೃಷ್ಣಾ ಕಣವೆ ಏತ ನೀರಾವರಿ ನಿಗಮದ ವ್ಯವಸ್ಥಾಪಕ ನಿರ್ದೇಶಕ, ಬಿಜಾಪುರ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಇಂಜಿನಿಯರ್-ಸದಸ್ಯ ಹಾಗೂ ಬೆಂಗಳೂರಿನ ಕೇಂದ್ರ ಯಾಂತ್ರಿಕ ಸಂಸ್ಥೆಯ ಮುಖ್ಯ ಇಂಜಿನಿಯರ್ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದರು. ೧೯೯೩ರ ಮೇ ತಿಂಗಳಿನಲ್ಲಿ ಪ್ರಧಾನ ಇಂಜಿನಿಯರ್ ಸ್ಥಾನಕ್ಕೆ ಪದೋನ್ನತಿ ಪಡೆದು ಜನಾರೋಗ್ಯ ತಾಂತ್ರಿಕ ಇಲಾಖೆಯಲ್ಲಿ ಒಂದೂವರೆ ವರ್ಷಗಳ ಕಾಲ ಸೇವೆ ಸಲ್ಲಿಸಿ ದಿನಾಂಕ ೧೮-೨-೧೯೯೫ರಂದು ಕರ್ನಾಟಕ ಸರ್ಕಾರದ ನೀರಾವರಿ ಇಲಾಖೆಯ ಕಾರ್ಯದರ್ಶಿಯಾಗಿ ನೇಮಕಗೊಂಡರು. ನೀರಾವರಿ ಇಲಾಖೆಯಲ್ಲಿ ಕುಂಠಿತಗೊಂಡ ಎಲ್ಲ ಯೋಜನೆಗಳನ್ನು ಪುನರ್‌ಪ್ರಾರಂಭಿಸಿ ಇಲಾಖೆಯನ್ನು ಚುರುಕುಗೊಳಿಸಿದರು. ಕಾವೇರಿ ಜಲವಿವಾದ ಮತ್ತು ಆಲಮಟ್ಟಿ ಅಣೆಕಟ್ಟು ವಿವಾದಗಳನ್ನು ಸಮರ್ಥ ರೀತಿಯಲ್ಲಿ ನಿಭಾಯಿಸಿದರು.

ಹೀಗೆಯೇ ೩೬ ವರ್ಷಗಳ ಕಾಲ ಕಾರ್ಯನಿರ್ವಹಿಸಿ ೩೧-೧-೧೯೯೭ರಂದು ಸರ್ಕಾರದ ಸೇವೆಯಿಂದ ವಯೋನಿವೃತ್ತಿ ಹೊಂದಿದರು.

ಸರ್ಕಾರವು ಇವರ ಸೇವೆಯನ್ನು ಗಮನಿಸಿ, ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಿರುತ್ತದೆ.

ಇದಲ್ಲದೆ, ಇವರು ಈ ಕೆಳಗೆ ನಮೂದಿಸಿದ ಸಂಸ್ಥೆಗಳ ಸದಸ್ಯರಾಗಿದ್ದಾರೆ.

1. Indian Road Congress
2. Institution of Engineers.
3. Institution of Public Health Engineering.
4. All India Institute of Management.
5. Vice-President, Central Board of Irrigation & Power

---

**ಎಸ್.ಎಂ. ಪಂಚಗಟ್ಟಿ,** ಬಿ.ಇ.,ಎಫ್,ಐ.ಇ.
ಅಧ್ಯಕ್ಷರು
ಕರ್ನಾಟಕ ಲೋಕಸೇವಾ ಆಯೋಗ
ಪಾರ್ಕ್ ಹೌಸ್, ಬೆಂಗಳೂರು - ೫೬೦ ೦೦೧.



# ಮಾರ್ಗದರ್ಶಿ

○ ಡಾ. ಎಸ್.ಸಿ. ಶರ್ಮಾ
ಪ್ರಾಧ್ಯಾಪಕರು
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - ೫೬೦ ೦೫೯

ಚಂದ್ರಶೇಖರ, ನಾಗಸಮುದ್ರ

**ಸಾರ್, ನಾನು ಐ.ಟಿ.ಐ. ಮಾಡಿ ಈಗ ಹೆಸರಾಂತ ಕಂಪೆನಿಯಲ್ಲಿ ಅಪ್ರೆಂಟಿಸ್ ಮಾಡುತ್ತಿದ್ದೇನೆ. ಇದು ಮುಗಿದ ಬಳಿಕ ನಾನು ಯಾವುದಾದರೂ ಶಿಕ್ಷಣ (ಸಂಬಂಧಪಟ್ಟ) ಮುಂದುವರಿಸಬಹುದೇ? ಹಾಗೂ ಇಂಜನಿಯರಿಂಗ್ ತತ್ಸಮಾನವಾದ ಯಾವುದಾದರೂ ಕೋರ್ಸ್ ಇದೆಯಾ ತಿಳಿಸಿ.**

ನೀವು ಐ.ಟಿ.ಐ. ಆಧಾರದ ಮೇಲೆ ಮುಂದೆ ಯಾವುದಾದರೂ ಕೆಲಸದಲ್ಲಿ ಇದ್ದುಕೊಂಡೆ, ನಿಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸ ಬಹುದು. ನೀವು ಇಂಜನಿಯರಿಂಗ್ ಸಮಾನವಾದ A.M.I.E. ಕೋರ್ಸನ್ನು ಮುಂದುವರಿಸಿ. ಇದಕ್ಕಾಗಿ ನೀವು Institution of Engineering, No. 7, Gokale Road, Calcutta ಇವರನ್ನು ಸಂಪರ್ಕಿಸುವುದು ಉತ್ತಮ. ಈ ಕೋರ್ಸ್ ಮುಗಿಸಿದ್ದಲ್ಲಿ ಉತ್ತಮ ಅವಕಾಶಗಳು ಕೂಡ ಇರುತ್ತವೆ.

ಕೃಷ್ಣ ಡಿ., ಬಳ್ಳಾರಿ

**ಸರ್, ನಾನು ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ.)ನಲ್ಲಿ ಎಲೆಕ್ಟ್ರೀಷಿಯನ್ ದ್ವಿತೀಯ ವರ್ಷದಲ್ಲಿ ತರಬೇತಿ ಪಡೆಯುತ್ತಿದ್ದೇನೆ. ಮುಂದೆ ನಾನು ಪಾಲಿಟೆಕ್ನಿಕ್ ಮಾಡಬೇಕೆಂದು ಕೊಂಡಿದ್ದೇನೆ. ಇದು ಸಾಧ್ಯವೇ? ಇಲ್ಲವಾದಲ್ಲಿ ನನಗೆ ಮುಂದಿನ ದಾರಿಯನ್ನು ತೋರಿಸಬೇಕಾಗಿ ತಮ್ಮಲ್ಲಿ ಸವಿನಯ ಪ್ರಾರ್ಥನೆ.**

ಅವಶ್ಯವಾಗಿ ನೀವು ಒಳ್ಳೆಯ ಅಂಕ ಪಡೆದಲ್ಲಿ ನೀವು ಡಿಪ್ಲೊಮಾ ಕೋರ್ಸನ್ನು ಇದರ ಆಧಾರದ ಮೇಲೆ ಮುಂದುವರಿಸಬಹುದು. ಇಲ್ಲವೆ ನೀವು I.T.I. ನಂತರ ಯಾವುದಾದರೂ ಕಂಪೆನಿಗಳಲ್ಲಿ ಅಪ್ರೆಂಟಿಶಿಪ್ ಟ್ರೈನಿಂಗ್ ಕೂಡ ಮುಂದುವರಿಸ ಬಹುದು. ಅಪ್ರೆಂಟಿಶಿಪ್ ಟ್ರೈನಿಂಗ್ ಮುಗಿಸಿದ್ದಲ್ಲಿ ಅವಕಾಶಗಳು ಕೂಡಾ ಹೆಚ್ಚಾಗಿ ಇರುತ್ತವೆ.

ಎಂ.ಎಂ. ಕಪಾಲಿ, ಹಲಸಂಗಿ

**ನಿಮ್ಮ ಬಿಸಿಲ ಬದುಕು ಅಕ್ಟೋಬರ್ ಪತ್ರಿಕೆಯಲ್ಲಿ ಐ.ಎ.ಎಸ್. ಬಗ್ಗೆ ಪ್ರಕಟಿಸಿದ್ದೀರಿ. ಐ.ಎ.ಎಸ್. ಪರೀಕ್ಷೆಗೆ ಕಟ್ಟಲು ವಿವರವಾದ ಮಾಹಿತಿ ಹಾಗೂ ಅರ್ಜಿ ಎಲ್ಲಿ ಸಿಗುತ್ತದೆ ತಿಳಿಸಿ.**

ನೀವು IAS ಮಾಡಬೇಕಾದಲ್ಲಿ ಕನಿಷ್ಟ ವಿದ್ಯಾರ್ಹತೆ ಎಂದರೆ ಪದವಿಯಾಗಿರಬೇಕು. ಇದಕ್ಕೆ ವಯೋಮಿತಿ ೨೧-೨೮ ವರ್ಷಗಳು. ಅರ್ಜಿಯ ನಮೂನೆಯನ್ನು ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಎಲ್ಲಾ ಪ್ರಮುಖ ದಿನ ಪತ್ರಿಕೆಗಳಲ್ಲಿ, ಹಾಗೂ ರೊಜಗಾರ್ ಸಮಾಚಾರ ಪತ್ರಿಕೆಗಳಲ್ಲಿ ಜಾಹಿರಾತು ನೀಡಲಾಗುವುದು. ರ್ಯಾಂಕಿಂಗ್ ವಿಧಾನದ ಮೇಲೆ ಹುದ್ದೆಗಳಿಗೆ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು. ಈ ಬಗ್ಗೆ ಹಲವು ಖಾಸಗಿ ವಿದ್ಯಾ ಸಂಸ್ಥೆಗಳು ತರಬೇತಿ ನಡೆಸುತ್ತವೆ. ವಿದ್ಯಾರ್ಥಿಗಳು ಇದರ ಸದುಪಯೋಗವನ್ನು ಕೂಡ ಪಡೆಯಬಹುದು.

ಎ. ಅಶ್ವಥ್ ರೆಡ್ಡಿ, ಮಾಲೂರು

**ನಾನು ಪದವಿ (ಬಿ.ಬಿ.ಜೆಡ್.) ಓದಿದ್ದು, ಈಗ ನಾನು ಮೆಡಿಕಲ್ (ಡಾಕ್ಟರ್) ಮಾಡಬೇಕೆಂದಿದ್ದೇನೆ. ನಾನು ಯಾವ ರೀತಿ ಎಂ.ಬಿ.ಬಿ.ಎಸ್. ಮಾಡಬಹುದು? ದಯವಿಟ್ಟು ವಿವರಗಳನ್ನು ತಿಳಿಸಿ.**

ಎಂ.ಬಿ.ಬಿ.ಎಸ್. ಮಾಡಬೇಕಾದರೆ ನೀವು ಲಿಖಿತ ಪರೀಕ್ಷೆಯನ್ನು ಪಿ.ಯು.ಸಿ. ಆಧಾರದ ಮೇಲೆ ಬರೆಯಬೇಕಾಗುವುದು. ಇದು ೫೧/೨ ವರ್ಷದ ಕೋರ್ಸ್ ಆಗಿರುತ್ತದೆ. ಪರೀಕ್ಷೆಯ ಬಗ್ಗೆ ಪ್ರಕಟಣೆಗಳು ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು. All India levelನಲ್ಲಿ ಪರೀಕ್ಷೆ ನಡೆಸುವಲ್ಲಿ All India institue of Medical Sciences, New Delhiಯೂ ಒಂದು.

ಬಿ.ಎಸ್. ಬೈಲಕೂರ, ಹುನಗುಂದ

**ಸರ್, ನಾನು ಬಿ.ಕಾಂ. ಆರ್ಡಿನರಿ ಪಾಸ್ ಆಗಿದ್ದು, ಮುಂದೆ ನನಗೆ ಓದಲು ಇಷ್ಟವಿಲ್ಲ. ಮುಂದೆ ಉದ್ಯೋಗ ಸಿಗುವ ಒಂದು ವರ್ಷದ ಕೋರ್ಸ್ ಇದ್ದರೆ ಹೇಳಿ, ಪೂರ್ಣ ಸಂಪರ್ಕ ವಿಳಾಸವನ್ನು ತಿಳಿಸಿ.**

ನೀವು ಪದವಿ ಆಧಾರದ ಮೇಲೆ ಅಂಚೆ ತೆರಪಿನ ಮೂಲಕ ಡಿಪ್ಲೊಮಾ ಕೋರ್ಸ್‌ಗಳಾದ Labour Law ಅಥವಾ Taration law ಅಂತಹ ಒಂದು ವರ್ಷದ ಕೋರ್ಸ್‌ಗಳನ್ನು ಮಾಡ ಬಹುದು. ಇದು ಉದ್ಯೋಗ ದೊರಕಿಸುವಲ್ಲಿ ಖಂಡಿತವಾಗಿಯೂ ಸಹಾಯವಾಗುತ್ತದೆ. ಇದರ ಹೆಚ್ಚಿನ ವಿವರಗಳಿಗಾಗಿ ಬೆಂಗಳೂರು ವಿಶ್ವವಿದ್ಯಾಲಯ, Director of Correspondence Course, Central College Campus, Bangalore-1 ಇವರನ್ನು ಸಂಪರ್ಕಿಸಿರಿ.

ಬಿ.ಸಹನಾ, ದೊಡ್ಡಬಳ್ಳಾಪುರ

**ನಾನು ಬಿ.ಕಾಂ. ಪದವೀಧರೆಯಾಗಿದ್ದು, ನಾನು ಐ.ಪಿ.ಎಸ್. ಮಾಡಬೇಕೆಂದಿದ್ದೇನೆ. ಆದ್ದರಿಂದ ಈ ಪರೀಕ್ಷೆ ಯಾವಾಗ ನಡೆಸಲ್ಪಡುತ್ತದೆ ಮತ್ತು ಇದಕ್ಕೆ ಇರಬೇಕಾದ ಅರ್ಹತೆಗಳನ್ನು ದಯವಿಟ್ಟು ತಿಳಿಸಿ.**

ನೀವು IPS ಮಾಡಬೇಕಾದಲ್ಲಿ U.P.S.C. ರವರು ನಡೆಸುವ ಲಿಖಿತ ಪರೀಕ್ಷೆಯನ್ನು ತೆಗೆದುಕೊಳ್ಳಬೇಕು. ಈ ಬಗ್ಗೆ ಪ್ರಕಟಣೆ ಡಿಸೆಂಬರ್ ತಿಂಗಳಲ್ಲಿ ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು. ಇದಕ್ಕೆ ಅರ್ಹತೆ ಪದವಿ ತೇರ್ಗಡೆಯಾಗಿದ್ದರೆ ಸಾಕು. ವಯಸ್ಸು ೨೧-೨೮ ಮಾತ್ರ. ಈ ಪರೀಕ್ಷೆಯನ್ನು ನಾಲ್ಕು ಸಲ ಒಬ್ಬ ವಿದ್ಯಾರ್ಥಿ ತೆಗೆದುಕೊಳ್ಳಬಹುದು. Sc/St ಅವರಿಗೆ ಇದರಲ್ಲಿ ಸಡಲಿಕೆ ಇರುತ್ತದೆ. ರ್ಯಾಂಕಿಂಗ್ ವಿಧಾನದ ಮೇಲೆ ಆಯ್ಕೆ ಮಾಡಲಾಗುವುದು.

ವೆಂಕಣ್ಣ ಉಗಲವಾಟ, ರಡ್ಡೇರ ತಿಮ್ಮಾಪುರ

**ನಾನು ಪಿ.ಯು.ಸಿ. ಪಾಸಾಗಿದ್ದು, ಮುಕ್ತ ವಿಶ್ವವಿದ್ಯಾನಿಲಯದಿಂದ ಪದವಿ ಪಡೆಯಬೇಕೆಂದು ಬಯಸಿದ್ದೇನೆ. ಈ ವಿಶ್ವವಿದ್ಯಾಲಯದ ಪದವಿಗಳು ಭಾರತ ಲೋಕ ಸೇವಾ ಆಯೋಗದ ಸ್ಪರ್ಧಾತ್ಮಕ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹವೇ ಅಥವಾ ಇಲ್ಲವೇ ಎಂಬುದನ್ನು ತಿಳಿಸಬೇಕು. ಕರ್ನಾಟಕದಲ್ಲಿರುವ ಮುಕ್ತ ವಿಶ್ವವಿದ್ಯಾಲಯಗಳನ್ನು ನನಗೆ ಗೊತ್ತುಪಡಿಸಬೇಕು.**

ನೀವು ಅಗತ್ಯವಾಗಿ ಮುಕ್ತ ವಿಶ್ವವಿದ್ಯಾಲಯದ ಮೂಲಕ ಪದವಿಯನ್ನು ಪಡೆಯಬಹುದು. ಇದಕ್ಕಾಗಿ ನೀವು ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ ಮೈಸೂರು, ಅಥವಾ ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯದ ಮೂಲಕ ಪದವಿಯನ್ನು ಮುಂದುವರಿಸಬಹುದು. ನೀವು ಅಗತ್ಯವಾಗಿ ಇದರ ಆಧಾರದ ಮೇಲೆ U.P.S.C. ರವರು ನಡೆಸುವ ಲಿಖಿತ ಪರೀಕ್ಷೆಗೆ ಅರ್ಹರಾಗಿರುತ್ತೀರಿ. ಇದಕ್ಕೆ ಯಾವ ರೀತಿಯ ಸಂದೇಹ ಬೇಡ.

ಹರೀಶ್ ಕುಮಾರ್, ಬೆಂಗಳೂರು

**ನಾನು ಮೈಸೂರಿನ ಮುಕ್ತ ವಿಶ್ವವಿದ್ಯಾಲಯದಲ್ಲಿ ಪ್ರಥಮ ಬಿ.ಎ.ಗೆ ಪ್ರವೇಶ ಪಡೆದಿದ್ದೇನೆ. ಕೆಲವು ಕಾರಣಗಳಿಂದಾಗಿ ೧೯೯೭-೯೮ನೇ ಸಾಲಿಗೆ ನಾನು ಪರೀಕ್ಷೆ ತೆಗೆದುಕೊಳ್ಳಲು ಸಾಧ್ಯವಿಲ್ಲ. ನಾನು ಈ ವರ್ಷ ಬಿ.ಎ. ಪ್ರವೇಶ ರದ್ದುಪಡಿಸಿ ಮುಂದಿನ ವರ್ಷದಿಂದ ಪ್ರಥಮ ಬಿ.ಎ.ಗೆ ಪ್ರವೇಶ ಪಡೆಯಲು ಸಾಧ್ಯವಿಲ್ಲವೇ? ಮುಂದಿನ ವರ್ಷದಿಂದ ಪ್ರಥಮ ಬಿ.ಎ.ಗೆ ಪ್ರವೇಶ ಪಡೆಯಲು ಏನು ಮಾಡಬೇಕು? ಮತ್ತು ಕೇಂದ್ರ ತನಿಖಾ ದಳ ಸೇರಲು ಯಾವ ಪರೀಕ್ಷೆ ತೆಗೆದುಕೊಳ್ಳಬೇಕು?**

ನೀವು ಮರುಪ್ರವೇಶ ಪಡೆಯುವುದಕ್ಕಿಂತ ಮೊದಲನೆ ವರ್ಷದ ಪರೀಕ್ಷೆಯನ್ನು ಈ ವರ್ಷ ಬರೆಯುವುದು ಉತ್ತಮ. ಇಲ್ಲವೇ ನೀವು ಮುಕ್ತ ವಿಶ್ವವಿದ್ಯಾಲಯದ ಆಡಳಿತ ವರ್ಗವನ್ನು ಸಂಪರ್ಕಿಸುವುದು ಉತ್ತಮ. ನೀವು ಡಿಟೆಕ್ಟೀವ್ ಸರ್ವಿಸ್‌ನಲ್ಲಿ ಸೇರಬೇಕಾದಲ್ಲಿ ಯಾವುದೇ ರೀತಿಯ ವಿದ್ಯಾರ್ಹತೆಯನ್ನು ನಿಗದಿತ ಮಾಡಿಲ್ಲ. ಆದರೆ ಕೆಲವು ಖಾಸಗಿ ಸಂಸ್ಥೆಗಳು ಡಿಪ್ಲೊಮಾ ಕೋರ್ಸುಗಳನ್ನು ನಡೆಸುತ್ತವೆ.

ಪ್ರಸನ್ನ ಕುಮಾರ್, ಬೆಂಗಳೂರು

**ನಾನು ಮೈಸೂರಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದಲ್ಲಿ ಬಿ.ಎ. ಓದುತ್ತಿದ್ದೇನೆ. ವಿಶ್ವವಿದ್ಯಾಲಯದ ನೋಂದಣಿಯಲ್ಲಿ ನನ್ನ ಹುಟ್ಟಿದ ತಾರೀಖು ವ್ಯತ್ಯಾಸವಾಗಿದೆ. ಇದರಿಂದ ತೊಂದರೆಯಿದೆಯೇ? ನಾನು ಹುಟ್ಟಿದ ತಾರೀಖು ಸರಿಪಡಿಸಲು ಏನು ಮಾಡಬೇಕು?**

ಹೌದು. ನಿಮಗೆ ಮುಂದೆ ಕೆಲಸ ಮತ್ತು ಯಾವುದಾದರೂ ಪರೀಕ್ಷೆ ತೆಗೆದುಕೊಳ್ಳುವಲ್ಲಿ ಇದು ತೊಂದರೆಯಾಗಬಹುದು. ಅದಕ್ಕೆ ನೀವು ನಿಮ್ಮ ಹುಟ್ಟಿದ ತಾರೀಖನ್ನು ಆದಷ್ಟು ಬೇಗ ಸರಿಪಡಿಸಿಕೊಳ್ಳುವುದು ಬಹಳ ಉಪಯೋಗಕಾರಿ. ಈ ಬಗ್ಗೆ ವಿಶ್ವವಿದ್ಯಾಲಯ ಆಡಳಿತ ವರ್ಗವನ್ನು ಸಂಪರ್ಕಿಸುವುದು ಉತ್ತಮ. ಆದಷ್ಟು ಬೇಗ ಕಾರ್ಯ ಕೈಗೊಳ್ಳಿ.

ಎಂ.ಎನ್. ಅರುಣಕುಮಾರ್, ಬೆಂಗಳೂರು

**ಸರ್, ನಾನು ೧೦ನೇ ತರಗತಿಯ ೧೯೯೩-೯೪ರ ಪರೀಕ್ಷೆಯಲ್ಲಿ ಶೇ. ೪೮ ಅಂಕ ಗಳಿಸಿ ಪಾಸಾಗಿರುತ್ತೇನೆ. ಈಗ ನಾನು ಪಿ.ಯು.ಸಿ. ಎರಡನೇ ವಿಭಾಗದಲ್ಲಿ ಗಣಿತ ವಿಷಯವನ್ನು ತೆಗೆದುಕೊಂಡು, ಅಂಚೆ ತೆರಪಿನ ಶಿಕ್ಷಣ ಪಡೆಯಬಹುದೇ? ನನಗೆ ೧೮ ವರ್ಷ ಆಗಿರುತ್ತದೆ. ಅಲ್ಲದೆ ಯಾವುದಾದರೂ ಕಂಪ್ಯೂಟರ್ ಸಂಸ್ಥೆಗಳಲ್ಲಿ 'ಕಲಿಕೆಯೊಂದಿಗೆ ಗಳಿಕೆ' ಇರುವಂತಹ ಸಂಸ್ಥೆಗಳು ಇವೆಯೇ? ಇದ್ದರೆ ನನಗೆ ಬೆಂಗಳೂರಿನ ವಿಳಾಸವನ್ನು ತಿಳಿಸಿಕೊಡುವಿರಾಗಿ ನಂಬಿದ್ದೇನೆ.**

ನೀವು ಅಗತ್ಯವಾಗಿ ನೇರವಾಗಿ ಪಿ.ಯು.ಸಿ. ಪರೀಕ್ಷೆಯನ್ನು ತೆಗೆದುಕೊಳ್ಳಬಹುದು. ಆದರೆ ನಿಮಗೆ ೧೯ ವರ್ಷ ವಯಸ್ಸಾಗಿರಬೇಕು. ಇದರ ಜೊತೆಗೆ ನೀವು ಯಾವುದಾದರೂ ವೃತ್ತಿಪರ ಕಂಪ್ಯೂಟರ್ ಕೋರ್ಸುಗಳನ್ನು ಕೂಡ ಮಾಡಬಹುದಾಗಿದೆ. ಇದಕ್ಕೆ ಸಾಕಷ್ಟು ಸಂಸ್ಥೆಗಳು ಕಂಪ್ಯೂಟರ್ ತರಬೇತಿಯನ್ನು ನೀಡುತ್ತವೆ.

ಕೆ.ಎಂ. ಮುತ್ತು, ಊರು ತಿಳಿಸಿಲ್ಲ

**ಸರ್, ನಾನು ಬಿ.ಎ. ಪದವಿಯನ್ನು ಇತಿಹಾಸ, ಸಮಾಜಶಾಸ್ತ್ರ ಹಾಗೂ ರಾಜ್ಯಶಾಸ್ತ್ರ ವಿಷಯಗಳಲ್ಲಿ ಕೊನೆಯ ವರ್ಷ ಓದುತ್ತಿದ್ದು ೧ ಹಾಗೂ ೨ನೇ ವರ್ಷ ಸೇರಿ ಶೇ. ೬೧ರಷ್ಟು ಅಂಕಗಳೊಂದಿಗೆ ಪಾಸಾಗಿದ್ದೇನೆ. ಮುಂದೆ ನಾನು ಎಂ.ಬಿ.ಎ. ಮಾಡಲು ಇಚ್ಛಿಸುತ್ತೇನೆ. ನಾನು ಎಂ.ಬಿ.ಎ. ಮಾಡಲು ಬರುತ್ತದೆಯೋ ಹೇಗೆ? ಪದವಿಯನ್ನು ಶೇಕಡಾ ಎಷ್ಟರಲ್ಲಿ ಮುಗಿಸಿದರೆ ಎಂ.ಬಿ.ಎ. ಮಾಡಲು ಸಿಗುತ್ತದೆ ಎಂಬುದನ್ನು ವಿವರವಾಗಿ ತಿಳಿಸಿರಿ.**

ನೀವು ಎಂ.ಬಿ.ಎ. ಮಾಡಬೇಕಾದಲ್ಲಿ ಪದವಿ ನಂತರ ಲಿಖಿತ ಪರೀಕ್ಷೆಯನ್ನು ಬರೆಯಬೇಕಾಗುವುದು. ಪದವಿಯಲ್ಲಿ ಕನಿಷ್ಠ ೫೦% ಅಂಕಗಳೊಂದಿಗೆ ತೇರ್ಗಡೆಯಾಗಿರಬೇಕು. ಲಿಖಿತ ಪರೀಕ್ಷೆಯ ಅಂಕಿಗಳ ಆಧಾರದ ಮೇಲೆ ಪ್ರವೇಶ ಕೊಡಲಾಗುವುದು. ಇದು ಸುಮಾರು ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಲಭ್ಯವಿರುತ್ತದೆ. ಇಲ್ಲವೆ I.I.M ನಂತಹ ಕಡೆ ಮಾಡಬೇಕಾದಲ್ಲಿ ಅವರು ನಡೆಸುವ ಲಿಖಿತ ಪರೀಕ್ಷೆಯನ್ನು ತೆಗೆದುಕೊಳ್ಳಬೇಕಾಗುವುದು. ಇದು ಒಳ್ಳೆಯ ಉದ್ಯೋಗ ಅವಕಾಶಗಳನ್ನು ಹೊಂದಿರುತ್ತದೆ.

ಮಹೇಶ ಕೊಳ್ಳಿ, ರೋಣ

**ನಾನು ಬಿ.ಎ.ಯಲ್ಲಿ ಭೂಗೋಳಶಾಸ್ತ್ರ ತೆಗೆದುಕೊಂಡು ತೃತೀಯ ವರ್ಗದಲ್ಲಿ ಪಾಸಾಗಿದ್ದೇನೆ. ಮುಂದೆ ಬಾಹ್ಯ ಪರೀಕ್ಷೆ ಕಟ್ಟಿ ಭೂಗೋಳ ಶಾಸ್ತ್ರದಲ್ಲಿ ಎಂ.ಎ. ಮಾಡಬಹುದೇ? ಹಾಗೆಯೇ ನಾನು ಐ.ಎ.ಎಸ್. ಪರೀಕ್ಷೆಗೆ ಕುಳಿತುಕೊಳ್ಳಬೇಕೆಂದಿದ್ದೇನೆ. ಆ ಪರೀಕ್ಷೆ ಯಾವಾಗ ನಡೆಯುತ್ತದೆ?**

ನೀವು ಅವಶ್ಯವಾಗಿ ಬಾಹ್ಯವಾಗಿ ಎಂ.ಎ. ಪದವಿಯನ್ನು ಮುಂದುವರಿಸಬಹುದು. ನಿಮ್ಮ ಇಚ್ಛೆಯಂತೆಯೇ ಐ.ಎ.ಎಸ್. ಪರೀಕ್ಷೆಯನ್ನು ಕೂಡ ಕಟ್ಟಬಹುದಾಗಿದೆ. ಇದಕ್ಕೆ ನೀವು ಅರ್ಹರಾಗಿರುತ್ತೀರಿ. ಇದಕ್ಕೆ ಯಾವ ಸಂದೇಹ ಬೇಡ.

# ಅಮೆರಿಕೆಯಲ್ಲಿ ಉಚ್ಚ ವ್ಯಾಸಂಗ

○ ಡಾ. ಟಿ.ಕೆ. ತಾಪಸ್

**ಮೊದಲ ಮಾತು :**

ಅಮೇರಿಕೆಯಲ್ಲಿ ಉಚ್ಚ ಶಿಕ್ಷಣ ಪಡೆದ ಎಲ್ಲರಿಗೂ ಅಲ್ಲಿಯೇ ತಳವೂರಲು ಅವಕಾಶವಿಲ್ಲ. ಅಂಥವರು ತಮ್ಮ ತಾಯ್ನಾಡಿಗೆ ಹಿಂದಿರುಗಲೇ ಬೇಕು. ಆಗ ನಿಮಗಾಗಬಹುದಾದ ನಿರಾಶೆಯನ್ನು ತಪ್ಪಿಸಲು ಕೆಲ ವಿಚಾರಗಳನ್ನು ಮೊದಲು ಖಚಿತಪಡಿಸಿಕೊಳ್ಳಬೇಕು. ನೀವು ಆಯ್ದುಕೊಂಡ ವೃತ್ತಿಯಲ್ಲಿ ಯಶಸ್ಸು ಗಳಿಸಲು ಅಮೇರಿಕೆಯಲ್ಲಿ ಶಿಕ್ಷಣ ಪಡೆಯುವದು ಪ್ರಸ್ತುತವೇ, ಅನಿವಾರ್ಯವೇ ಎಂಬುದರತ್ತ ಆಳವಾಗಿ ಗಮನ ನೀಡಬೇಕು. ನೀವು ಆ ದೇಶದಲ್ಲಿ ದೊರಕಿಸಲಿಚ್ಛಿಸುವ ವ್ಯಾಸಂಗಾನುಕೂಲತೆಗಳು ಸ್ವದೇಶಗಳಲ್ಲಿ ಲಭ್ಯವೇ ಎಂಬುದನ್ನೂ ಪರೀಕ್ಷಿಸಬೇಕು. ನಿಮ್ಮ ವೃತ್ತಿ ಯಶಸ್ಸಿಗೆ ಅನಿವಾರ್ಯವಾದರೆ ಮಾತ್ರ ಅಮೇರಿಕೆಗೆ ತೆರಳಲು ನಿರ್ಧರಿಸಬೇಕು. ವಿದೇಶ ವ್ಯಾಸಂಗದಲ್ಲಿ ನಿರತರಾಗಬಯಸುವವರು ಕೆಳಗೆ ಕಾಣಿಸಿದ ತೊಡಕುಗಳನ್ನು ಎದುರಿಸಬೇಕಾಗುವದು. ಆದುದರಿಂದಲೇ ಈ ಪ್ರಾರಂಭಿಕ ಜಿಜ್ಞಾಸೆ ಅತ್ಯಗತ್ಯ.

**ಪ್ರಯಾಣಾನುಮತಿ**

ಈ ದೇಶದ ಅನುಮತಿ ಪತ್ರ (Passport)ಕ್ಕೆ ಪರದೇಶದ ಸರಕಾರದ ಅಸ್ತುಪತ್ರ (Visa)ವನ್ನು ನೀವು ಹೊಂದಿರಲೇ ಬೇಕು. ನಿಮ್ಮ ಶಿಕ್ಷಣದ ಪ್ರಾರಂಭಿಕ ದಿನಾಂಕಕ್ಕಿಂತ ೯೦ ದಿನ ಮೊದಲು ನೀವು ಅಸ್ತುಪತ್ರಕ್ಕಾಗಿ ಅರ್ಜಿ ಸಲ್ಲಿಸಬೇಕು. ಅಮೇರಿಕೆ ಸರಕಾರದ, ನಿಮಗೆ ಹತ್ತಿರವಾಗುವ, ಪ್ರತಿನಿಧಿ ಕಾರ್ಯಾಲಯಕ್ಕೆ ನೀವು ಎಲ್ಲ ದಾಖಲೆಗಳೊಂದಿಗೆ ಖುದ್ದಾಗಿ ಅರ್ಜಿ ಸಲ್ಲಿಸಿದರೆ ಅದೇ ದಿನ ತಮ್ಮ ನಿರ್ಧಾರವನ್ನು ಅವರು ನಿಮಗೆ ತಿಳಿಸುವರು. ಇದೇ ಕೆಲಸಕ್ಕೆ ಅಂಚೆ ಮುಖಾಂತರ ಕನಿಷ್ಠ ೧೦ ದಿನ ಕಾಯಬೇಕಾಗುವದು. ಸ್ವದೇಶಾನುಮತಿ ಪತ್ರವನ್ನು ಪಡೆಯಲು ಅನೇಕ ಸಂಸ್ಥೆಗಳ ಮುಖಾಂತರ ನೀವು ಪ್ರಯತ್ನಿಸಬಹುದು.

**ವಾರ್ಷಿಕ ವೆಚ್ಚ**

ಇಲ್ಲಿನ ನಾಣ್ಯಪದ್ಧತಿ ರೂಪಾಯಿಗಳಲ್ಲಿದೆ; ಅಲ್ಲಿಯದು ಡಾಲರಿನಲ್ಲಿ. ರೂಪಾಯಿ, ಡಾಲರ್ ವಿನಿಮಯ ದರ ಆಗಾಗ್ಗೆ ಬದಲಾಗುತ್ತಿರುತ್ತದೆ. ಆ ದೇಶದಲ್ಲಿ ವೆಚ್ಚಗಳು ಹಾಗೂ ಅವುಗಳ ಸ್ವರೂಪವೂ (ಇಲ್ಲಿಯಂತೆ) ಬದಲಾಗುತ್ತಿರುವದು ಸ್ವಾಭಾವಿಕವಾದುದರಿಂದ ಸಾರ್ವಕಾಲಿಕವಾಗಿ ಖಚಿತವಾದ ವೆಚ್ಚದ ಮೊತ್ತವನ್ನು ತಿಳಿಯುವುದು ಅಸಂಭವ. ಆದರೂ ಸಹ ವಿದ್ಯಾರ್ಥಿಯೊಬ್ಬನ, ಒಂದು ಶೈಕ್ಷಣಿಕ ವರ್ಷದ ಜೀವನ ನಿರ್ವಹಣೆ, ಶಿಕ್ಷಣ ಶುಲ್ಕ ಇತ್ಯಾದಿಗಳ ಮೊತ್ತ ಸುಮಾರು ೧೬೦೦೦ ಡಾಲರುಗಳು ಎಂದು ಅಂದಾಜಿಸಬಹುದು. ಅಂದರೆ ಸುಮಾರು ಐದು ಲಕ್ಷ ಅರವತ್ತು ಸಾವಿರ ರೂಪಾಯಿ ವಾಸ್ತವ್ಯ, ಸಂಚಾರ ವೆಚ್ಚ ಹಾಗೂ ಆರೋಗ್ಯ ವಿಮೆ (ಇದು ಕಡ್ಡಾಯ)ಗಳಿಗೆ ಪ್ರತ್ಯೇಕವಾಗಿ ಹಣ ಬೇಕು. ಅನೇಕರು ಕನಸು ಕಾಣುವಂತೆ ಸ್ವಂತ ಬಲದ ಮೇಲೆ ಅಮೆರಿಕೆಯಲ್ಲಿ ಶಿಕ್ಷಣ ಮುಂದುವರೆಯಿಸುವದು ಹಗಲುಗನಸೇ ಸರಿ. ನೀವು ಬೇರೊಬ್ಬರ ಸಹಾಯದಿಂದ ಅಥವಾ ಪ್ರಾಯೋಜಿತರಾಗಿ ಅಲ್ಲಿಗೆ ತೆರಳುತ್ತಿದ್ದರೆ ಆ ಪ್ರಶ್ನೆ ಬೇರೆ.

**ಧನ ಸಹಾಯ ದೊರಕಿಸಬಹುದಾದ ಮಾರ್ಗಗಳು?**

ಕೆಲವು ಲಭ್ಯವಿವೆ, ನಿಜ. ಆದರೆ, ಇವುಗಳನ್ನು ದೊರಕಿಸಿಕೊಳ್ಳಲು ತೀವ್ರ ಪೈಪೋಟಿ ಇರುತ್ತದೆ. ಅರ್ಜಿದಾರರಿಗೆ ಸಹಾಯದ ಅವಶ್ಯಕತೆ ಎಷ್ಟಿದೆ ಎಂಬುದನ್ನು ಸಹಾಯಧನ ನೀಡುವವರು ತುಲನಾತ್ಮಕವಾಗಿ ಗಮನದಲ್ಲಿರಿಸಿಕೊಂಡಿರುವರಾದರೂ ಅಖೈರಾಗಿ ಸಹಾಯಧನ ನೀಡಿಕೆಗೆ 'ಏಕೈಕ ಮಾನದಂಡ ವೈಯಕ್ತಿಕ ಪ್ರತಿಭೆ' ಎಂಬುದನ್ನು (ಅದಕ್ಕಿಂತಲೂ ಬಹಳ ಸಲೀಸಾದ ಪರಿಸ್ಥಿತಿಯಲ್ಲಿ ಜೀವಿಸುತ್ತಿರುವ) ಭಾರತೀಯ ವಿದ್ಯಾರ್ಥಿಗಳು ಚೆನ್ನಾಗಿ ನೆಪಿನಲ್ಲಿಟ್ಟುಕೊಳ್ಳಬೇಕು.

ಪದವಿ ಪಡೆಯಲು ತೆರಳಿದವರಿಗೆ ಪೂರ್ಣ ಪ್ರಮಾಣದ ಮತ್ತು ಅಂಶಿಕ ಶಿಷ್ಯ ವೃತ್ತಿಗಳಿವೆ. ಆದರೆ ಇವು ಖಾಸಗಿ ಅಥವಾ ಸ್ವತಂತ್ರ ಮಹಾವಿದ್ಯಾಲಯ ಮತ್ತು ವಿಶ್ವವಿದ್ಯಾಲಯಗಳಲ್ಲಿ ಮಾತ್ರ ಇವೆ.

ಸ್ನಾತಕೋತ್ತರ ಅಥವಾ ಸಂಶೋಧನೆ ಶಿಕ್ಷಣಕ್ಕಾಗಿ ತೆರಳಿದವರಿಗೆ ಪೂರ್ಣ ಪ್ರಮಾಣದ ಸೇವಾ ಶರತ್ತಿಲ್ಲದ ಶಿಷ್ಯ ವೇತನಗಳು, ಶಿಕ್ಷಣ ಶುಲ್ಕ ವಿನಾಯಿತಿ ಯೋಜನೆಗಳು, ಅರ್ಧಾವಧಿ ಸೇವೆಗೆ (ವಾರಕ್ಕೆ ಸುಮಾರು ೨೦ ಗಂಟೆಗಳು) ನೀಡುವ ಸಂಭಾವನೆಗಳು ಲಭ್ಯ. ಬೋಧನೆ, ಸಂಶೋಧನೆ ಅಥವಾ ಆಡಳಿತ ರಂಗಗಳಲ್ಲಿ ಅರ್ಧಾವಧಿ ಸೇವಾವಕಾಶಗಳಿವೆ.

ಇವುಗಳ ಸಹಾಯದಿಂದ ಕೆಲಮಟ್ಟಿಗೆ ನಿಮ್ಮ ವೆಚ್ಚಗಳನ್ನು ಸರಿದೂಗಿಸಬಹುದು.

**ಕಲಿಕೆ-ಗಳಿಕೆ**

ನೀವು ಅಭ್ಯಸಿಸುತ್ತಿರುವ ಸಂಸ್ಥೆಯ ಆವರಣದಲ್ಲಿಯೇ ಕಲಿಯುತ್ತಲೇ ಪೂರೈಸಬಹುದಾದ ಉದ್ಯೋಗಾವಕಾಶಗಳುಂಟು. ಆದರೆ, ಇವುಗಳಿಗೂ ನಿಮ್ಮ ಪ್ರತಿಭೆ ಏಕೈಕ ಮಾನದಂಡವಾಗಿರುವದರಿಂದ ಸುಲಭದಲ್ಲಿ ಇವು ಸಿಗಲಾರವು; ಅವುಗಳ ಸಂಖ್ಯೆಯೂ ಬಹಳ ಕಡಿಮೆ; ವೇತನ ಸಹ ನಿಮ್ಮ ವೆಚ್ಚವನ್ನು ಸರಿದೂಗಿಸದಷ್ಟು ಕಡಿಮೆ; ಬಹಳ ಭಾರತೀಯರಿಗೆ ತಮ್ಮ ಶಿಕ್ಷಣದತ್ತ ಪೂರ್ಣ ಪ್ರಮಾಣದ ಗಮನ ನೀಡುತ್ತಾ ಈ ಉದ್ಯೋಗಗಳನ್ನು ನಿಭಾಯಿಸುವದು ದೈಹಿಕವಾಗಿ ಅಸಾಧ್ಯ.

ನಿಮ್ಮ ಶಿಕ್ಷಣ ಸಂಸ್ಥೆಯಿಂದ ದೂರದ ಬೇರೊಂದು ಸ್ಥಳದಲ್ಲಿ ಉದ್ಯೋಗಗಳು ಲಭ್ಯವಿದ್ದರೂ, ಕ್ಲಿಷ್ಟ ಮತ್ತು ಕಟ್ಟುನಿಟ್ಟಾದ ಮಾರ್ಗದರ್ಶಿ ಸೂತ್ರಗಳ ಪಾಲನೆ ಕಡ್ಡಾಯವಾದುದರಿಂದ ಇವುಗಳ ಉಪಯೋಗ ವಿರಳ.

**ಉಚ್ಚ ಶಿಕ್ಷಣಾರ್ಹತೆ**

ಉಚ್ಚ ಶಿಕ್ಷಣವೆಂದರೆ, ಸಾಮಾನ್ಯವಾಗಿ, ಮಾಧ್ಯಮಿಕ ಶಿಕ್ಷಣದ ನಂತರದ ಶಿಕ್ಷಣ. ಈ ಉದ್ದೇಶಕ್ಕಾಗಿ ನೀವು ಅಮೇರಿಕೆಗೆ ತೆರಳಬಯಸುತ್ತೀರಾದರೆ :

೧. ಎಲ್ಲ ಪರೀಕ್ಷೆಗಳಲ್ಲಿಯೂ ನಿಮ್ಮ ಫಲಿತಾಂಶ ಏಕಪ್ರಕಾರವಾಗಿ ಉತ್ತಮವಾದುದಾಗಿರಬೇಕು.

೨. ಆ ದೇಶದಲ್ಲಿ ಶಿಕ್ಷಣ ಪೂರೈಸಲು ಅಗತ್ಯವಾದಷ್ಟು ಖಾತರಿಯುತ ಮತ್ತು ನಿಶ್ಚಿತ ಹಣಕಾಸಿನನುಕೂಲ ನಿಮಗಿದೆ ಎಂಬುದನ್ನು ನೀವು ಸಿದ್ಧಪಡಿಸಬೇಕು.

೩. ನಿಮಗೆ ಇಂಗ್ಲಿಷ್ ಭಾಷೆಯಲ್ಲಿ ಪ್ರಾವೀಣ್ಯವಿದೆಯೆಂಬುದನ್ನು ನಿಗದಿತಪಡಿಸಿದ

ಪರೀಕ್ಷೆಯಲ್ಲಿನ ನಿಮ್ಮ ಫಲಿತಾಂಶದ ಮೂಲಕ ತೋರಿಸಬೇಕು.

### ಪದವಿ ಕಾರ್ಯಕ್ರಮ ಮತ್ತು ಪ್ರವೇಶ ಪ್ರಕ್ರಿಯೆ

ಅಮೇರಿಕೆಯಲ್ಲಿ ೧೮೦೦ಕ್ಕಿಂತಲೂ ಹೆಚ್ಚು ಅಧಿಕೃತ ಅಂಗೀಕಾರಪಡೆದ ಮಹಾ/ವಿಶ್ವವಿದ್ಯಾಲಯಗಳಿವೆ. ನೀವು ಇಲ್ಲಿಯ ಪ್ರೌಢ ಮಾಧ್ಯಮಿಕ ಶಾಲಾಂತ್ಯ ಪರೀಕ್ಷೆ (SSC Exam)ಯಲ್ಲಿ ಉತ್ತೀರ್ಣರಾಗಿದ್ದರೆ ಅಲ್ಲಿಯ ಪದವಿ ಪೂರ್ವ ಶಿಕ್ಷಣ ಕ್ರಮಕ್ಕೆ ಸೇರಿಸಿಕೊಳ್ಳುತ್ತಾರೆ. ಅದರ ಯಶಸ್ವಿ ಪೂರ್ತಿಯ ನಂತರ ಮುಂದೆರಡು ವರ್ಷಗಳ ನಂತರ ಪದವಿ ದೊರೆಯುತ್ತದೆ.

ಅಮೇರಿಕೆಯ (ವಿಶ್ವ) ವಿದ್ಯಾಲಯಗಳಲ್ಲಿ ನಿಮಗೆ ಪ್ರವೇಶ ಬೇಕಾಗಿದ್ದರೆ ಒಂದರಿಂದ ಒಂದೂವರೆ ವರ್ಷದ ಮೊದಲೇ ಈ ಪ್ರಕ್ರಿಯೆಗೆ ಚಾಲನೆ ಕೊಡಿ.

ನೀವು ಸಲ್ಲಿಸುವ ಪ್ರವೇಶ ಅರ್ಜಿಯ ಕಟ್ಟಿನಲ್ಲಿ ಕೆಳಗಿನವು ಇರಲೇಬೇಕು.

೧. ಪ್ರವೇಶಕ್ಕಾಗಿ ಅರ್ಜಿ.
೨. ಗುಣಾಂಕ ಪಟ್ಟಿಗಳು; ಪದವಿ ಪ್ರಮಾಣ ಪತ್ರಗಳು ಇತ್ಯಾದಿ.
೩. ಹಣಕಾಸಿನ ಸೌಲಭ್ಯದ ಖಾತರಿಯ ದಾಖಲೆ.
೪. (ಅಗತ್ಯವಿದ್ದರೆ) ಹಣಕಾಸಿನ ಸಹಾಯಕ್ಕಾಗಿ ಅರ್ಜಿ.
೫. ನಿಮ್ಮ ಶಿಕ್ಷಣ ಯೋಜನೆಯ ಉದ್ದೇಶದ ಬಗೆಗಿನ ನಿಬಂಧ.
೬. ಪ್ರವೇಶ ಪರೀಕ್ಷೆಗಳಲ್ಲಿ ಪಡೆದ ಗುಣಾಂಕಗಳ ವಿವರ.
೭. ಶಿಫಾರಸು ಪತ್ರಗಳು.
೮. ಮಾಧ್ಯಮಿಕ ಶಾಲಾಂತ್ಯ ವರದಿ (ಪದವಿ ಗಳಿಸಬಯಸುವವರಿಗೆ)
೯. ಪಠ್ಯೇತರ ಚಟುವಟಿಕೆಗಳ ಬಗೆಗೆ ಮಾಹಿತಿ.
೧೦. ಅರ್ಜಿ ಶುಲ್ಕ.
೧೧. ಆವಶ್ಯಕವೆಂದು ಪರಿಗಣಿಸಬಹುದಾದ ಬೇರಾವುದೇ ವಿವರ.

**ನೆನಪಿಡಿ :** ಅಪೂರ್ಣ ಅಥವಾ ಅವಧಿ ಮೀರಿ ಸಲ್ಲಿಸಲಾದ ಅರ್ಜಿಗಳನ್ನು ಯಾವ ಕಾರಣಕ್ಕೂ ಪುನಃ ಪರಿಶೀಲಿಸುವುದಿಲ್ಲ.

### ಸ್ನಾತಕೋತ್ತರ ಮತ್ತು ಪಂಡಿತ ಪದವಿ (Ph.D.)ಗಳ ಕಾರ್ಯಕ್ರಮ

ಆ ದೇಶದಲ್ಲಿ ಬೇರೆ ಬೇರೆ ಸ್ನಾತಕೋತ್ತರ ಪದವಿ, ಸಂಶೋಧನೆ ಪದವಿಗಳನ್ನು ನೀಡುವ ಮೂರು ಸಾವಿರಕ್ಕಿಂತ ಹೆಚ್ಚು ವಿಶ್ವವಿದ್ಯಾಲಯಗಳಿಗೆ ಸಮನಾದ ಸಂಸ್ಥೆಗಳಿವೆ. ನಿಮ್ಮ ಅಗತ್ಯಗಳಿಗೆ ಹೊಂದುವ ಸಂಸ್ಥೆಯನ್ನು ಆಯ್ಕೆ ಮಾಡಿಕೊಳ್ಳುವ ಹೊಣೆ ನಿಮ್ಮದು. ಈ ವಿಷಯದಲ್ಲಿ USEFI ಪ್ರತಿಷ್ಠಾನ ('ಕೊನೆಯ ಮಾತು' ನೋಡಿ.)ದ ಸದಸ್ಯತ್ವ ಹೊಂದುವ ಮೂಲಕ ನಿಮ್ಮ ಕೆಲಸವನ್ನು ಸುಗಮಗೊಳಿಸಿಕೊಳ್ಳಬಹುದು.

ಭಾರತದಲ್ಲಿ ಸಾಮಾನ್ಯವಾಗಿ ೧೫ ವರ್ಷಗಳ ಶೈಕ್ಷಣಿಕ ತರಬೇತಿಯ ನಂತರ ಪದವಿ ಲಭ್ಯ. (ಉದಾ : ೫+ ವರ್ಷಕ್ಕೆ ಪ್ರಾಥಮಿಕ ಶಾಲಾ ಪ್ರವೇಶ; ೧೨+ ವರ್ಷಕ್ಕೆ ಹಿರಿಯ ಪ್ರಾಥಮಿಕ ಶಾಲಾಂತ್ಯ ಪರೀಕ್ಷೆ; ೧೫+ ವರ್ಷಕ್ಕೆ ಪ್ರೌಢ ಮಾಧ್ಯಮಿಕ ಶಾಲಾಂತ್ಯ ಪರೀಕ್ಷೆ; ೧೭+ ವರ್ಷಕ್ಕೆ ಪದವಿ ಪೂರ್ವ ಪರೀಕ್ಷೆ; ೨೦+ ವರ್ಷಕ್ಕೆ ಪದವಿ ಶಿಕ್ಷಣ ಸಂಪೂರ್ಣ=೧೫ ವರ್ಷದ ಒಟ್ಟು ಶಿಕ್ಷಣ) ಆದರೆ ಅಮೇರಿಕೆಯಲ್ಲಿ ಪದವಿಯೋತ್ತರ ಶಿಕ್ಷಣ ೧೬ ವರ್ಷಗಳ ಶಿಕ್ಷಣದ ನಂತರವೇ ಲಭ್ಯ. ಹಾಗಾಗಿ ನಮ್ಮ ದೇಶದಲ್ಲಿ ಸ್ನಾತಕೋತ್ತರ ಶಿಕ್ಷಣದ ಮೊದಲ ವರ್ಷವನ್ನಾದರೂ ಯಶಸ್ವಿಯಾಗಿ ಪೂರೈಸಿದವರು ಆ ದೇಶದ ಸ್ನಾತಕೋತ್ತರ ಶಿಕ್ಷಣದ ಮೊದಲ ವರ್ಷಕ್ಕೆ ಸೇರ್ಪಡೆಗೊಳ್ಳಲು ಅರ್ಹರು. ಅಂಚೆ ಮೂಲಕ ಶಿಕ್ಷಣ ಪಡೆದು ಗಳಿಸಿದ ಪದವಿಗಳನ್ನು ಪ್ರವೇಶಕ್ಕಾಗಿ ಸಾಮಾನ್ಯವಾಗಿ ಪರಿಗಣಿಸುವದಿಲ್ಲ. ಅಲ್ಲದೆ ನಿಮಗೆ ಪದವಿ ನೀಡಿದ ಶಿಕ್ಷಣ ಸಂಸ್ಥೆ ಅಲ್ಲಿಯ ಶಿಕ್ಷಣ ಇಲಾಖೆಯ ಮಾನ್ಯತೆ ಪಡೆದಿರಬೇಕು.

ಪ್ರೌಢ ಮಾಧ್ಯಮಿಕ ಶಾಲಾಂತ್ಯ ಪರೀಕ್ಷೆಯಿಂದ ಮೊದಲುಗೊಂಡು ಎಲ್ಲ ಪರೀಕ್ಷೆಗಳಲ್ಲಿಯೂ (ಮೊದಲ ವರ್ಗ ಪಡೆಯಲು ಅವಶ್ಯವಿದ್ದಷ್ಟು) ಏಕಪ್ರಕಾರವಾಗಿ ಉತ್ತಮ ಅಂಕಗಳನ್ನು ಗಳಿಸಿರಬೇಕು.

ನಮ್ಮಲ್ಲನೇಕರಿಗೆ ಇಂಗ್ಲೀಷ್ ಮಾತೃಭಾಷೆಯಲ್ಲ, ವಿದೇಶ ಭಾಷೆ. ಆದುದರಿಂದ ಆ ಭಾಷೆಯಲ್ಲಿ ಪರಿಣತಿಯನ್ನು ಗೊತ್ತುಪಡಿಸುವ ಪರೀಕ್ಷೆಯಲ್ಲಿ (Test of English as a Foreign Language-TOEFL) ನೀವು ಕನಿಷ್ಠ ೬೦೦ ಗುಣಗಳನ್ನು ಸಂಪಾದಿಸಿರಬೇಕು.

ನೀವು ಆಯ್ದುಕೊಳ್ಳಬಯಸುವ ವಿಷಯ



ನಾಟಕ ಶಾಸ್ತ್ರ, ಲಲಿತ ಕಲೆ, ಶಿಲ್ಪಶಾಸ್ತ್ರ ಮುಂತಾದವುಗಳಲ್ಲೊಂದಾಗಿದ್ದರೆ ಈ ವಿಷಯಗಳಲ್ಲಿ ನೀವು ಈಗಾಗಲೇ ತಲುಪಿದ ಮಟ್ಟವನ್ನು ಪ್ರತಿಬಿಂಬಿಸುವ ಕೃತಿ ಸಂಗ್ರಹ (portfolio) ವನ್ನೂ ಪ್ರವೇಶ ಅರ್ಜಿಯೊಡನೆ ರವಾನಿಸಬೇಕಾಗಬಹುದು. ಕೆಲವು ವಿಶ್ವವಿದ್ಯಾಲಯಗಳಲ್ಲಿ ಪ್ರವೇಶವು ಅಭಿರುಚಿ ಪರೀಕ್ಷೆಯಲ್ಲಿ ನಿಮ್ಮ ನಿಗದಿತ ಪಾತಳಿಯ ಯಶಸ್ಸಿಗೆ ಒಳಪಟ್ಟಿರುತ್ತದೆ.

### ಕೊನೆಯ ಮಾತು

ಈ ಲೇಖನದಲ್ಲಿ ನೀಡಿರುವ ಮಾಹಿತಿಯು ಎಲ್ಲರಿಗೂ ಮಾರ್ಗದರ್ಶಕವಾಗುವಂತಹ ಸ್ಥೂಲ ಸ್ವರೂಪದ್ದಾಗಿದೆ. ಶಿಕ್ಷಣ ವ್ಯವಸ್ಥೆ ಯಾವ ದೇಶದ್ದೇ ಆಗಲಿ-ನಿರಂತರ ಚಲನಶೀಲವಾದುದು. ಆದುದರಿಂದ ವೈಯಕ್ತಿಕ ಸಮಸ್ಯೆಗಳು ಉದ್ಭವಿಸುವದು ಸಹಜ. ಭಿನ್ನ ಭಿನ್ನವಾದ ವೈಯಕ್ತಿಕ ಸಮಸ್ಯೆಗಳಿಗೆ ತಾಜಾ ಉತ್ತರ ಕಂಡುಕೊಳ್ಳುವ ಸಲುವಾಗಿ ಮುಂದೆ ಹೇಳುವ ಸಂಸ್ಥೆಗಳನ್ನು ಸಂಪರ್ಕಿಸಿ.

೧. United States Education Foundation in India (USEFI)
12, Hailey Road
NEW DELHI - 110 001.

(ಈ ಪ್ರತಿಷ್ಠಾನದ ಪ್ರಾದೇಶಿಕ ಕಾರ್ಯಾಲಯಗಳು, ಚೆನ್ನೈ (ಮದರಾಸು), ಮುಂಬೈ, ಕಲಕತ್ತೆಗಳಲ್ಲಿಯೂ ಇವೆ.

೨. ಮದರಾಸಿನ "Foreign Studies Service Bureau" ಸಹ ಆಸಕ್ತರಿಗೆ ದಕ್ಷ, ಶೀಘ್ರ ಹಾಗೂ ಸಂಪೂರ್ಣ ಮಾರ್ಗದರ್ಶನ ನೀಡುತ್ತಿದೆ. ಇದು ಮೂವತ್ತು ವರ್ಷಗಳಷ್ಟು ಹಳೆಯ ಸಂಸ್ಥೆ. ೧೨ ಸಾವಿರಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿಗೆ ಈಗಾಗಲೇ ಸೇವೆ, ಸಹಾಯ ಸಲ್ಲಿಸಿದೆ. ಸಂಪೂರ್ಣ ಪರಿಣತಿ ಮತ್ತು ವೃತ್ತಿ ತರಬೇತಿ ಹೊಂದಿದ ಆಡಳಿತ ಸಿಬ್ಬಂದಿಯಿಂದ ಸುಸಜ್ಜಿತಗೊಂಡ ಈ ಸಂಸ್ಥೆಯ ಮುಖ್ಯಸ್ಥೆ ಶ್ರೀಮತಿ ಸಂಯುಕ್ತಾ ಆನಂದ್.

## ಬ್ರಾಹ್ಮಣ ವಿದ್ಯಾರ್ಥಿಗಳಿಂದ ವಿದ್ಯಾರ್ಥಿನಿಲಯಕ್ಕಾಗಿ ಅರ್ಜಿ

ಹೊಯ್ಸಳ ಕರ್ನಾಟಕ ಸಂಘ, ೧೯೯೭-೯೮ನೇ ಸಾಲಿನಲ್ಲಿ ಕಾಲೇಜು ಮತ್ತು ತಾಂತ್ರಿಕ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಬ್ರಾಹ್ಮಣ ವಿದ್ಯಾರ್ಥಿಗಳಿಂದ ವಿದ್ಯಾರ್ಥಿನಿಲಯಕ್ಕಾಗಿ ಅರ್ಜಿ ಆಹ್ವಾನಿಸಿದೆ.

ಅರ್ಹರಿಗೆ ಉಚಿತ ವ್ಯವಸ್ಥೆ ಕಲ್ಪಿಸಲಾಗುತ್ತದೆ. ಆಸಕ್ತರು ಹಾಲಿ ಓದುತ್ತಿರುವ ಕಾಲೇಜಿನ ಪ್ರವೇಶ ಪತ್ರ ಒಳಗೊಂಡಂತೆ ನ. ೩೦ರ ಒಳಗೆ ಭರ್ತಿ ಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ಹೊಯ್ಸಳ ಕರ್ನಾಟಕ ಸಂಘ, ೩ನೇ ಅಡ್ಡರಸ್ತೆ, ಹೊಂಬೇಗೌಡ ನಗರ, ಬೆಂಗಳೂರು-೨೭ ಇವರಿಗೆ ಕಳುಹಿಸಲು ಪ್ರಕಟಣೆ ಕೋರಿದೆ.

## ವಿದ್ಯಾರ್ಥಿ ವೇತನ

ಕುರುಹಿನಶೆಟ್ಟಿ ಕೇಂದ್ರ ಸಂಘ, ಪಿ.ಯು.ಸಿ., ಡಿಪ್ಲೊಮಾ, ಎಂಬಿಬಿಎಸ್ ಹಾಗೂ ತಾಂತ್ರಿಕ ಪದವಿ ತರಗತಿಗಳಲ್ಲಿ ಓದುತ್ತಿರುವ ಜನಾಂಗದ ವಿದ್ಯಾರ್ಥಿಗಳಿಂದ ವಿದ್ಯಾರ್ಥಿವೇತನಕ್ಕಾಗಿ ಅರ್ಜಿಗಳನ್ನು ಆಹ್ವಾನಿಸಿದೆ.

ಅರ್ಜಿಗಳನ್ನು ಡಿ.೧೦ರ ಒಳಗೆ ಕುರುಹಿನ ಶೆಟ್ಟಿ ಕೇಂದ್ರ ಸಂಘ, ಹೊಸ ಪ್ರೌಢಶಾಲೆ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು-೪ (ದೂರವಾಣಿ ೬೨೫೭೪೬) ಇಲ್ಲಿಗೆ ಕಳುಹಿಸುವುದು.




# ಕುವೆಂಪು ವಿಶ್ವವಿದ್ಯಾನಿಲಯ ಎಂ.ಇಡಿ. ಪ್ರವೇಶಕ್ಕೆ ಅರ್ಜಿ

೧೯೯೭-೯೮ನೇ ಶೈಕ್ಷಣಿಕ ವರ್ಷಕ್ಕಾಗಿ ಕುವೆಂಪು ವಿಶ್ವವಿದ್ಯಾಲಯವು ಎಂ.ಇಡಿ. ಪ್ರವೇಶಕ್ಕೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆ ಮತ್ತು ಪ್ರಾಸ್ಪೆಕ್ಟಸ್‌ನ್ನು ರೂ. ೫೦.೦೦ನ್ನು ಪಾವತಿಸಿ ಆಡಳಿತಾಧಿಕಾರಿಗಳು ಜ್ಞಾನಸಹ್ಯಾದ್ರಿ, ಶಂಕರಘಟ್ಟ ಇವರಿಂದ ಪಡೆದುಕೊಳ್ಳಬಹುದಾಗಿದೆ. ಅಂಚೆ ಮೂಲಕ ಅರ್ಜಿ ನಮೂನೆ ಮತ್ತು ಪ್ರಾಸ್ಪೆಕ್ಟಸನ್ನು ಪಡೆಯಲಿಚ್ಛಿಸುವ ವಿದ್ಯಾರ್ಥಿಗಳು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬಿ.ಆರ್. ಪ್ರಾಜೆಕ್ಟ್ ಶಾಖೆ ಅಥವಾ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಶಂಕರಘಟ್ಟ ಶಾಖೆ ಇಲ್ಲಿ ಸಂದಾಯವಾಗುವಂತೆ ರೂ. ೫೦.೦೦ ಡಿ.ಡಿ.ಯನ್ನು ''ಹಣಕಾಸು ಅಧಿಕಾರಿಗಳು, ಕುವೆಂಪು ವಿಶ್ವವಿದ್ಯಾನಿಲಯ'' ಇವರ ಪದನಾಮಕ್ಕೆ ಪಡೆದು ರೂ. ೬.೦೦ರ ಮೌಲ್ಯದ ಅಂಚೆ ಚೀಟಿ ಅಂಟಿಸಿದ ೧೮ಸೆಂ.ಮೀ. x೨೨ ಸೆಂ.ಮೀ. ಅಳತೆಯ ಸ್ವವಿಳಾಸವುಳ್ಳ ಖಾಲಿ ಲಕೋಟೆಯನ್ನು ಮನವಿ ಪತ್ರದ ಜೊತೆಯಲ್ಲಿ ಆಡಳಿತಾಧಿಕಾರಿಗಳು, ಕುವೆಂಪು ವಿಶ್ವವಿದ್ಯಾಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ-೫೭೭ ೪೫೧ ಇವರಿಗೆ ಸಲ್ಲಿಸಬೇಕು. (ಅಂಚೆ ಮೂಲಕ ಅರ್ಜಿ ಪಡೆಯುವವರಿಗೆ ಡಿ.ಡಿ. ಹೊರತುಪಡಿಸಿ ಬೇರೆ ಯಾವುದೇ ರೂಪದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ).

ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳ ಛಾಯಾ ಪ್ರತಿಗಳೊಂದಿಗೆ 'ರಿಜಿಸ್ಟರ್ಡ್ ಪೋಸ್ಟ್ ವಿತ್ ಅಕ್‌ನಾಲೆಡ್ಜ್‌ಮೆಂಟ್ ಡ್ಯೂ'' ಮೂಲಕ ಆಡಳಿತಾಧಿಕಾರಿಗಳು, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ-೫೭೭ ೪೫೧ ಇವರಿಗೆ ದಿನಾಂಕ ೨೫-೧೧-೯೭ರೊಳಗೆ ತಲುಪುವಂತೆ ಕಳಿಸಬೇಕು. ತಡವಾಗಿ ಬಂದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ. ದಿನಾಂಕ ೧೪-೫-೯೭ರ ಅಧಿಸೂಚನೆಯಂತೆ ಅರ್ಜಿ ಸಲ್ಲಿಸಿದ ವಿದ್ಯಾರ್ಥಿಗಳು ಪುನಃ ಅರ್ಜಿ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ.

# ಹೆಗ್ಗೋಡಿನಲ್ಲಿ ಪತ್ರಕರ್ತರ ಶಿಬಿರ

**ಭಾ**ರತ ಸರ್ಕಾರದ ರಾಷ್ಟ್ರೀಯ ವಿಜ್ಞಾನ, ತಂತ್ರಜ್ಞಾನ ಮತ್ತು ಸಂವಹನ ಸಂಸ್ಥೆಯ ನೆರವಿನಿಂದ ಗ್ರಾಮಾಂತರ ಸಮುದಾಯ ವಿಜ್ಞಾನ ಕೇಂದ್ರ, ಶೆಡ್ತೀಕೆರೆ-ಇವರ ಆಶ್ರಯದಲ್ಲಿ ಸಾಗರ ತಾಲ್ಲೂಕು ಪತ್ರಕರ್ತರ ಸಂಘದ ಸಹಕಾರದೊಂದಿಗೆ ಪತ್ರಕರ್ತರ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿದೆ.

ಡಿಸೆಂಬರ್ ೩ನೇ ವಾರ ಸಾಗರ ತಾ. ಹೆಗ್ಗೋಡಿನ ನೀನಾಸಂ ಆವರಣದಲ್ಲಿ ನಡೆಯಲಿರುವ ಈ ಶಿಬಿರದಲ್ಲಿ ಭಾಗವಹಿಸಲು ಇಚ್ಛಿಸುವವರು ನವೆಂಬರ್ ೨೫ರೊಳಗೆ ತಮ್ಮ ಹೆಸರು, ವಿಳಾಸ, ವೃತ್ತಿ, ಅನುಭವ ಇತ್ಯಾದಿ ವಿವರಗಳನ್ನು ಕೆಳಕಾಣಿಸಿದ ವಿಳಾಸಕ್ಕೆ ೨೫ ರೂ. ಪ್ರವೇಶ ಶುಲ್ಕದೊಂದಿಗೆ ಕಳಿಸಿಕೊಡುವುದು.

ಶಿಬಿರವನ್ನು ಕರ್ನಾಟಕದ ಹೆಸರಾಂತ ವಿಜ್ಞಾನ ಲೇಖಕರು, ಪತ್ರಕರ್ತರು ಹಾಗೂ ಬರಹಗಾರರು ನಡೆಸಿಕೊಡಲಿದ್ದಾರೆ. ಆಯ್ಕೆಯಾದ ಶಿಬಿರಾರ್ಥಿಗಳಿಗೆ ಊಟ, ವಸತಿ, ಪಠ್ಯ-ಸಾಹಿತ್ಯಗಳನ್ನು ಉಚಿತವಾಗಿ ಒದಗಿಸಲಾಗುವುದು. ಆಯ್ಕೆಯಾದವರನ್ನು ಪತ್ರಮುಖೇನ ಸಂಪರ್ಕಿಸಲಾಗುವುದು.

ಸಂಪರ್ಕ ವಿಳಾಸ: **ಗ್ರಾಮಾಂತರ ಸಮುದಾಯ ವಿಜ್ಞಾನ ಕೇಂದ್ರ,**
ಶೆಡ್ತೀಕೆರೆ, ಅಂಚೆ: ವರದಾಮೂಲ ೫೭೭ ೪೧೭
ಸಾಗರ, ಶಿವಮೊಗ್ಗ ಜಿಲ್ಲೆ.

# ನೀವೂ ಇಂಗ್ಲಿಷ್ ಕಲಿಯಿರಿ



**ಇನ್ನು ಮುಂದೆ ಪ್ರತಿ ತಿಂಗಳು ಪ್ರಕಟವಾಗುವ ಈ ಅಂಕಣದಲ್ಲಿ ಪ್ರಖ್ಯಾತ ಶಿಕ್ಷಣ ತಜ್ಞರೊಬ್ಬರು ಸಾಮಾನ್ಯರಿಗೂ ಅರ್ಥವಾಗುವಂತೆ ಸರಳವಾಗಿ ಇಂಗ್ಲಿಷ್ ಕಲಿಸುತ್ತಾರೆ.**

## ವಾಕ್ಯ – Sentence

ಜಾನ್ : ಜಾನಕಿ, ಇಂಗ್ಲಿಷ್ ಕಲಿಯುವದು ಎಲ್ಲಿಗೆ ಬಂತು?

ಜಾನಕಿ : ಎನಪಾ, ಅದು ಭಾರಿ ಡಿಫಿಕಲ್ಟ್!

ಜಾನ್ : ಅಂದರ ನಿನಗ ಇಂಗ್ಲಿಷ್ ಬಂದ್ದಂಗ್ ಆತು. ಅದು ಈಸಿ ಅಲ್ವಾ, ಯಾಕಂದರ ಡಿಫಿಕಲ್ಟ್ ಶಬ್ದ ಕಲಿತೆ.

ಜಾನಕಿ : ಅದೇನೋ ಎಲ್ಲರೂ ಮಾತಾಡ್ತಾರ. ಒಂದು ವಾಕ್ಯ ಸರಿಯಾಗಿ ಹೇಳಾಕ ಬರುವದಿಲ್ಲ.

ಜಾನ್ : ನಾ, ಹೇಳ್ತೇನಿ ಕೇಳು. ಇಂಗ್ಲಿಷ ಭಾರಿ Easy ಅದ. ಅದರಾಗ ಇರೋದು ೨೬ ಅಕ್ಷರಗಳು ಮಾತ್ರ. ಅಂದ್ರ Alphabets. ಆ ೨೬ ಅಕ್ಷರದೊಳಗೆ ಎಲ್ಲಾ ಶಬ್ದ, ಎಲ್ಲಾ ವಾಕ್ಯ. ಇಂಗ್ಲಿಷ್ ಭಾಷೆನss ನಿಂತದ.

ಜಾನಕಿ : ಕನ್ನಡ ಅದಕ್ಕೂ ಈಸಿ ಅಲ್ಲೇನು?

ಜಾನ್ : ಹೌದು Easy. ಕನ್ನಡದಾಗ ಒಟ್ಟು ೫೨ ಮೂಲಾಕ್ಷರಗಳು ನೋಡು. ನೀ ಇಂಗ್ಲಿಷ ಕಲಿಯಬೇಕಲ್ಲಾ ಕೇಳು. ಆ ೨೬ ಅಕ್ಷರಗಳನ್ನು ನಾಲ್ಕು ನಮೂನೆಯಲ್ಲಿ ಬರೀತಾರ. ಸಾಮಾನ್ಯವಾಗಿ ರೂಢಿಯಲ್ಲಿರುವ ಎರಡು ನಮೂನೆಯ ಅಕ್ಷರ ಹೀಗೆ

**ನಮೂನೆ I** - A B C D E F G H I J K L M N O P Q R

**ನಮೂನೆ II** - a b c d e f g h i j k l m n o p q r

**ನಮೂನೆ I** - S T U V W X Y Z

**ನಮೂನೆ II** - s t u v w x y z

ಜಾನಕಿ : ಇವೆಲ್ಲಾ ಹೆಂಗ ನೆನಪುಳಿಬೇಕೊ?

ಜಾನ್ : ನೋಡು, ಒಂದು ದೊಡ್ಡ ಪೇಪರಿನಲ್ಲಿ ದೊಡ್ಡ ದೊಡ್ಡ ಅಕ್ಷರಗಳನ್ನು ಬರೆದಿಡು. ಅದನ್ನು ಯಾವಾಗಲೂ ನಿನಗ ಕಾಣೂ ಹಂಗ ಎದುರಿಗೆ ಗೋಡೆ ಮೇಲೆ ಅಂಟಿಸು ಮತ್ತು ಮೇಲಿನ ಅಕ್ಷರ ನೋಡು. ಮೇಲಿನ ಐದು ಅಕ್ಷವಗಳ ಕೆಳಗ ಗೆರೆ ಎಳೆದದ. ಅವು ಯಾವುವು ಹೇಳು?

ಜಾನಕಿ : ಎ, ಇ, ಐ, ಓ, ಯು.

ಜಾನ್ : ಬರೋಬರಿ ಹೇಳಿದಿ. ಇವು "ಸ್ವರಗಳು" ಅಂದರ ಕನ್ನಡದಲ್ಲಿ 'ಅ' ದಿಂದ 'ಅಂ-ಅಃ' ದವರೆಗಿನ ಅಕ್ಷರಗಳಂತೆ. ಮತ್ತು ಕ್, ಚ್, ತ್, ಪ್ ಮುಂತಾದವುಗಳು 'ವ್ಯಂಜನ' ಅಂತ. ಅಂದರ ಸ್ವರಗಳನ್ನು ಸ್ವತಂತ್ರವಾಗಿ ಉಪಯೋಗಿಸಬಹುದು. ವ್ಯಂಜನಕ್ಕೆ ಸ್ವರ ಕೂಡಿಸಬೇಕು. ಹೆಂಗಂದ್ರ ಕ್+ಅ=ಕ
ಈ ರೀತಿ ಇಂಗ್ಲಿಷದಾಗ ೫ ಸ್ವರಗಳದಾವ ಮತ್ತು ೨೧ ವ್ಯಂಜನಗಳದಾವ.

ಜಾನಕಿ : ಮತ್ತss ಇವು ಶಬ್ದ ಅಲ್ಲೇನು? ಶಬ್ದ ಅಂದರೇನು? ವಾಕ್ಯ ಅಂದರೇನು?

ಜಾನ್ : ಅಕ್ಷರಗಳ ಗುಂಪಿಗೆ, ಅಂದರ ಅವುಗಳನ್ನು ಒಂದೆಡೆ ಬರೆದಾಗ ಅದಕ್ಕ ಒಂದು ಅರ್ಥ ಬರಬೇಕು. ಆಗ ಅದನ್ನ ಶಬ್ದ ಅಂತಾರ. ಈಗ ನೋಡು DRBI ಈ ರೀತಿ ಬರೆದ ಅಕ್ಷರಗಳಿಗೆ ಯಾವ ಅರ್ಥವಿಲ್ಲದ್ದಕ್ಕ ಅದು ಶಬ್ದ ಅಲ್ಲ, ಆದರ ಇದನ್ನು BIRD ಅಂತ ಬರೆದರ 'ಬರ್ಡ್' ಅರ್ಥ 'ಪಕ್ಷಿ' ಇದಕ್ಕ ಶಬ್ದ ಅನ್ನುವದು.

ಜಾನಕಿ : ಏನೊ ಮಹಾ ಹೇಳಿದಿ. ಕನ್ನಡದಾಗು ಹೀಂಗ ಅಲ್ಲೇನ. ನೋಡು 'ಯಣನಾರ' ಅರ್ಥ ಏನು? ಇದನ್ನು 'ನಾರಾಯಣ' ಅಂದ್ರ ಹೆಸರಲ್ಲೇನು?

ಜಾನ್ : ಕರೆಕ್ಟ್, ನೀ ಭಾಳ ಶಾಣ್ಯಾಕಿ ಅದಿ. ಇಂತಾ ಶಬ್ದಗಳ ಸಮೂಹಕ (ಅದು ಅರ್ಥ ಕೊಡಬೇಕು) ವಾಕ್ಯ ಅಂತಾರ. ಕನ್ನಡದಾಗೂ ಅಷ್ಟ, ಇಂಗ್ಲಿಷದಾಗೂ ಅಷ್ಟ. ನೋಡು, ಮಾರ್ಕೆಟ್ ಗೋ ಐ ಟು ಅಂದರ ಅರ್ಥ ಆಗೋದಿಲ್ಲ. ಇದನ್ನ ಐ ಗೋ ಟು ಮಾರ್ಕೇಟ್ (I go to market) ಅಂದರ ನಾನು ಪೇಟೆಗೆ ಹೋಗುತ್ತೇನೆ. ಇದು ವಾಕ್ಯ. Sentence ಅಂತಾರ.

ಜಾನಕಿ : ಇಂಗ್ಲಿಷದಾಗ ಹೇಳು sentence ಅಂತ ಎದಕ್ಕ ಅಂತಾರ.

ಜಾನ್ : ಮೇಲೆ ಹೇಳಿದ್ದನ್ನ ಹೇಳ್ತೇನೆ. A sentence is a group of words which makes complete sense ತಿಳಿತ!

ಜಾನಕಿ : ತಿಳಿತ ಬಿಡೋ. ಅದರಾಗೇನೈತಿ ನಾ ಹೇಳ್ಲೇನು?

ಜಾನ್ : ನೀ ಜಾಣ ಅದಿ. ಏಕಪಾಠಿ. ಅದಕ್ಕ ವಾಕ್ಯಗಳಲ್ಲಿ ಎಷ್ಟು ವಿಧ ಅನ್ನೋದನ್ನ ಹೇಳ್ತೇನಿ. ಲಕ್ಷಗೊಟ್ಟು ಕೇಳು. ಏಕಪಾಠಿ.

ಜಾನಕಿ : ನೀ, ಅಣಕಿಸಬ್ಯಾಡ, ಹೇಳು.

ಜಾನ್ : ವಾಕ್ಯಗಳಲ್ಲಿ ಇರೋದು ಐದು ನಮೂನೆ. ಆದರ ಇತ್ತೀಚೆಗೆ ನಾಲ್ಕು ಅಂತಾರ. ಇರಲಿ, ಕೇಳಿಲ್ಲಿ.

1. Assertive Sentence : ಸಾದಾ ವಾಕ್ಯ. ಒಂದು ಹೇಳಿಕೆಯನ್ನು ಕೊಡುವದು. ಉದಾ: 1. Janaki went to class to learn English. 2. I go to market.

2. Interrogative Sentence : ಪ್ರಶ್ನೆ ಕೇಳುವದು. Where is your book? What is your name? ಇಲ್ಲಿ ವಾಕ್ಯದ ಕೊನೆಗೆ ಪ್ರಶ್ನೆ ಗುರ್ತು ಕೊಡಬೇಕು.

3. Imperative sentence : ಆಜ್ಞೆ ಮಾಡುವದು, ವಿನಂತಿಸುವದು. ಉದಾ: Get out, Go to market, Please give me a coin.

4. Exclamatory Sentence : ಉದ್ಗಾರ ತೆಗೆಯುವದು. ಅದು ಆನಂದದಿಂದಿರಬಹುದು ಅಥವಾ ಕೆಡುಕೆನಿಸಿರಬಹುದು.

ಉದಾ : How very cold the night is!
What a Shame!
ಇಲ್ಲಿ ವಾಕ್ಯದ ಕೊನೆಗೆ ಉದ್ಗಾರದ ಗುರ್ತನ್ನು (!) ಕೊಡಬೇಕು.

ಜಾನಕಿ : ಅಂದರ! ಇಂಗ್ಲಿಷ್ ಬಂದ್ಹಾಂಗ ಆತೇನು?

ಜಾನ್ : ಸ್ವಲ್ಪ ತಡೆ. ನಾನು ಹೇಳುದನ್ನ ಕೇಳು. ಒಂದು ವಾಕ್ಯದಲ್ಲಿ ಎರಡು ಭಾಗ ಮಾಡ್ತಾರ. ಒಂದು "Subject" ಅಂದರ ಕರ್ತೃಪದ ಮತ್ತು ಇನ್ನೊಂದು ಭಾಗಕ್ಕ "Predicate" ಅಂತಾರ.

ನಾವು ಯಾವ ವಸ್ತು, ಪ್ರಾಣಿ, ಮನುಷ್ಯನ ಬಗ್ಗೆ ಮಾತಾಡ್ತೇವು ಆ ಭಾಗಕ್ಕ "Subject" ಅಂತಾರ. Janaki learns English. ಇಲ್ಲಿ 'ಜಾನಕಿ' ಇದು subject. Subject ಬಗ್ಗೆ ಹೇಳುವ ಭಾಗಕ್ಕೆ Predicate ಅಂತಾರ. ಇಲ್ಲಿ "learns English" ಇದು subject.

"Subject" ಯಾವಾಗಲೂ ಮೊದಲು ಬರುವದು ಮತ್ತು ನಂತರ Predicate ಬರುತ್ತದೆ.

ಜಾನಕಿ : ಇದನ್ನ ಹೇಳ್ತಿಯೋ, ಮುಂದೆ ಏನಾದರೂ ಹೇಳ್ತಿಯಾ?

ಜಾನ್ : ಎ, ಎಕಪಾಠಿ, ಇನ್ನ ಒಂದ ಮಾತ ಈಗ ಹೇಳ್ತೇನಿ. ಕನ್ನಡದಲ್ಲಿ ಕರ್ತೃಪದ, ಕರ್ಮಪದ, ಕೊನೆಗೆ ಕ್ರಿಯಾಪದ ಬರ್ತದ. (Subject-object-verb) ಆದರ ಇಂಗ್ಲೀಷದಾಗ subject verb object ಈ ಕ್ರಮದಾಗ. ಇಷ್ಟ ಈಗ ಸಾಕು. ಹೆಚ್ಚಿಗಿ ಆದರ ಅಪಚನವಾದೀತು.

ಜಾನಕಿ : ಇರಲಿss ಬೀಡೊ. ಭಾಳಾ ಜ್ಞಾನಿ ಹಂಗ ಮಾತಾಡಬೇಡ.

## Phrase and Clause

ಜಾನ್ : ಜಾನಕಿ, ವಾಕ್ಯ ಅಂದರ ಏನನ್ನುದ ನೆನಪಿನಲ್ಲಿ ಇದೆಯಾ?

ಜಾನಕಿ : ನೀನ ಹೇಳಿ ಏಕಪಾಠಿ ಅಂತ..... ಮುಂದ ಪಾಠ ಹೇಳು.

ಜಾನ್ : ಕೇಳ ಹಂಗಾರ, Complete Sense ಕೊಡುವ ಹಂಗ ಶಬ್ದಗಳ ಸಮೂಹಕ್ಕೆ Sentence ಅಂತಾರ. ಮತ್ತ ಅದು ಸ್ವತಂತ್ರ ಇರುವದು.

ಇನ್ನು ಶಬ್ದಗಳ ಸಮೂಹ ಇದ್ದು Complete Sense ಕೊಡದಿದ್ದರ ಅದಕ್ಕ Phrase ಅಂತಾರ ಇಂಗ್ಲಿಷದಾಗ. ಉದಾ: Janaki went to class to learn English ತಳರೇಖೆ ಹಾಕಿದ ಶಬ್ದಗಳ ಸಮೂಹ ಅರ್ಥೈಸು. ಅರ್ಥ ಆಗುವದಿಲ್ಲವಾದ್ದರಿಂದ ಅದು Phrase.

ಒಂದು ವಾಕ್ಯದಲ್ಲಿರುವ ಮತ್ತೊಂದು ವಾಕ್ಯ ಮೊದಲಿನದ ಮೇಲೆ ಅವಲಂಬಿಸಿರುತ್ತದೆ.

ಉದಾ : ನೀನು ಬಂದರೆ ನಾನು ಇಂಗ್ಲಿಷ್ ಕಲಿಸುತ್ತೇನೆ.
(If you come I teach you English)
ಇಲ್ಲಿ "ನೀನು ಬಂದರೆ" (If you come) ಇಷ್ಟೇ ಹೇಳಿದರೆ ವಾಕ್ಯ ಪೂರ್ಣವಾಗುವುದಿಲ್ಲ. ಇದು ವಾಕ್ಯವಾದರೂ ಸಹ ಅದು ಮುಂದಿನ ವಾಕ್ಯವನ್ನವಲಂಬಿಸಿರುವದರಿಂದ ಇದಕ್ಕೆ Clause ಅನ್ನುವರು. ಇನ್ನೊಂದು ಉದಾಹರಣೆ :
The train had left the station when you reached the platform.

## ಡಿಸೆಂಬರ್ ತಿಂಗಳಲ್ಲಿ ಜನಿಸಿದ ಸಾಹಿತಿಗಳು

| | |
|---|---|
| ೧.೧೨.೧೯೧೮ | ಡಾ.ಕೆ.ಟಿ. ಪಾಂಡುರಂಗ |
| ೧.೧೨.೧೯೨೩ | ನಿಡಂಬೂರು ವ್ಯಾಸರಾಯ ಬಲ್ಲಾಳ |
| ೨.೧೨.೧೯೨೩ | ವ್ಹಿ.ಜಿ.ಭಟ್ |
| ೩.೧೨.೧೯೩೪ | ನವರತ್ನರಾಂ |
| ೫.೧೨.೧೯೦೮ | ಜಿ.ಪಿ.ರಾಜರತ್ನಂ, |
| | ಡಾ. ಗುಂಡ್ಲುಪಂಡಿತ್ ರಾಜ್ಯ ಐಯಂಗಾರ್ |
| ೧೦.೧೨.೧೯೮೬ | ಸಿ.ಕೆ. ವೆಂಕಟರಾಮಯ್ಯ |
| ೧೨.೧೨.೧೯೦೩ | ಡಾ. ಎಸ್.ಸಿ. ನಂದಿಮಠ |
| ೧೨.೧೨.೧೯೧೧ | ಸರೋಜ ಜಯಲಕ್ಷ್ಮಿ ಶ್ರೀನಿವಾಸನ್ |
| ೧೨.೧೨.೧೯೩೪ | ರತ್ನನ್ |
| ೧೩.೧೨.೧೯೪೯ | ಕೃಷ್ಣಸುಬ್ಬರಾವ್ ಸುಕೃತ - ಹೆಚ್.ಎಸ್.ಕೃಷ್ಣ |
| ೧೫.೧೨.೧೯೦೯ | ಪಂಡಿತರಾಜ. ಮಾಹುಲ ಗೋಪಾಲಚಾರ್ಯ |
| ೧೫.೧೨.೧೯೪೫ | ಕಣ್ಣೇಪಾಲ ಸುಬ್ರಾಯ ಹೆಗಡೆ |
| ೧೬.೧೨.೧೯೦೫ | ಶ್ರೀವತ್ಸ - ದುದ್ದಕೃಷ್ಣ ಐಯ್ಯಂಗಾರ್ |
| ೨೦.೧೨.೧೯೦೬ | ಈಶ್ವರ ಮಹಾರುದ್ರಪ್ಪ ಸಣಕಲ್ಲ |
| ೨೧.೧೨.೧೯೩೨ | ಡಾ. ಯು.ಆರ್.ಆನಂತಮೂರ್ತಿ |
| ೨೧.೧೨.೧೯೪೩ | ಮಾವಿನಕೆರೆ ರಂಗನಾಥನ್ |
| ೨೨.೧೨.೧೯೨೬ | ನೀಲಪ್ಪ, ದ್ಯಾಮಣ್ಣ ಬಗರಿ |
| ೨೩.೧೨.೧೯೩೨ | ಶ್ರೀಪಂಚ ಶ್ರೀಕಂಠಯ್ಯ ಪಂಚಾಕ್ಷರಿ ಚೆನ್ನಗಿರಿ |
| ೨೩.೧೨.೧೯೪೦ | ಕಾಕೋಳ ಸರೋಜರಾವ್ |
| ೨೪.೧೨.೧೯೮೮ | ಪ್ರೊ. ಹೆಚ್.ವಿ.ರಂಗಣ್ಣ |
| ೨೪.೧೨.೧೯೧೧ | ಡಾ. ಪಾಂ.ಭಿ.ದೇಸಾಯಿ |
| ೨೪.೧೨.೧೯೩೧ | ಎಸ್.ವ್ಹಿ.ಶ್ರೀನಿವಾಸರಾವ್ |
| ೨೫.೧೨.೧೯೮೭ | ನಾ ಕಸ್ತೂರಿ, |
| | ಕಸ್ತೂರಿ ರಂಗನಾಥ ನಾರಾಯಣ ಶರ್ಮ |
| ೨೫.೧೨.೧೯೧೫ | ಡಾ. ವಿ. ಕೇಶವಮೂರ್ತಿ |
| ೨೫.೧೨.೧೯೪೩ | ಬಾಕಿನ್ ಬಾಲಕೃಷ್ಣ ಕಿಳಿಂಗರಾರು ನಡುಮನೆ |
| ೨೬.೧೨.೧೮೯೯ | ಕೃಷ್ಣಚಾರ್ಯ ಜೋಶಿ |
| ೨೭.೧೨.೧೮೯೭ | ದೇವುಡು ನರಸಿಂಹಶಾಸ್ತ್ರಿ |
| ೨೮.೧೨.೧೭೧೩ | ಡಾ.ಡಿ.ವ್ಹಿ.ರಾವ್ |
| ೨೮.೧೨.೧೯೩೯ | ಯರಗನಹಳ್ಳಿ ಲಿಂಗೇಗೌಡ ಕೇಶವಮೂರ್ತಿ |
| ೨೯.೧೨.೧೮೮೬ | ಕೊಳ್ಳೇಗಾಲದ ವೆಂಕಟಸುಬ್ಬಶಾಸ್ತ್ರಿ |
| ೨೯.೧೨.೧೯೯೧ | ದ.ಕೃ. ಭಾರದ್ವಜ |
| ೨೯.೧೨.೧೯೦೪ | ಕುವೆಂಪು |
| ೩೦.೧೨.೧೯೪೬ | ಕೆ.ಎ. ಅಶೋಕ ಪೈ |
| ೩೧.೧೨.೧೮೯೦ | ಕೌಜಲಗಿ ಹನುಮಂತರಾಯ |

ಸಂಗ್ರಹ : ಪರಶುರಾಮ ಓಲೇಕಾರ

ಮುಂದಿನ ಸಂಚಿಕೆಯಲ್ಲಿ

**PARTS OF SPEECH**

(Noun, Pronoun, Adjectives, Verb, Adverb, Conjenction)

# ಪ್ರತಿಭಾ ಶೋಧ; ನಿಮಗೊಂದು ಅವಕಾಶ



**ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಸಿಗುತ್ತದೆ. ಸ್ನಾತಕೋತ್ತರ ಪದವಿ ಮತ್ತು ವೈದ್ಯಕೀಯ ಪದವಿಯ ಹಂತದವರೆಗೆ ನೀಡಲ್ಪಡುವ ವಿದ್ಯಾರ್ಥಿ ವೇತನಗಳಲ್ಲದೆ (ವರ್ಷಕ್ಕೆ ೫೦೦ ರೂ. ನಿಂದ ೧೦೦೦ ರೂ.) ವಿಜೇತರಿಗೆ ನಗದು ಬಹುಮಾನ, ಪುಸ್ತಕಗಳನ್ನು ಕೂಡ ಹಂಚಲಾಗುತ್ತದೆ.**

○ ಮಾಧವ ಐತಾಳ್

ವ್ಯಕ್ತಿಯೊಬ್ಬನಲ್ಲಿ ಎಷ್ಟೇ ಪ್ರತಿಭೆಯಿರಬಹುದು, ಅದಕ್ಕೆ ಸೂಕ್ತ ಅವಕಾಶ ಸಿಗದಿದ್ದಲ್ಲಿ ಅದು ಮರಳುಗಾಡಿನ ಮರೀಚಿಕೆಯಂತಾಗಿ ಬಿಡುತ್ತದೆ.

ರಾಷ್ಟ್ರೀಯ ಮಟ್ಟದಲ್ಲಿ ಪ್ರತಿಭಾ ಶೋಧಕ್ಕಾಗಿ ಅನೇಕ ಪರೀಕ್ಷೆಗಳು ನಡೆಯುತ್ತವೆ. ಅಂತದ್ದೊಂದು ಪ್ರಯತ್ನವನ್ನು ಚೆನ್ನೈ, ತಿರುವನಂತಪುರಂ ಮತ್ತು ದುಬೈನಲ್ಲಿ ತನ್ನ ಕಛೇರಿಗಳನ್ನು ಹೊಂದಿರುವ ಯೂನಿವರ್ಸಲ್ ದತ್ತಿ ಸಂಸ್ಥೆ ಮಾಡುತ್ತಿದೆ. ಈ ಸಂಸ್ಥೆ ವಿಜ್ಞಾನ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಆಸಕ್ತಿ ಹೊಂದಿರುವ ನೋಂದಾಯಿತ ಸೇವಾ ಸಂಸ್ಥೆ. ಇದು ಪ್ರತಿವರ್ಷ ೬, ೭, ೮, ೯, ೧೦ ಮತ್ತು ೧೨ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗಾಗಿ ರಾಷ್ಟ್ರೀಯ ಮಟ್ಟದ ಪ್ರತಿಭಾ ಶೋಧ ಪರೀಕ್ಷೆಗಳನ್ನು ನಡೆಸುತ್ತದೆ. ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡುತ್ತದೆ. ಸ್ನಾತಕೋತ್ತರ ಪದವಿ ಮತ್ತು ವೈದ್ಯಕೀಯ ಪದವಿಯ ಹಂತದವರೆಗೆ ನೀಡಲ್ಪಡುವ ವಿದ್ಯಾರ್ಥಿ ವೇತನಗಳಲ್ಲದೆ (ವರ್ಷಕ್ಕೆ ೫೦೦ ರೂ.ನಿಂದ ೧೦೦೦ ರೂ.) ವಿಜೇತರಿಗೆ ನಗದು ಬಹುಮಾನ, ಪುಸ್ತಕಗಳನ್ನು ಹಂಚುತ್ತದೆ. ಈ ಸಂಸ್ಥೆಯಿಂದ ೧೯೯೬ರಲ್ಲಿ ವಿದ್ಯಾರ್ಥಿವೇತನ ಗಳಿಸಿದ ಇಬ್ಬರು ಬೆಂಗಳೂರಿನ ವಿದ್ಯಾರ್ಥಿಗಳು ಎಸ್. ಅರ್ಚನಾ ಮತ್ತು ವಿನಯ್‌ಕುಮಾರ್. ೧೯೯೭ರ ಭಾರತೀಯ ರಾಷ್ಟ್ರೀಯ ಗಣಿತ ಒಲಂಪಿಯಾಡ್‌ಗೆ ಆಯ್ಕೆಯಾಗಿದ್ದರು.

೬ನೇ ತರಗತಿಯ ವಿದ್ಯಾರ್ಥಿಗಳನ್ನು ವಿಭಾಗ ೧ರಲ್ಲಿ ಸೇರಿಸಲಾಗಿದ್ದು, ಅವರು ಜೀವಶಾಸ್ತ್ರ, ರಸಾಯನ ಶಾಸ್ತ್ರ, ಗಣಿತ ಶಾಸ್ತ್ರ ಮತ್ತು ಭೌತಶಾಸ್ತ್ರ ವಿಷಯಗಳಲ್ಲಿ ೧೫೦ ಪ್ರಶ್ನೆಗಳನ್ನು ೧½ ಗಂಟೆಯಲ್ಲಿ ಉತ್ತರಿಸಬೇಕು. ಭೌತ ಮತ್ತು ರಸಾಯನ ಶಾಸ್ತ್ರದಲ್ಲಿ ೪೦ ಪ್ರಶ್ನೆಗಳನ್ನು ಗಣಿತ ಮತ್ತು ಜೀವಶಾಸ್ತ್ರದಲ್ಲಿ ತಲಾ ೩೫ ಪ್ರಶ್ನೆಗಳನ್ನು ಉತ್ತರಿಸಬೇಕು. ಸರಿಯಾದ ಉತ್ತರಕ್ಕೆ ೪ ಅಂಕಗಳಿದ್ದು, ಪ್ರತೀ ೧ ತಪ್ಪು ಉತ್ತರಕ್ಕೆ ೧ ಅಂಕವನ್ನು ಕಳೆಯಲಾಗುವುದು.

೬ನೇ ತರಗತಿಯಿಂದ ೧೨ನೇ ತರಗತಿಯವರೆಗೆ ೯ ವಿಭಾಗಗಳಿದ್ದು, ಪರೀಕ್ಷಾ ಮಾಧ್ಯಮ-ಇಂಗ್ಲೀಷ್. ದೇಶಾದ್ಯಂತ ೬೬ ಪರೀಕ್ಷಾ ಕೇಂದ್ರಗಳಿದ್ದು, ಕರ್ನಾಟಕದಲ್ಲಿ ೫ (ಬೆಳಗಾಂ, ಮೈಸೂರು, ಉಡುಪಿ, ಮಂಗಳೂರು ಮತ್ತು ಬೆಂಗಳೂರು) ಪರೀಕ್ಷಾ ಕೇಂದ್ರಗಳಿವೆ.

ಪ್ರಶ್ನೆಪತ್ರಿಕೆಗಳು ಸಿಬಿಎಸ್‌ಸಿ ಪಾಠಪಟ್ಟಿ (ಸಿಲಬಸ್) ಯನ್ನು ಆಧರಿಸಿರುತ್ತವೆ. ಸಿಲಬಸ್ ಕುರಿತ ವಿವರಗಳನ್ನು ಯಾವುದೇ ಶುಲ್ಕವಿಲ್ಲದೆ ಸಂಸ್ಥೆಯಿಂದ ಪಡೆಯಬಹುದು.

ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ೧೦ನೇ ಡಿಸೆಂಬರ್ ೯೭. ಪರೀಕ್ಷೆಯು ೧೯೯೮ರ ಜನವರಿ ೧೮ರಂದು ನಡೆಯಲಿದ್ದು, ಮಾರ್ಚ್ ೩೧ರಂದು ಫಲಿತಾಂಶಗಳನ್ನು ಪ್ರಕಟಿಸಲಾಗುತ್ತದೆ. ಪ್ರತೀ ವಿಭಾಗದಲ್ಲೂ ಮೊದಲಿನ ೫ ಮಂದಿಗೆ ಅವರು ಓದುತ್ತಿರುವ ತರಗತಿಗಳನ್ನು ಆಧರಿಸಿ ವಿದ್ಯಾರ್ಥಿ ವೇತನ ನೀಡಲಾಗುತ್ತದೆ. ನಂತರದ ೪೫ ಮಂದಿಗೆ ೩೦೦ ರೂ. ನಗದು ಮತ್ತು ರೂ. ೧೫೦೦ ಮೊತ್ತದ ಪುಸ್ತಕ ಕೊಡಲಾಗುತ್ತದೆ.

ಪರೀಕ್ಷಾ ಶುಲ್ಕ ರೂ. ೧೦೦ನ್ನು 'ಯೂನಿವರ್ಸಲ್ ಟ್ರಸ್ಟ್, ತಿರುವನಂತಪುರಂ' ಹೆಸರಿನಲ್ಲಿ ಡಿ.ಡಿ. ಮೂಲಕ ಸಂದಾಯ ಮಾಡಬೇಕು. ಭರ್ತಿ ಮಾಡಿದ ಅರ್ಜಿಗಳನ್ನು ಸ್ವವಿಳಾಸವಿರುವ ರೂ. ೩ರ ಅಂಚೆ ಚೀಟಿ ಇರುವ ಎರಡು ಅಂಚೆ ಲಕೋಟೆ ಮತ್ತು ಶಾಲೆ/ಕಾಲೇಜಿನ ಮುಖ್ಯಸ್ಥರು ಕೊಟ್ಟಿರುವ ಶಿಫಾರಸ್ಸು ಪತ್ರದೊಡನೆ,

The Project Director
Universal Trust, Universal Road
Behind Press Club
Thiruvananthapuram - 695 001.
Ph : 331680, 331226.

ಮೇಲಿನ ವಿಳಾಸಕ್ಕೆ ೧೦-೧೨-೯೭ರೊಳಗೆ ಕಳಿಸಬೇಕು.

ಕಳೆದ ಮೂರು ವರ್ಷಗಳ ಪ್ರಶ್ನೆ ಪತ್ರಿಕೆಗಳು ಸೀಮಿತ ಸಂಖ್ಯೆಯಲ್ಲಿ ಲಭ್ಯವಿದ್ದು, ಅದರ ಅಗತ್ಯವಿರುವವರು ಪ್ರತೀ ವಿಷಯಕ್ಕೆ ರೂ. ೫೦ನ್ನು ಡಿಡಿ ಮೂಲಕ ರೂ. ೫ರ ಅಂಚೆಚೀಟಿ ಅಂಟಿಸಿರುವ ಸ್ವವಿಳಾಸ ಇರುವ ಲಕೋಟೆಯನ್ನು ಕಳಿಸಿ ಪಡೆಯಬಹುದು.

ನಿಮ್ಮೊಳಗೊಬ್ಬ ವಿಜ್ಞಾನಿ, ಪ್ರತಿಭಾವಂತ ನಿಮಗರಿವಿಲ್ಲದಂತೆಯೇ ಇರಬಹುದು.

ನೀವೇಕೆ ಈ ಪರೀಕ್ಷೆಯಲ್ಲಿ ಅದನ್ನು ಬೆಳಕಿಗೆ ಬರುವಂತೆ ಮಾಡಬಾರದು? ●



# ವ್ಯಾಪಾರಿ ನೌಕಾಪಡೆಯಲ್ಲಿ ಉದ್ಯೋಗಾವಕಾಶಗಳು

ಡಾ. ಟಿ.ಕೆ. ತಾಪಸ್

**'ಈ**ಸಬೇಕು, ಇದ್ದು ಜೈಸಬೇಕು' ಎಂದಿದೆ ದಾಸೋಪದೇಶ. ಅವರ ದೃಷ್ಟಿಯಲ್ಲಿ ಜೀವನ ಪಯಣವೆಂದರೆ ಸಾಗರವನ್ನು ದಾಟುವಷ್ಟು ಕಷ್ಟ, ಸಾಗರ ಸಾಹಸಗಳ ತಾಣ. 'ಯಶಸ್ಸು ಧೈರ್ಯದಿಂದ ಕಾರ್ಯಪ್ರವೃತ್ತರಾಗುವವರಿಗೆ ಮಾತ್ರ ದಕ್ಕುತ್ತದೆ. ಅಂಜುಗುಳಿಗಳ ಸಮೀಪವೂ ಅದು ಸುಳಿಯುವದಿಲ್ಲ' ಎಂಬ ನೆಹ್ರೂ ಉಕ್ತಿ ಸಾಗರಕ್ಕೆ ತೆಕ್ಕೆಹಾಯಬಯಸುವವರಿಗೆ ಅಕ್ಷರಶಃ ಅನ್ವಯಿಸುತ್ತದೆ. ಉದ್ಯೋಗಾಕಾಂಕ್ಷಿಗಳಾದ ಯುವಕ, ಯುವತಿಯರಿಗೆ, ಇದೋ, ಇಲ್ಲಿದೆ ಒಂದು ಉತ್ತಮ ಅವಕಾಶ; ಸವಾಲೂ ಸಹ. ನೀವು ಅಂಥವರಲ್ಲೊಬ್ಬರಾಗಿದ್ದರೆ ಸಾಗರ ನಿಮ್ಮನ್ನು ಕೈಬೀಸಿ ಕರೆಯುತ್ತಿದೆ! ಅದಕ್ಕೆ ಓಗೊಡುವ ಧೈರ್ಯವಿದೆಯೇ ನಿಮ್ಮಲಿ?

ತಾರುಣ್ಯದ ಸಾಹಸ ಪ್ರವೃತ್ತಿಗೆ ಸಾಗರದ ಸಾಹಸ ಹೇಳಿ ಮಾಡಿಸಿದಂತಹದು. ಅದರ ಆಕರ್ಷಣೆ, ಅಪರಂಪಾರತೆ, ತೃಪ್ತಿಗೆ ಬೇರೆ ಹೋಲಿಕೆಯೇ ಇಲ್ಲ. ಅದಕ್ಕೆಂದೇ 'ಸಾಗರಕ್ಕೆ ಹೋಲಿಕೆ ಸಾಗರವೇ' ಎಂದಿದ್ದಾರೆ. ದೀರ್ಘ ಸಮುದ್ರಯಾನದ ಮುಖಾಂತರ ದೂರದ ನಾಡುಗಳನ್ನು ಸಂದರ್ಶಿಸುವ ಅಮೂಲ್ಯ ಅವಕಾಶವನ್ನು ನಿಮಗೆ ನೀಡುವ ವ್ಯಾಪಾರಿ ನೌಕಾಪಡೆ, ಹೇರಳ ಪ್ರಾರಂಭಿಕ ಧನಲಾಭವನ್ನೂ ತರಬಲ್ಲದು.




### ವ್ಯಾಪಾರಿ ಹಡಗು

ಹಡಗು ನಿರಂತರ ಚಟುವಟಿಕೆಯ ಕೇಂದ್ರ. ಅಲ್ಲಿ ಹಲವು ಕುಶಾಗ್ರಮತಿಗಳಾದ ವೃತ್ತಿಪರರು ಕೆಲಸದಲ್ಲಿ ತೊಡಗಿರುತ್ತಾರೆ.

ಇಲ್ಲಿಯ ಕೆಲಸ ಎರಡು ಬಗೆಯದು. ಡೆಕ್ ಅಥವಾ ಸಮುದ್ರ ಪ್ರಯಾಣಕ್ಕೆ ಸಂಬಂಧಿಸಿದುದು ಮೊದಲನೆಯದು; ತಾಂತ್ರಿಕ ಚಟುವಟಿಕೆ ಎರಡನೆಯದು. ಇವೆರಡೂ ಸೇರಿದರೆ ಸುಸ್ಥಿತಿಯಲ್ಲಿ ಮುನ್ನಡೆವ ಹಡಗಿನ ಚಿತ್ರ ಕಣ್ಣೆದುರು ನಿಲ್ಲುತ್ತದೆ.

ಹಡಗಿನ ಜೀವನ ಕಷ್ಟಕರವಾದುದು. ದೀರ್ಘಕಾಲೀನ ಸಮುದ್ರಯಾನವೆಂದರೆ ನಿಮ್ಮ ಮನೆ, ಊರು, ಕುಟುಂಬಗಳಿಂದ ನಿಮ್ಮ ಬೇರ್ಪಡೆ ಅನಿವಾರ್ಯ. ಹಡಗಿನಲ್ಲಿ ದೂರದರ್ಶನ, ಇತರ ದೃಶ್ಯ-ಶ್ರವ್ಯ ಸಾಧನಗಳು, ಈಜು ಕೊಳ, 'ಟೇಬಲ್ ಟೆನ್ನಿಸ್'ನಂಥ ಮನರಂಜನೆಯ ಸೌಲಭ್ಯಗಳು ಇದ್ದರೂ, ಸಮಯಾಭಾವ ಇವುಗಳನ್ನು ಭೋಗಿಸಲು ಅಡ್ಡ ಬರುತ್ತದೆ.

ಬಂದರುಗಳಲ್ಲಿ ಹಡಗು ತಂಗಿದಾಗಲೂ ಸಹ ಕಾರ್ಯ ಬಾಹುಲ್ಯ ಮತ್ತು ಕರ್ತವ್ಯಪಾಲನೆಯ ನಿರಂತರತೆ ನಿಮಗೆ ಪ್ರವಾಸಿಯಾಗಲು ಪುರುಸೊತ್ತು ಕೊಡುವದಿಲ್ಲ.

ನಿರ್ದಿಷ್ಟಪಡಿಸಿದ ಕೆಲಸದ ಅವಧಿ ಕೇವಲ ಕಾಗದದ ಮೇಲೆ. ಇಲ್ಲಿ ಗಡಿಯಾರ ನಿರುಪಯೋಗಿ ವಸ್ತು. ತಂತ್ರಜ್ಞಾನ ಮತ್ತು ಸಮುದ್ರದಲ್ಲಿಯ ಗಂಡಾಂತರಗಳ ಪ್ರಕಾರ ಮತ್ತು ಸ್ವರೂಪಗಳು ಹೆಚ್ಚುತ್ತಾ ಹೊರಟಿರುವದರಿಂದ ಹಡಗಿನಲ್ಲಿ ಕರ್ತವ್ಯ ನಿರತರೆಲ್ಲರೂ ತಮ್ಮ ತಾಂತ್ರಿಕ ನೈಪುಣ್ಯದ ಅಲಗನ್ನು ಹರಿತಗೊಳಿಸುತ್ತಲೇ ಇರಬೇಕಾದುದು ಅತ್ಯಗತ್ಯ.

ಆದರೆ, ಅಸಾಮಾನ್ಯ ವೃತ್ತಿಜೀವನ ಸಾಗಿಸ ಬಯಸುವವರಿಗೆ, ಪ್ರಯಾಣಾರಾಧಕರಿಗೆ, ಹೊಸ ಹೊಸ ಜನಜೀವನ ದೇಶ ಕೋಶಗಳನ್ನು ಕಾಣಲಿಚ್ಛಿಸುವವರಿಗೆ, ಆ ಜೀವನ ಸ್ನೇಹ ಸೇತುವೆಗಳನ್ನು ಕಟ್ಟಲಾಶಿಸುವವರಿಗೆ, ನೌಕೋದ್ಯಮ ಅನುಪಮ ತೃಪ್ತಿತರುವ ಆಗರ. ದೈಹಿಕವಾಗಿ ಹಾಗೂ ಮಾನಸಿಕವಾಗಿ ಹರೆಯದವರನ್ನು ಉದ್ದೇಶಿಸುವ ಶಕ್ತಿಯನ್ನದು ಹೊಂದಿದೆ. ಅಲ್ಲದೆ, ನೀವು ಸಲ್ಲಿಸುವ ಸೇವೆಗೆ ಇತರರು ಕರುಬುವಷ್ಟು ಸಂಭಾವನೆ ತರುವ ಸಾಧನವೂ ಇದಾಗಿದೆ. ಆದುದರಿಂದ ಅನಾನುಕೂಲಗಳನ್ನು ಓದಿ ಹಿಮ್ಮೆಟ್ಟಬೇಡಿ!

### ಉದ್ಯೋಗಾವಕಾಶಗಳು

ವ್ಯಾಪಾರಿ ಹಡಗುಗಳಲ್ಲಿ ಡೆಕ್ ಅಧಿಕಾರಿ, ನೌಕಾ ಎಂಜಿನಿಯರ್, ರೇಡಿಯೋ ಅಧಿಕಾರಿ, ಇಲೆಕ್ಟ್ರಿಕಲ್ ಅಧಿಕಾರಿಯಾಗಲು ಅವಕಾಶಗಳಿವೆ.

### ಡೆಕ್ ಅಧಿಕಾರಿ

ಈ ಹುದ್ದೆಗೆ ಅರ್ಹತೆಗಳಿಂತಿವೆ:

೧. ಬಣ್ಣ ಗುರುಡಿನಿಂದ ಮುಕ್ತವಾದ, ೬/೬ ಮಟ್ಟದ ದೃಷ್ಟಿ ಸಾಮರ್ಥ್ಯವಿರಬೇಕು.

೨. ಪ್ರಮಾಣಿತ ನಿಯಮಗಳಂತೆ ಸಮುದ್ರ ಸೇವೆಗೆ ಅಗತ್ಯವಾದ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

ಎರಡು ಬಗೆಯಾಗಿ ಸೇವೆಗೆ ಸೇರಬಹುದು.

ಭಾರತೀಯ ಹಾಗೂ ಪರದೇಶಗಳ ವ್ಯಾಪಾರೀ ಹಡಗು ಸಂಸ್ಥೆಗಳು ನೇರ ಪ್ರವೇಶ ವಿದ್ಯಾರ್ಥಿ (Direct Entry Cadets) ಗಳನ್ನು ಭರ್ತಿ ಮಾಡಿಕೊಳ್ಳುತ್ತವೆ. 'ನಾವಿಕ ವಿದ್ಯಾರ್ಥಿ' (Deck Cadet) ಗಳಾಗಿ ನಿಮ್ಮ ಅಖೈರು ಆಯ್ಕೆಯ ಮೊದಲು ನಿಮಗೆ ಆಯಾ ಸಂಸ್ಥೆಗಳೇ ಅಗತ್ಯದ ಪೂರ್ವಭಾವೀ ತರಬೇತಿಯ ವ್ಯವಸ್ಥೆ ಮಾಡುತ್ತವೆ.

ಇದರ ಬದಲು, ಮೇಲೆ ಕಾಣಿಸಿದ ಶೈಕ್ಷಣಿಕ ಅರ್ಹತೆಯಿರುವ ಅಭ್ಯರ್ಥಿಯು ಮಹಾರಾಷ್ಟ್ರದ ಮುಂಬೈಯಲ್ಲಿ 'ಚಾಣಕ್ಯ' ಎಂಬ ಭೂಸ್ಥಿತ ಹಡಗಿನಲ್ಲಿ ದೊರೆಯುವ ತರಬೇತಿ ಪಡೆದು ನಾವಿಕ ಶಾಸ್ತ್ರದಲ್ಲಿ ಸ್ನಾತಕ ಪದವಿ

ಪಡೆದುಕೊಳ್ಳಬಹುದು.

ಪದವಿಯ ನಂತರ ನಾವಿಕ ವಿದ್ಯಾರ್ಥಿಯಾಗಿ ಯಾವುದಾದರೊಂದು ವ್ಯಾಪಾರಿ ಹಡಗು ಸಂಸ್ಥೆಯನ್ನು ಸೇರಬಹುದು. ಹಡಗಿನ ಮುಖ್ಯ ಅಧಿಕಾರಿಯ ನೇರ ನಿಯಂತ್ರಣದಲ್ಲಿರುವ ವಿದ್ಯಾರ್ಥಿಗೆ ನೌಕಾಚಾಲನೆ, ಸಮುದ್ರ ಪ್ರಯಾಣ, ಪ್ರಯಾಣದ ದಿಕ್ಕನ್ನು ನಿಯಂತ್ರಿಸುವದು, ಸರಕುಗಳ ಸುರಕ್ಷೆ ಮತ್ತು ತತ್ಸಂಬಂಧಿತ ವಿಷಯಗಳ ಬಗೆಗೆ ತಾತ್ವಿಕ ಮತ್ತು ವ್ಯಾವಹಾರಿಕ ತರಬೇತಿ ಲಭ್ಯವಾಗುವದು.

ವರ್ಷ-ವರ್ಷವೂ ಹೆಚ್ಚುವ ತೃಪ್ತಿಕರ ಸಂಭಾವನೆಯು ಈ ತರಬೇತಿಯವಧಿಯಲ್ಲಿ ವಿದ್ಯಾರ್ಥಿಗೆ ದೊರೆಯುತ್ತದೆ. ಊಟ, ವಸತಿ ಹಡಗಿನಲ್ಲಿಯೇ ಸಿಕ್ಕುವದು. ದೈನಂದಿನ ವೆಚ್ಚವನ್ನು ಸಂಭಾವನೆಯಲ್ಲಿ ಹೊಂದಿಸಿಕೊಳ್ಳಬೇಕಾಗುತ್ತದೆ. ಸೇವೆಗೆ ಸೇರುವಾಗಿನ ಹಾಗೂ ಸೇವೆಯಿಂದ ಬಿಡುಗಡೆಗೊಂಡ ನಂತರ ಸ್ವಸ್ಥಳ ತಲುಪುವ ವೆಚ್ಚವನ್ನು ಸಂಸ್ಥೆಯೇ ಭರಿಸುವದು. ೧೨ ತಿಂಗಳ ಸಾಗರವಾಸದ ನಂತರ ಸಾಮಾನ್ಯವಾಗಿ ಒಂದು ತಿಂಗಳಿನ ರಜೆಯ ಸೌಲಭ್ಯ ದೊರೆಯುತ್ತದೆ.

## ಬಡ್ತಿಯ ಅವಕಾಶಗಳು

ನಾವಿಕ ವಿದ್ಯಾರ್ಥಿಯಾಗಿ ೩೬ ತಿಂಗಳುಗಳ ಅವಧಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ದ್ವಿತೀಯ ಅಧಿಕಾರಿ (Second Officer) ಪರೀಕ್ಷೆಗೆ ಕಟ್ಟಲು ಅರ್ಹತೆ ಬರುತ್ತದೆ. ಈ ಪರೀಕ್ಷೆ ಅಭ್ಯರ್ಥಿಯ ವಿದೇಶ ಗಮನಕ್ಕೆ ರಹದಾರಿ. ಕೇಂದ್ರ ಸಾರಿಗೆ ಇಲಾಖೆಯ ಅಧೀನದ ಹಡಗು ಸಾರಿಗೆ ಮಹಾನಿರ್ದೇಶಕರು ಈ ಪರೀಕ್ಷೆಯನ್ನು ನಿರ್ವಹಿಸುತ್ತಾರೆ. ಮುಂಬೈಯ ಲಾಲ್‌ಬಹದ್ದೂರ್ ಶಾಸ್ತ್ರಿ ನೌಕಾ ಮಹಾವಿದ್ಯಾಲಯವು ಅಭ್ಯರ್ಥಿಗಳನ್ನು ತರಬೇತುಗೊಳಿಸುತ್ತದೆ. ಆದರೆ ಇಲ್ಲಿ ಕನಿಷ್ಠ ಆರು ತಿಂಗಳ ಹಾಜರಾತಿ ಕಡ್ಡಾಯವಾಗಿದೆ. ಈ ಅವಧಿಯಲ್ಲಿ ಭೌತಶಾಸ್ತ್ರ ಮತ್ತು ಗಣಿತಗಳಲ್ಲದೆ, ಹಡಗು ರಚನೆ ಹಾಗೂ ಸ್ಥಿರತೆ, ಹವಾಮಾನ ಶಾಸ್ತ್ರ, ನೌಕಾಯಾನದ ತಾತ್ವಿಕ ಹಾಗೂ ವ್ಯಾವಹಾರಿಕ ಜ್ಞಾನ, ಸಮುದ್ರಪಟ ತಯಾರಿಕೆ, ನೌಕಾ ಚಾಲನೆ ಮುಂತಾದವುಗಳಲ್ಲಿ ಅಭ್ಯರ್ಥಿಯ ತಿಳಿವನ್ನು ಬರಹ ಮತ್ತು ಮೌಖಿಕವಾಗಿ ಪರೀಕ್ಷಿಸಲಾಗುವದು. ಮಹಾವಿದ್ಯಾಲಯದಲ್ಲಿ ಹಾಜರಿದ್ದ ಅವಧಿಗೆ ಸಮುದ್ರ ವಾಸ್ತವ್ಯದಿಂದ ವಿನಾಯಿತಿ ಸ್ನಾತಕ ಪರೀಕ್ಷೆ ಮುಗಿಸಿ ಸೇವೆಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ ದೊರೆಯುತ್ತದೆ.

ಕೆಲವು ವಿಶೇಷ ಸಂದರ್ಭಗಳಲ್ಲಿ ಹಡಗಿನಲ್ಲಿ ಕರ್ತವ್ಯ ನಿರತರಿರುವಾಗಲೇ ಯಶಸ್ವಿಯಾಗಿ ತರಬೇತಿ ಪೂರೈಸಿದ ನಾವಿಕ ವಿದ್ಯಾರ್ಥಿಗಳನ್ನು ದ್ವಿತೀಯ ಅಧಿಕಾರಿಗಳಾಗಿ ಬಡತಿಗೊಳಿಸಬಹುದು.

ದ್ವಿತೀಯ ಅಧಿಕಾರಿಯ ಪರೀಕ್ಷೆಯಲ್ಲಿ ಉತ್ತೀರ್ಣರಾದವರನ್ನು ತೃತೀಯ/ಚತುರ್ಥ ಅಧಿಕಾರಿಯಾಗಿ ನೇಮಕ ಮಾಡುತ್ತಾರೆ.

ಹಡಗಿನಲ್ಲಿಯ ಕರ್ತವ್ಯಗಳನ್ನು ೧೮ ತಿಂಗಳುಗಳ ವರೆಗೆ ಯಶಸ್ವಿಯಾಗಿ ನಿರ್ವಹಿಸಿದ ತೃತೀಯ/ಚತುರ್ಥ ಅಧಿಕಾರಿಗೆ ಮುಖ್ಯಾಧಿಕಾರಿ ಪರೀಕ್ಷೆಗೆ ಕಟ್ಟುವ ಅವಕಾಶವೊದಗುತ್ತದೆ. ಆರು ತಿಂಗಳುಗಳ ಕಾಲದ ತರಬೇತಿ, ಬರಹ ಮತ್ತು ಮೌಖಿಕ ಪರೀಕ್ಷೆಗಳನ್ನು ಮುಂಬೈಯ ಲಾಲ್ ಬಹದ್ದೂರ್ ಶಾಸ್ತ್ರಿ ನೌಕಾ ಮಹಾವಿದ್ಯಾಲಯದಲ್ಲಿ ಪೂರ್ತಿಗೊಳಿಸಬೇಕಾಗುತ್ತದೆ. ಇಂಥ ಯಶಸ್ವಿ ಅಭ್ಯರ್ಥಿಗಳು ಹಡಗುಗಳಲ್ಲಿ ಉಪಮುಖ್ಯಾಧಿಕಾರಿ ಅಥವಾ ಮುಖ್ಯಾಧಿಕಾರಿ ಹುದ್ದೆಗೆ ನೇಮಕಗೊಳ್ಳುತ್ತಾರೆ.

ಮುಖ್ಯಾಧಿಕಾರಿಯಾಗಿ ೧೮ ತಿಂಗಳು ಹಡಗಿನಲ್ಲಿ ಕೆಲಸ ಮಾಡಿದ ನಂತರ ಮುಂಬೈಯ ಲಾಲ್‌ಬಹದ್ದೂರ್ ಶಾಸ್ತ್ರಿ ನೌಕಾಮಹಾವಿದ್ಯಾಲಯದಲ್ಲಿ ಆರು ತಿಂಗಳ ತರಬೇತಿ, ಬರಹ ಮತ್ತು ಮೌಖಿಕ ಪರೀಕ್ಷೆಗಳನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿದ ನಂತರ ಅಭ್ಯರ್ಥಿಯು ಹಡಗಿನ ಕಪ್ತಾನನಾಗಿ ನೇಮಕಗೊಳ್ಳಲು ಅರ್ಹತೆ ಪಡೆಯುತ್ತಾನೆ.

ಹೀಗೆ ಪ್ರಾವೀಣ್ಯ ಪ್ರಮಾಣ ಪತ್ರ, ಉಚ್ಚಮಟ್ಟದ ಗುಣಾತ್ಮಕ ಅನುಭವ ಮತ್ತು ವೈಯಕ್ತಿಕ ಶ್ರೇಷ್ಠತೆಯನ್ನು ಹೊಂದಿದ ನಾವಿಕ ಅಭ್ಯರ್ಥಿಯು ಸುಮಾರು ಹನ್ನೆರಡು ವರ್ಷಗಳ ಸೇವೆಯ ನಂತರ ಹಡಗಿನ ಕಪ್ತಾನನಾಗುವ ಕನಸು ಕಾಣಬಹುದು.

**ನೆನಪಿಡಿ :** ಹಲವರಿಗೆ ಸಮುದ್ರ ವಾಸ್ತವ್ಯ ದೇಹಕ್ಕೆ ಒಗ್ಗುವದಿಲ್ಲ. ಚಾಣಕ್ಯ ತರಬೇತಿ ಹಡಗಿನ ಮುಖಾಂತರ ನೌಕಾಶಾಸ್ತ್ರದಲ್ಲಿ ಸ್ನಾತಕ ಪದವಿ ಪಡೆದವ ಹಡಗಿನಲ್ಲಿಯೇ ಕೆಲಸ ಮಾಡಬೇಕಾದ ಅನಿವಾರ್ಯತೆಯೇನಿಲ್ಲ. ಚಾಣಕ್ಯದಲ್ಲಿಯೇ ತರಬೇತಿ ಮುಂದುವರೆಸಿ ಅದೇ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು ಬೇರೆ ಹುದ್ದೆಗಳನ್ನು ನಿರ್ವಹಿಸಬಹುದು.




### ನೌಕಾ ಎಂಜಿನಿಯರಿಂಗ್ ಅಧಿಕಾರಿ

ಹಡಗಿನಲ್ಲಿಯ ಯಂತ್ರಗಳು ಮತ್ತು ಯಂತ್ರ ವ್ಯವಸ್ಥೆಗಳು ಕಾರಖಾನೆ ಇತ್ಯಾದಿಗಳಲ್ಲಿರುವಂತೆಯೇ ಇರುವದರಿಂದ ನೌಕಾ ಎಂಜಿನಿಯರ್‌ನಿಗೂ, ಉಳಿದ ಉತ್ಪಾದನೆ ನಿರತ ಸಂಘಟನೆಗಳಲ್ಲಿ ಸೇವೆ ಸಲ್ಲಿಸುವ ಎಂಜಿನಿಯರ್‌ನಿಗೂ ವಿಶೇಷ ಅಂತರವಿಲ್ಲ.

ಮುಖ್ಯ ಎಂಜಿನಿಯರ್‌ನ ನಿಯಂತ್ರಣ ಮತ್ತು ಸುಪರ್ದಿಯಲ್ಲಿ ಸೇವೆ ಸಲ್ಲಿಸುವ ಈತ, ಎಂಜಿನಿಯರಿಂಗ್ ವ್ಯವಸ್ಥೆಗಳ ಚಾಲನೆ, ನಿಯಂತ್ರಣ, ಯಂತ್ರಾಗಾರದ ಸುರಕ್ಷೆ, ಇಂಧನ ಪೂರೈಕೆಯ ಉಸ್ತುವಾರಿ, ಯಂತ್ರಗಳ ಸುಸ್ಥಿತಿ, ದುರಸ್ತಿ, ಕಾರ್ಯಕ್ಷಮತೆಯ ಉಚ್ಚಮಟ್ಟದ ಮುಂದುವರಿಕೆ ಇವೆಲ್ಲವುಗಳಿಗಾಗಿ ಯೋಜನಾಬದ್ಧವಾದ ಕಾರ್ಯಕ್ರಮ ಹಮ್ಮಿಕೊಳ್ಳುವದು ಇವೆಲ್ಲ ಕರ್ತವ್ಯಗಳನ್ನು ನಿರ್ವಹಿಸಬೇಕಾಗುವದು.

ಮುಖ್ಯ ಎಂಜಿನಿಯರ್‌ನ ಆಧೀನದಲ್ಲಿ ಐದನೇ ಎಂಜಿನಿಯರ್ ಅಧಿಕಾರಿ (ಅಥವಾ ಎಂಜಿನ್ ವಿದ್ಯಾರ್ಥಿ-Engine Cadet) ಯಿಂದ ಪ್ರಾರಂಭಿಸಿ ಮೊದಲನೆಯ ಎಂಜಿನಿ



ಯರ್ ಅಧಿಕಾರಿಯವರೆಗೆ ಐದು ಜನ ಅಧಿಕಾರಿಗಳು ಕೆಲಸ ಮಾಡುತ್ತಾರೆ.

ಈ ಹುದ್ದೆಗೆ ಅರ್ಹತೆ-ನಾಲ್ಕು ವರ್ಷದ ಮರೀನ್ ಎಂಜಿನಿಯರಿಂಗ್ ಪದವಿ ಪರೀಕ್ಷೆಯಲ್ಲಿ ತೇರ್ಗಡೆ. ಈ ಪದವಿಯನ್ನು ಕಲಕತ್ತೆ ಅಥವಾ ಮುಂಬೈಯ ಮರೀನ್ ಎಂಜಿನಿಯರಿಂಗ್ ಸಂಶೋಧನ ಸಂಸ್ಥೆಗಳಿಂದ ಪಡೆಯಬಹುದು.

ಈ ಪದವಿಗೆ ಬದಲಾಗಿ ಬೇರೆ ಬೇರೆ ವಿಶ್ವವಿದ್ಯಾಲಯಗಳಿಂದ ಪಡೆದ ಮೆಕ್ಯಾನಿಕಲ್, ಇಲೆಕ್ಟ್ರಿಕಲ್ ವಿಭಾಗದ ಬಿ.ಇ. ಪದವಿಗಳೂ ಆಗಬಹುದು. ಇಂಥ ಸ್ನಾತಕರು ಮೇಲೆ ಕಾಣಿಸಿದ ಮರೀನ್ ಎಂಜಿನಿಯರಿಂಗ್ ಸಂಸ್ಥೆಗಳಿಂದ ಒಂಭತ್ತು ತಿಂಗಳುಗಳ ಮರೀನ್ ಎಂಜಿನಿಯರಿಂಗ್ ಪಠ್ಯಕ್ರಮವನ್ನೂ ಅಭ್ಯಸಿಸಬೇಕಾಗುತ್ತದೆ.

ಚೆನ್ನೈ, ಮುಂಬಯಿ, ಕಲ್ಕತ್ತೆಗಳ ಹಡಗುಕಟ್ಟೆಗಳ ಅಂಗಳಗಳಲ್ಲಿ ಉಮೇದುವಾರಿಕೆ ಪೂರೈಸುವ ಮೂಲಕವೂ ಸಹ ಅಭ್ಯರ್ಥಿಯು ಐದನೆಯ ಎಂಜಿನಿಯರಿಂಗ್ ಅಧಿಕಾರಿಯಾಗಿ ನೇಮಕಗೊಳ್ಳಬಹುದು. ಇಂಥ ಉಮೇದುವಾರರು ಒಂದು ವರ್ಷದ ನಂತರ ಕೇಂದ್ರ ಸರಕಾರದ ಸಾರಿಗೆ ಇಲಾಖೆಯ ಅಧೀನದ ಹಡಗು ಶಾಖೆಯ ಮಹಾ ನಿರ್ದೇಶಕರು ನಡೆಯಿಸುವ ಪರೀಕ್ಷೆಯ ನಂತರ ದಕ್ಷತಾ ಪ್ರಮಾಣಪತ್ರ ಪಡೆದು ಮೇಲಿನ ಅಧಿಕಾರಿಯ ಹಂತಕ್ಕೆ ಬಡತಿ ಪಡೆಯಬಹುದು.

ನಂತರದ ೧೮ ತಿಂಗಳ ಸಮುದ್ರಯಾನದಲ್ಲಿ ಒಂದು ವರ್ಷ ಹಡಗು ಚಾಲನೆಯಲ್ಲಿ ಭಾಗವಹಿಸಿ ಮುಂದಿನ ಪರೀಕ್ಷೆಗಳನ್ನು ಪೂರೈಸಿ ಮೇಲಿನ ಹಂತಗಳ ಅಧಿಕಾರಿ ಹುದ್ದೆಗೆ ಬಡ್ತಿ ಪಡೆಯುತ್ತ ಹೋಗಬಹುದು. ಬರಹ ಮತ್ತು ಮೌಖಿಕ ಪರೀಕ್ಷೆಗಳೆರಡರಲ್ಲೂ ಉತ್ತೀರ್ಣರಾಗುವುದು ಆವಶ್ಯಕ.

ಹೀಗೆ ಐದನೇ ಎಂಜಿನಿಯರಿಂಗ್ ಅಧಿಕಾರಿ ಮುಖ್ಯ ಎಂಜಿನಿಯರ್‌ನ ಸ್ಥಾನಕ್ಕೇರಬಹುದು.

### ರೇಡಿಯೋ - ಇಲೆಕ್ಟ್ರಿಕಲ್ ಅಧಿಕಾರಿಗಳು

ರೇಡಿಯೋ ಕೋಣೆಗಳಿರುವ ಹಡಗುಗಳಲ್ಲಿ ಆ ಕೋಣೆಯ ಉಸ್ತುವಾರಿಗಾಗಿರುವ ರೇಡಿಯೋ ಅಧಿಕಾರಿಯಾಗಿ ಮತ್ತು ಹಡಗಿನಲ್ಲಿರುವ ವಿದ್ಯುತ್ ಉಪಕರಣಗಳ ಉಸ್ತುವಾರಿಗಾಗಿರುವ ಇಲೆಕ್ಟ್ರಿಕಲ್ ಅಧಿಕಾರಿಯಾಗಿಯೂ ಸೇವೆ ಸಲ್ಲಿಸುವ ಅವಕಾಶಗಳು ಇಲ್ಲಿವೆ. ●

# ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಚಿತ ತರಬೇತಿ ನೀಡುವ ಜ್ಞಾನ ಭಾರತಿ

"ಜ್ಞಾನಭಾರತಿ" ಕಳೆದ ಅನೇಕ ವರ್ಷಗಳಿಂದ ವಿದ್ಯಾ ಕ್ಷೇತ್ರದಲ್ಲಿ ತನ್ನದೇ ಆದ ವೈಶಿಷ್ಟ್ಯಪೂರ್ಣ ಚಟುವಟಿಕೆಗಳ ಮೂಲಕ ಪರಿಚಿತವಾಗಿರುವ ಅನೌಪಚಾರಿಕ ಶಿಕ್ಷಣ ಸಂಸ್ಥೆಯಾಗಿದ್ದು ಇದರ ಪ್ರಯೋಜನವನ್ನು ನಾಡಿನ ಸಾವಿರಾರು ವಿದ್ಯಾರ್ಥಿಗಳು ಪಡೆದಿರುತ್ತಾರೆ.

ಕಳೆದೆರಡು ವರ್ಷಗಳಿಂದ ಸ್ಪರ್ಧಾತ್ಮಕ ಪರೀಕ್ಷೆಯನ್ನು ಎದುರಿಸ ಹೊರಟ ಸ್ಪರ್ಧೋತ್ಸಾಹಿ ಯುವ ಮಿತ್ರರನ್ನು ತರಬೇತಿಗೊಳಿಸುವ ಕಾರ್ಯದಲ್ಲಿ ತೊಡಗಿದೆ. ಬಿ.ಎಸ್.ಆರ್.ಬಿ., ಎಸ್.ಎಸ್.ಸಿ., ಆರ್.ಆರ್.ಬಿ., ಕೆ.ಪಿ.ಎಸ್.ಸಿ., ಯು.ಪಿ.ಎಸ್.ಸಿ. ಕರೆದಿರುವ ಬೇರೆ ಬೇರೆ ಪರೀಕ್ಷೆಗಳಿಗೆ ಉಚಿತ ತರಬೇತಿಯನ್ನು ನೀಡುತ್ತಿದ್ದು ಇದರ ಪ್ರಯೋಜನವನ್ನು ನೂರಾರು ವಿದ್ಯಾರ್ಥಿಗಳು ಪಡೆದಿದ್ದಾರೆ.

ಭಾರತದ ಸ್ವತಂತ್ರ ಸ್ವರ್ಣ ಜಯಂತಿ ಸಂದರ್ಭದಲ್ಲಿ ಯು.ಪಿ.ಎಸ್.ಸಿ.ಯವರು ನಡೆಸುವ ನಾಗರೀಕ ಸೇವಾ ಪರೀಕ್ಷೆಗಳಾದ ಐ.ಎ.ಎಸ್., ಐ.ಪಿ.ಎಸ್. ಪೂರ್ವಭಾವೀ ಪರೀಕ್ಷೆಗಳಿಗೆ ಉಚಿತ ತರಬೇತಿ ನೀಡಲು ಸಂಸ್ಥೆಯ ಆಡಳಿತ ಮಂಡಳಿ ಮತ್ತು ಉಪನ್ಯಾಸವರ್ಗ ನಿಶ್ಚಯಿಸಿದೆ.

**ತರಬೇತಿಯ ವಿಶೇಷತೆಗಳು :**

- ಸ್ಪರ್ಧಾತ್ಮಕ ಪರೀಕ್ಷಾ ರಂಗದಲ್ಲಿ ತರಬೇತಿ ಉಪನ್ಯಾಸಕರಿಂದ ಪಾಠಗಳು.
- ಐ.ಎ.ಎಸ್., ಐ.ಪಿ.ಎಸ್. ಪರೀಕ್ಷಾ ವಿಧಾನ ಮತ್ತು ಪಾಠಕ್ರಮದ ಬಗ್ಗೆ ವಿವರಣೆ ಹಾಗೂ ಐಚ್ಛಿಕ ವಿಷಯಗಳ ಆಯ್ಕೆ ಬಗ್ಗೆ ಮಾಹಿತಿ ಮತ್ತು ಮಾರ್ಗದರ್ಶನ.
- ಐಚ್ಛಿಕ ವಿಷಯಗಳಲ್ಲಿ ಪ್ರತಿ ಅಧ್ಯಾಯಕ್ಕೂ ಇರುವ ಪರಾಮರ್ಶನ ಗ್ರಂಥಗಳ ಬಗ್ಗೆ ಮಾಹಿತಿ.
- ಸಾಮಾನ್ಯ ಜ್ಞಾನ ಅಧ್ಯಯನದ ಕುರಿತು ಎಲ್ಲ ವಿಷಯಗಳ ಭೋದನೆ ಮತ್ತು ಪ್ರಚಲಿತ ವಿದ್ಯಮಾನಗಳ ಬಗ್ಗೆ ಚರ್ಚೆ.
- ಐಚ್ಛಿಕ ಮತ್ತು ಸಾಮಾನ್ಯ ಜ್ಞಾನ ಅಧ್ಯಯನದ ಬಗ್ಗೆ ಪ್ರತ್ಯೇಕ ತರಗತಿ ವ್ಯವಸ್ಥೆ.
- ಸಂದರ್ಶನಕ್ಕೆ ವಿಶೇಷ ತರಬೇತಿ ವ್ಯವಸ್ಥೆ.
- ಈ ಹಿಂದೆ ಐ.ಎ.ಎಸ್., ಐ.ಪಿ.ಎಸ್. ಪರೀಕ್ಷಾ ಯಶಸ್ವಿ ಅಭ್ಯರ್ಥಿಗಳೊಡನೆ ಭೇಟಿಗೆ ಅವಕಾಶ.
- ಮೊಟ್ಟಮೊದಲ ಬಾರಿಗೆ ಕನ್ನಡ ಮತ್ತು ಇಂಗ್ಲೀಷ್ ಎರಡೂ ಮಾಧ್ಯಮದಲ್ಲಿ ತರಬೇತಿ. ವಿಶೇಷವಾಗಿ ಕನ್ನಡದಲ್ಲಿ ಎಲ್ಲಾ ವಿಷಯಗಳ ಬೋಧನೆ.
- ಬಹು ಆಯ್ಕೆ ಪ್ರಶ್ನೆಗಳನ್ನು ಉತ್ತರಿಸಲು ಇರುವ ಸುಲಭ ಉಪಾಯಗಳ ಬಗ್ಗೆ ಮಾರ್ಗದರ್ಶನ.

ಹಾಂ! ಪರೀಕ್ಷೆಯ ಪ್ರಕಟಣೆ ಈ ತಿಂಗಳ ೨೯ರಂದು ಹೊರಬೀಳಲಿದ್ದು, ದಿ. ೩೧-೫-೯೮ರಂದು ಐ.ಎ.ಎಸ್. ಪೂರ್ವಭಾವೀ ಪರೀಕ್ಷೆ ನಡೆಯಲಿದೆ. ತರಬೇತಿ ತರಗತಿಗಳಿಗೆ ಸೇರಬಯಸುವ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಲು ದಿ. ೧೫-೧೨-೧೯೯೭ ಕೊನೆಯ ದಿನವಾಗಿರುತ್ತದೆ. ಹೆಚ್ಚಿನ ವಿವರಗಳಿಗೆ ಬೆಳಿಗ್ಗೆ ೧೦.೦೦ರಿಂದ ಮಧ್ಯಾಹ್ನ ೧.೦೦ರ ತನಕ ಕಾರ್ಯಾಲಯವನ್ನು ಸಂಪರ್ಕಿಸಬಹುದಾಗಿದೆ.

ವಿಳಾಸ :
ಸಂಯೋಜಕರು, 'ಜ್ಞಾನಭಾರತಿ',
ಚಾಮರಾಜಪೇಟೆ, ಬೆಂಗಳೂರು-೧೮.



## ಕಿಲ ಕಿಲ
## ಕೂಪನ್ - ೬

ಹೆಸರು..............................................................

ತರಗತಿ..............................................................

ವಯಸ್ಸು..............................................................

ತಂದೆ..............................................................

ತಾಯಿ..............................................................

ವಿಳಾಸ..............................................................

..............................................................

..............................................................

..............................................................

## ಜಾಣ ವಿದ್ಯಾರ್ಥಿ

ಹೆಸರು :..............................................................

ತಂದೆ :..............................................................

ಅಂಚೆ ವಿಳಾಸ :..............................................................

..............................................................

..............................................................

ಶಾಲೆ / ಕಾಲೇಜು : ..............................................................

ತರಗತಿ : ..............................................................

೯೦ ರೂ. ಎಂ.ಓ. ಮಾಡಿದ ದಿನಾಂಕ :.....................

ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರ

ವಿದ್ಯಾರ್ಥಿ ಸಹಿ ಸಹಿ - ಸೀಲು

## ಮನೆ - ೩

**ಮನೆ** ಎಂದರೆ..............................................................

ಹೆಸರು :

ವಿಳಾಸ :

ಸಹಿ

# ಸಾವಿರ ರೂಪಾಯಿ ಸವಾಲು !

**ಮನೆ ಎಂದರೆ ಏನು?**

ಕಳೆದ ಎರಡು ತಿಂಗಳಲ್ಲಿ ಈ ಸವಾಲಿಗೆ ಸಾವಿರಾರು ಜನ ಉತ್ತರ ಕಳಿಸಿದ್ದಾರೆ. ಓದುಗರ ಉತ್ತರಗಳು ವೈವಿಧ್ಯಮಯವಾಗಿದ್ದು 'ಮನೆ' ಕುರಿತು ಹೊಸ ಹೊಸ ಒಳನೋಟ ಬೀರಿವೆ. ಆದರೆ 'ಬಿಸಿಲ ಬದುಕು' ಬಯಸಿದ ಸರಿಯುತ್ತರವನ್ನು ಊಹಿಸಲು ಮಾತ್ರ ಯಾರಿಂದಲೂ ಸಾಧ್ಯವಾಗಿಲ್ಲ. ಅಂತೆಯೇ ಈಗ ಸರಿಯುತ್ತರ ಊಹಿಸಲು ನೆರವಾಗುವಂತೆ ಒಂದು 'ಸುಳಿವು' ನೀಡುತ್ತಿದ್ದೇವೆ. ಈ ಸುಳಿವಿನ ನಂತರ ಸರಿಯುತ್ತರ ಊಹಿಸಿದವರಿಗೆ ರೂ. ೫೦೦/- ಬಹುಮಾನ ಸಿಗಲಿದೆ. ಹಾಗೇ ಸರಿಯುತ್ತರ ನೀಡಲು ವಿಫಲರಾದರೂ 'ಮನೆ' ಬಗ್ಗೆ ಆಕರ್ಷಕ ವಿವರಣೆ ನೀಡಿದ ಆಯ್ದ ಓದುಗರ ವಾಕ್ಯ ಹಾಗೂ ಹೆಸರುಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

**ಸುಳಿವು - ೧**

**ಮನೆ**

- ಇದು ಅಂಕುರ ಪ್ರಕಾಶನಕ್ಕೆ ಸಂಬಂಧಿಸಿದ್ದು.

○ ಪಕ್ಕದಲ್ಲಿರುವ ಮನೆ-೩ ಕೂಪನ್ ಭರ್ತಿ ಮಾಡಿ ಕಳಿಸಿ. ಒಬ್ಬರು ಎಷ್ಟಾದರೂ ಕೂಪನ್ ಕಳಿಸಬಹುದು.

**ಬಿಸಿಲ ಬದುಕು ಮಾಸ ಪತ್ರಿಕೆ**

**ಅಂಚೆ ಪೆಟ್ಟಿಗೆ : ೭೯೫೧, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯**



## ಮಂಗಳೂರು ವಿಶ್ವವಿದ್ಯಾಲಯ

# ಕುಲಪತಿ ಎಸ್. ಗೋಪಾಲ್ ಸಂದರ್ಶನ

○ ಡಾ. ಎಸ್.ಸಿ. ಶರ್ಮಾ

**ನಿಮಗೆ ಭೌತಶಾಸ್ತ್ರದಲ್ಲಿ ಅಭಿರುಚಿ ಬರಲು ಕಾರಣಗಳೇನು?**

ಭೌತಶಾಸ್ತ್ರವನ್ನು ಅಧ್ಯಯನ ಮಾಡಲು ಗಣಿತಶಾಸ್ತ್ರ ತುಂಬಾ ಸಹಕಾರಿಯಾಗುತ್ತದೆ. ನನಗೆ ಗಣಿತ ಶಾಸ್ತ್ರದಲ್ಲಿ ವಿಶೇಷವಾದ ಆಸಕ್ತಿಯಿದ್ದುದರಿಂದ ಭೌತಶಾಸ್ತ್ರಕ್ಕೆ ಸಂಬಂಧಪಟ್ಟ ಯಾವುದೇ ಕ್ಲಿಷ್ಟಕರವಾದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು, ನಿಯಮಗಳನ್ನು ಅರ್ಥಮಾಡಿಕೊಳ್ಳಲು ಸುಲಭವಾಗಿ ಸಾಧ್ಯವಾಗುತ್ತಿತ್ತು. ಭೌತಶಾಸ್ತ್ರವು ಒಳಗೊಳ್ಳುವ ಖಗೋಳ ಶಾಸ್ತ್ರ ಸಾಪೇಕ್ಷವಾದ, ನ್ಯೂಕ್ಲಿಯರ್ ವಿಜ್ಞಾನ ಮತ್ತು ಫಿಶನ್ ಮತ್ತು ಫ್ಯೂಶನ್ - ಈ ವಿಷಯಗಳು ನನಗೆ ಅತ್ಯಂತ ಪ್ರಿಯವೂ ಆಕರ್ಷಣೀಯವೂ ಆಗಿದ್ದವು. ಈ ವಿಷಯಗಳನ್ನಲ್ಲದೆ ಕ್ವಾಂಟಮ್ ಮೆಕಾನಿಕ್ಸ್ ಮತ್ತು ಇಲೆಕ್ಟ್ರೋ ಡೈನಾಮಿಕ್ಸ್ ಈ ವಿಷಯಗಳನ್ನು ನಾನು ಸುಲಭವಾಗಿ ಅರ್ಥಮಾಡಿಕೊಳ್ಳುತ್ತಿದ್ದೆ. ಈ ಕಾರಣಗಳಿಂದಾಗಿ ಭೌತಶಾಸ್ತ್ರದಲ್ಲಿ ನನಗೆ ವಿಶೇಷ ಅಭಿರುಚಿ ಹುಟ್ಟಿತು.

**ಭೌತಶಾಸ್ತ್ರ ವಿಷಯದ ಬಗ್ಗೆ ತಮ್ಮ ಅಭಿಪ್ರಾಯಗಳೇನು?**

ಭೌತಶಾಸ್ತ್ರವು ಪ್ರಕೃತಿಯ ನಿಯಮಗಳನ್ನು ಭೌತಿಕ ಮಟ್ಟದಲ್ಲಿ ಅರಿಯುವ ಜ್ಞಾನಕ್ಷೇತ್ರವಾಗಿದೆ. ಇದಕ್ಕೆ ತಾರ್ಕಿಕ ಪ್ರಜ್ಞೆ, ಬೌದ್ಧಿಕತೆ, ಸೋಪಜ್ಞತೆ ಹಾಗೂ ನಿರ್ದಿಷ್ಟ ವಿಷಯದ ಕುರಿತ ಆಲೋಚನಾತ್ಮಕ ಚಿಂತನೆ-ಈ ಅಂಶಗಳು ಅಧಿಕವಾಗಿ ಬೇಕಾಗುತ್ತವೆ. ಇವುಗಳ ಸಮನ್ವಯದಿಂದ ಮೂಡಿದ ತಿಳುವಳಿಕೆಯಿಂದ ಪ್ರೇರಿತವಾದ ವೈಚಾರಿಕತೆಯು ಅನಿರ್ವಚನೀಯವಾದ ಸಂತೋಷವನ್ನು ನೀಡುತ್ತದೆ. ಈ ಬಗೆಯ ಅಲೌಕಿಕ ಆನಂದವನ್ನು ಭೌತಶಾಸ್ತ್ರದ ಅಧ್ಯಯನದಿಂದ ನಾನು ಅನುಭವಿಸಿದ್ದೇನೆ.

**ಉನ್ನತ ಶಿಕ್ಷಣದ ಬಗ್ಗೆ ತಮ್ಮ ಅಭಿಪ್ರಾಯವೇನು?**

ಉತ್ಕೃಷ್ಟತೆ ಮತ್ತು ಸೃಜನಶೀಲತೆ-ಇವು ಉನ್ನತ ಶಿಕ್ಷಣದ ಅವಿಭಾಜ್ಯ ಅಂಗಗಳಾಗಿವೆ. ಈ ಎರಡು ಆಯಾಮಗಳನ್ನು ಅಳವಡಿಸಿಕೊಂಡೇ ಉನ್ನತ ಶಿಕ್ಷಣವು ಸಾಗಬೇಕು. ಮೂಲಭೂತ ಸಂಶೋಧನೆ ಹಾಗೂ ತಾಂತ್ರಿಕತೆ ಮತ್ತು ಕೈಗಾರಿಕಾ ಕ್ರಾಂತಿ - ಇವೆರಡರ ನಡುವೆ ಉನ್ನತ ಶಿಕ್ಷಣದ ಫಲಿತಾಂಶವು ಸಾಮಾಜಿಕ ಪ್ರಸ್ತುತತೆಯನ್ನು ಸಾಧಿಸಬೇಕು. ವೈಜ್ಞಾನಿಕ ಸಂಶೋಧನೆಗಳ ಸಾಮಾಜಿಕ ಪ್ರಸ್ತುತತೆಯ ಕುರಿತಂತೆ ವಿಶೇಷ ಕಾಳಜಿ ವಹಿಸಬೇಕಾಗುತ್ತದೆ. ಮೂಲಭೂತವಾದ ಸಂಶೋಧನೆಯು ಅತಿ ಜಾಗ್ರತ ಸ್ವರೂಪದ ಫಲಿತಾಂಶವನ್ನು ನೀಡದಿದ್ದರೂ ಮಾನವನ ಕುತೂಹಲ ಮತ್ತು ಶೋಧ ಪ್ರವೃತ್ತಿಯನ್ನು ಹಾಗೂ ಪ್ರಕೃತಿಯ ನಿಯಮಗಳನ್ನು ಪರಿಷ್ಕರಿಸಲು ಸಹಾಯಕವಾಗಿದೆ. ಮೂಲಭೂತ ಸಂಶೋಧನೆ ಮತ್ತು ತಾಂತ್ರಿಕತೆ ಹಾಗೂ ಕೈಗಾರಿಕಾ ಪ್ರಗತಿ ಸಂಬಂಧಿಯಾದ ಸಂಶೋಧನೆ - ಈ ಎರಡೂ ನಿಟ್ಟಿನಲ್ಲಿ ಉನ್ನತ ಶಿಕ್ಷಣ ಮುಂದುವರಿಯಬೇಕು.

**ಮಂಗಳೂರು ವಿಶ್ವವಿದ್ಯಾನಿಲಯದ ಸಾರ್ವತ್ರಿಕ ಅಭಿವೃದ್ಧಿಗಾಗಿ ಕುಲಪತಿಗಳಾಗಿ ತಾವು ಹಾಕಿಕೊಂಡಿರುವ ಯೋಜನೆಗಳು ಯಾವುವು?**

ವಿಶ್ವವಿದ್ಯಾನಿಲಯವೊಂದರ ಸರ್ವಕಾಲಿಕ ಹಾಗೂ ಸರ್ವತೋಮುಖ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಎರಡು ವಿಷಯಗಳಿರುತ್ತವೆ : ೧. ವಿಶ್ವವಿದ್ಯಾನಿಲಯದ ಶೈಕ್ಷಣಿಕ ಅಭಿವೃದ್ಧಿ ಮತ್ತು ಅದರ ಉನ್ನತ ಗುಣಮಟ್ಟವನ್ನು ಕಾಪಾಡುವುದು. ೨. ವಿಶ್ವವಿದ್ಯಾನಿಲಯದ ಭೌತಿಕ ಬೆಳವಣಿಗೆ. ಇದರಲ್ಲಿ ಶಿಕ್ಷಕರಿಗೆ, ಶಿಕ್ಷಕೇತರ ಸಿಬ್ಬಂದಿಗೆ ಮತ್ತು ವಿದ್ಯಾರ್ಥಿ ಸಮುದಾಯಕ್ಕೆ ಭೌತಿಕವಾಗಿ ಸಹಾಯಕವಾಗುವ ಯೋಚನೆಗಳು ಅಡಕವಾಗಿರುತ್ತವೆ.

೧. ಶೈಕ್ಷಣಿಕ ಅಭಿವೃದ್ಧಿ ಮತ್ತು ಉನ್ನತ ಗುಣಮಟ್ಟವನ್ನು ಕಾಪಾಡಿಕೊಂಡು ಬರುವ ಸಲುವಾಗಿ ಈ ಕೆಳಗಿನ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

೧.೧ ಪ್ರಸ್ತುತ ಮಂಗಳೂರು ವಿಶ್ವವಿದ್ಯಾನಿಲಯ ೨೨ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನ ವಿಭಾಗಗಳನ್ನು ಹೊಂದಿದೆ. ಈ ಎಲ್ಲಾ ವಿಭಾಗಗಳನ್ನು ಶೈಕ್ಷಣಿಕವಾಗಿ ಬಲಪಡಿಸಲು ಉದ್ದೇಶಿಸಲಾಗಿದೆ. ಮುಂದಿನ ಮೂರು ವರ್ಷಗಳ ಅವಧಿಯೊಳಗಾಗಿ ಎಲ್ಲಾ ವಿಭಾಗಗಳಲ್ಲಿಯೂ ಕನಿಷ್ಠ ಒಂದು ರಾಷ್ಟ್ರೀಯ ಮಟ್ಟದ ವಿಚಾರಗೋಷ್ಠಿ, ಕಮ್ಮಟ ಸಮಾವೇಶವನ್ನು ನಡೆಸಲಾಗುವುದು.

೧.೨ ರಾಷ್ಟ್ರೀಯ ಮಟ್ಟದ ಪ್ರಯೋಗಾಲಯ ಮತ್ತು ಸಂಶೋಧನ ಕೇಂದ್ರಗಳನ್ನು ಸಂದರ್ಶಿಸಿ, ಕನಿಷ್ಠ ಒಂದು ತಿಂಗಳ ಅವಧಿಗೆ ಇಂತಹ ಕೇಂದ್ರಗಳಲ್ಲಿ ಅಧ್ಯಯನಾತ್ಮಕ ಸಂಶೋಧನೆ ಕೈಗೊಳ್ಳಲು ನೆರವಾಗುವ ಉದ್ದೇಶದಿಂದ ಶೈಕ್ಷಣಿಕ ಸಿಬ್ಬಂದಿಗೆ ಧನಸಹಾಯವನ್ನು ಒದಗಿಸಲಾಗುವುದು.

೧.೩ ರಾಷ್ಟ್ರೀಯ ಮಟ್ಟದ ವಿಚಾರಗೋಷ್ಠಿ, ಕಮ್ಮಟ ಶಿಬಿರಗಳಲ್ಲಿ ಭಾಗವಹಿಸಿ ಸಂಶೋಧನಾ ಪ್ರಬಂಧ ಮಂಡಿಸಲು ಶಿಕ್ಷಕರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ವರ್ಷಕ್ಕೆ ಒಂದು ಬಾರಿ ಇಂತಹ ವಿಚಾರಗೋಷ್ಠಿಗಳಿಗೆ ಹೋಗಿಬರಲು ಆರ್ಥಿಕ ನೆರವನ್ನು ನೀಡಲಾಗುವುದು.

೧.೪ ಶಿಕ್ಷಕರು ಕೈಗೊಳ್ಳುವ ಸಂಶೋಧನ ಯೋಜನೆಗೆ ಅಗತ್ಯವಿರುವ ಆರ್ಥಿಕ ಸೌಲಭ್ಯವನ್ನು ಧನ ಸಹಾಯ ನೀಡುವ ಬೇರೆ ಬೇರೆ ಮೂಲಗಳಿಂದ ಪಡೆಯುವ ನಿಟ್ಟಿನಲ್ಲಿ ಸೂಕ್ತ ಸಹಕಾರ ಮತ್ತು ನಿರ್ದೇಶನವನ್ನು ಕೊಡಲಾಗುವುದು.

೧.೫ ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ತಮ್ಮ ಸಂಶೋಧನ ಪ್ರಬಂಧಗಳನ್ನು ಸಾದರಪಡಿಸಲು ಸಾಧ್ಯವಾಗುವಂತೆ ಶಿಕ್ಷಕರಿಗೆ ಮೂರು ವರ್ಷಕ್ಕೆ ಒಂದು ಬಾರಿ ವಿದೇಶಕ್ಕೆ ಹೋಗಿಬರಲು ಆರ್ಥಿಕ ನೆರವನ್ನು ವಿಶ್ವವಿದ್ಯಾನಿಲಯದ ಮೂಲದಿಂದ ನೀಡಲಾಗುವುದು ಅಥವಾ ಆರ್ಥಿಕ ನೆರವು ನೀಡುವ ಬೇರೆ ಸಂಸ್ಥೆಗಳಿಂದ ಹಣ ಪಡೆಯುವಲ್ಲಿ ಸರಿಯಾದ ಮಾರ್ಗದರ್ಶನವನ್ನು ನೀಡಲಾಗುವುದು.

೧.೬ ವಿಶ್ವವಿದ್ಯಾನಿಲಯದ ಗಣಕ ಕೇಂದ್ರದ ಕೆಲಸದ ವೇಳೆಯ ಅವಧಿಯನ್ನು ಬೆಳಿಗ್ಗೆ ೮ ಗಂಟೆಯಿಂದ ರಾತ್ರಿ ೧೨ ಗಂಟೆಯವರೆಗೆ ವಿಸ್ತರಿಸಲಾಗಿದ್ದು, ಈ ಗಣಕ ಕೇಂದ್ರದ ಸೌಲಭ್ಯವನ್ನು

ವಿಶ್ವವಿದ್ಯಾನಿಲಯದ ಎಲ್ಲರೂ ಪಡೆಯುವಂತೆ ಅನುಕೂಲ ಮಾಡಿಕೊಡಲಾಗುವುದು.

೧.೭ ಇ-ಮೈಲ್ ಸೌಲಭ್ಯವನ್ನು ಅಗತ್ಯವಿರುವವರಿಗೆ ಒದಗಿಸಲಾಗುವುದು. ಸಂಶೋಧನ ಲೇಖನಗಳನ್ನು ರವಾನಿಸಲು ಮತ್ತು ಪಡೆಯಲು ಇ-ಮೈಲ್ ಸೌಲಭ್ಯವು ಅತ್ಯಂತ ಉಪಯುಕ್ತವಾಗಿದೆ. ರಾಷ್ಟ್ರೀಯ, ಅಂತರಾಷ್ಟ್ರೀಯ ವಿಜ್ಞಾನಿಗಳು ಹಾಗೂ ವಿದ್ವಾಂಸರ ಸಂಪರ್ಕವನ್ನು ಹೊಂದಲು ಸಹಾಯವಾಗುವಂತೆ ಇ-ಮೈಲ್ ತಾಂತ್ರಿಕ ಸೌಲಭ್ಯವನ್ನು ಕಲ್ಪಿಸಲಾಗಿದೆ.

೧.೮ ಸೌರ ತಾಂತ್ರಿಕತೆಯಲ್ಲಿ ಡಿಪ್ಲೊಮಾ ಕೋರ್ಸ್‌ನ್ನು ಈ ವರ್ಷದಿಂದ ಪ್ರಾರಂಭಿಸಲಾಗುವುದು. ಈ ಕೋರ್ಸಿನ ಅವಧಿಯು ಒಂದು ವರ್ಷ.

೧.೯ ಅನ್ವಯಿಕ ರಸಾಯನ ಶಾಸ್ತ್ರದಲ್ಲಿ ಎಂ.ಎಸ್ಸಿ. ಸ್ನಾತಕೋತ್ತರ ಅಧ್ಯಯನದ ಅವಕಾಶವನ್ನು ಈ ವರ್ಷದಿಂದ ಜಾರಿಗೆ ತರಲು ಉದ್ದೇಶಿಸಲಾಗಿದೆ. ಕರಾವಳಿ ವಲಯದ ಕೈಗಾರಿಕಾ ಸಂಸ್ಥೆಗಳಿಗೆ ಅನುಕೂಲವಾಗುವ ಬೋಧನಾ ವಿನ್ಯಾಸವನ್ನು ಈ ಅಧ್ಯಯನ ಕ್ರಮದಲ್ಲಿ ಅಳವಡಿಸಲಾಗಿದೆ.

೧.೧೦ ಸ್ನಾತಕೋತ್ತರ ಅಧ್ಯಯನ ವಿಭಾಗಕ್ಕೆ ಪ್ರತಿಭಾವಂತ ವಿದ್ಯಾರ್ಥಿಗಳು ಸೇರ್ಪಡೆಗೊಳ್ಳಬೇಕಾದರೆ ಮಂಗಳೂರು ವಿಶ್ವವಿದ್ಯಾನಿಲಯದ ಸಂಯೋಜಿತ ಕಾಲೇಜುಗಳ ಶೈಕ್ಷಣಿಕ ಗುಣಮಟ್ಟವು ಕೂಡ ಮೇಲ್ಮಟ್ಟದ್ದಾಗಿರುವಂತೆ ನೋಡಿಕೊಳ್ಳಬೇಕಾಗುತ್ತದೆ. ಇಂತಹ ಹೊಣೆಗಾರಿಕೆಗೆ ಪೂರಕವಾಗಿ ನಮ್ಮ ವಿಶ್ವವಿದ್ಯಾನಿಲಯದಲ್ಲಿರುವ ಕಾಲೇಜು ಅಭಿವೃದ್ಧಿ ಮಂಡಳಿಯು ಸಮರ್ಪಕವಾಗಿ ಕಾರ್ಯ ನಿರ್ವಹಿಸಬೇಕಾಗಿದೆ. ಸಂಯೋಜಿತ ಕಾಲೇಜುಗಳ ಶೈಕ್ಷಣಿಕ ಪ್ರಗತಿಯು ಪರಿಣಾಮಕಾರಿಯಾಗಿ ಆಗುವಂತೆ ಕಾಲೇಜು ಅಭಿವೃದ್ಧಿ ಮಂಡಳಿಯು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಜೊತೆಗೆ ಧನಾತ್ಮಕ ಸಂಪರ್ಕವನ್ನು ಹೊಂದುವಂತೆ ನೋಡಿಕೊಳ್ಳಲಾಗುವುದು. ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳಿಗೆ ಸಂಬಂಧಪಟ್ಟಂತೆ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಮತ್ತು ಅಧ್ಯಾಪಕ ವರ್ಗದವರಿಗೆ ತರಬೇತು ನೀಡುವ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಲಾಗಿದೆ.

೧.೧೧ ಮಂಗಳೂರು ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು ಮತ್ತು ಫೀಲ್ಡ್ ಮಾರ್ಷಲ್ ಕೆ.ಎಂ. ಕಾರಿಯಪ್ಪ ಕಾಲೇಜು, ಮಡಿಕೇರಿ - ಈ ಎರಡು ಪ್ರಥಮ ದರ್ಜೆ ಕಾಲೇಜುಗಳು ಮಂಗಳೂರು ವಿಶ್ವವಿದ್ಯಾನಿಲಯದ ನೇರ ಆಡಳಿತಕ್ಕೆ ಒಳಪಟ್ಟಿವೆ. ವಿಜ್ಞಾನ ವಿಷಯಕ್ಕೆ ಸಂಬಂಧಿಸಿದಂತೆ ಬಿ.ಎಸ್ಸಿ ತರಗತಿಗಳಿಗೆ ಮೈಕ್ರೋಬಯೊಲಜಿ, ಬಯೋಕೆಮಿಸ್ಟ್ರಿ, ಕಂಪ್ಯೂಟರ್ ಸೈನ್ಸ್ ಮತ್ತು ಇಲೆಕ್ಟ್ರೋನಿಕ್ಸ್ ವಿಷಯಗಳನ್ನು ಸೇರಿಸಲಾಗುವುದು. ಮುಖ್ಯವಾಗಿ ಪದವಿ ಮಟ್ಟದ ವಿಜ್ಞಾನ ವಿಷಯಗಳ ಅಧ್ಯಯನವು ಸಾಮಾಜಿಕವಾಗಿ ಪ್ರಸ್ತುತವಾಗುವಂತೆ ಗಮನಹರಿಸಲಾಗಿದೆ. ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ಆರ್ಥಿಕ ನೆರವಿನಿಂದ ಮಡಿಕೇರಿ ಕಾಲೇಜನ್ನು ಸ್ನಾತಕೋತ್ತರ ಅಧ್ಯಯನ ಕೇಂದ್ರವಾಗಿ ರೂಪಿಸಲು ಸಿದ್ಧತೆಗಳನ್ನು ನಡೆಸಲಾಗಿದೆ. ಪರಿಸರ ವಿಜ್ಞಾನ ವಿಷಯದಲ್ಲಿ ಸ್ನಾತಕೋತ್ತರ ಅಧ್ಯಯನ ಕೇಂದ್ರವನ್ನು ತೆರೆಯಲಾಗುವುದು. ಈ ಉದ್ದೇಶಕ್ಕಾಗಿ ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗವು ರೂ. ೩೨ ಲಕ್ಷವನ್ನು ನೀಡಿದೆ. ಮಡಿಕೇರಿ ಕಾಲೇಜಿನ ಆವರಣದಲ್ಲಿ ವಸತಿ ಸೌಕರ್ಯವನ್ನು ಕಲ್ಪಿಸಲು ಕರ್ನಾಟಕ ರಾಜ್ಯ ಸರ್ಕಾರವು ರೂ. ೨೫ ಲಕ್ಷವನ್ನು ಒದಗಿಸಿದೆ. ಮಂಗಳೂರು ವಿಶ್ವವಿದ್ಯಾನಿಲಯದ ಸ್ವಾಧೀನದಲ್ಲಿರುವ ಪ್ರಥಮ ದರ್ಜೆ ಕಾಲೇಜುಗಳ ಸರ್ವಾಂಗೀಣ ಅಭಿವೃದ್ಧಿಗೆ ಸಮರ್ಪಕ ಯೋಜನೆಗಳನ್ನು ಆದ್ಯತೆ ನೀಡಿ ಕೈಗೊಳ್ಳಲಾಗುವುದು.

೨. ಮಂಗಳೂರು ವಿಶ್ವವಿದ್ಯಾನಿಲಯದ ಭೌತಿಕ ಬೆಳವಣಿಗೆಗೆ ಸಂಬಂಧಪಟ್ಟಂತೆ ಈ ಕೆಳಗಿನ ಉಪಯುಕ್ತ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

೨.೧ ಮಂಗಳೂರು ವಿಶ್ವವಿದ್ಯಾನಿಲಯದ ಸುಸಜ್ಜಿತ ಗ್ರಂಥಾಲಯಕ್ಕೆ ನಿಯತಕಾಲಿಕೆಗಳು, ಪರಾಮರ್ಶನ ಗ್ರಂಥಗಳನ್ನು ತರಿಸುವ ಬಗ್ಗೆ ವಿಶೇಷ ಗಮನವನ್ನು ಕೊಡಲಾಗುವುದು. ಗ್ರಂಥಾಲಯದಲ್ಲಿ ಲೋಕಲ್ ಏರಿಯಾ ನೆಟ್‌ವರ್ಕ್

## ಮಂಗಳೂರು ವಿ.ವಿ. ದಕ್ಷ ಕುಲಪತಿ

# ಎಸ್. ಗೋಪಾಲ್



ಮಂಗಳೂರು ಜಿಲ್ಲೆಯು ಎರಡು ಸಾಗರಗಳನ್ನು ಹೊಂದಿದೆ. ಒಂದು ಜಲ ಸಾಗರವಾದರೆ ಮತ್ತೊಂದು ಜ್ಞಾನಸಾಗರವಾದ ''ಮಂಗಳ ಗಂಗೋತ್ರಿ''. ಈ ಮಂಗಳ ಗಂಗೋತ್ರಿಯ ಉಪಕುಲಪತಿಯಾಗಿರುವ ಎಸ್. ಗೋಪಾಲ್‌ರವರನ್ನು ಜ್ಞಾನಸಾಗರದ ರತ್ನವೆಂದು ಹೇಳಿದರೆ ತಪ್ಪಾಗಲಾರದು. ಬೆಂಗಳೂರು ಜಿಲ್ಲೆಯ ಹೊಸಕೋಟೆ ತಾಲೂಕಿನ ಹಸಿಗಾಲ ಗ್ರಾಮ ಇವರ ಜನ್ಮಸ್ಥಳ. ಇವರು ೨೪ ಆಗಸ್ಟ್ ೧೯೪೦ರಲ್ಲಿ ಸಾಮಾನ್ಯ ವ್ಯವಸಾಯ ಕುಟುಂಬದಲ್ಲಿ ಜನಿಸಿದರು. ಇವರ ಉನ್ನತ ವಿದ್ಯಾಭ್ಯಾಸದ ತವರು ಮೈಸೂರು ವಿಶ್ವವಿದ್ಯಾಲಯ. ಇವರು ಎಂ.ಎಸ್ಸಿ (ಭೌತಶಾಸ್ತ್ರ) ಮತ್ತು ಮೆಚ್ಚಿನ ಗುರುಗಳಾದ ಬಿ. ಸಂಜೀವಯ್ಯನವರ ಮಾರ್ಗದರ್ಶನದಲ್ಲಿ ಡಾಕ್ಟರೇಟ್ ಪದವಿಗಳನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆದರು.

ಮೈಸೂರು ವಿಶ್ವವಿದ್ಯಾಲಯದಲ್ಲಿ ರೀಡರ್ ಹುದ್ದೆಯಿಂದ ತಮ್ಮ ವೃತ್ತಿಜೀವನವನ್ನು ೧೯೭೫ರಲ್ಲಿ ಪ್ರಾರಂಭಿಸಿದ ಇವರನ್ನು ೧೯೮೫ರಲ್ಲಿ ಇದೇ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್‌ನ್ನಾಗಿ ಮಾಡಲಾಯಿತು. ಸುಮಾರು ೨೬ ವರ್ಷ ಅಣುಭೌತಶಾಸ್ತ್ರ ವಿಷಯದ ಬಗ್ಗೆ ವಿದ್ಯಾರ್ಥಿಗಳಿಗೆ ಬೋಧಿಸಿದರು. ಭೌತ ಹಾಗೂ ಗಣಕಯಂತ್ರ ವಿಭಾಗಗಳಿಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಹಾಸನದಲ್ಲಿರುವ ಉನ್ನತ ಪದವಿ ಕೇಂದ್ರದಲ್ಲಿ ಎಂ.ಎಸ್ಸಿ (ಎಲೆಕ್ಟ್ರಾನಿಕ್ಸ್) ಪದವಿಗೆ ಕೊ-ಆರ್ಡಿನೇಟರ್ ಆಗಿ ನೇಮಕಗೊಂಡರು.

ಇವರ ಸಂಶೋಧನ ಜ್ಞಾನದ ೧೦೦ ಸಂಶೋಧಕ ಪ್ರಬಂಧಗಳನ್ನು ಅಂತಾರಾಷ್ಟ್ರೀಯ ಪತ್ರಿಕೆಗಳು ಪ್ರಕಟಿಸಿವೆ. ಅಷ್ಟೇ ಅಲ್ಲದೆ ಇವರು ಎರಡು ವರ್ಷಗಳ ಕಾಲ ಅತಿಥಿ ವಿಜ್ಞಾನಿಯಾಗಿ ಇನ್‌ಸ್ಟಿಟ್ಯೂಟ್ ಆಫ್ ನ್ಯೂಕ್ಲಿಯರ್ ಫಿಸಿಕ್ಸ್, ನ್ಯೂಕ್ಲಿಯರ್ ರಿಸರ್ಚ್ ಸೆಂಟರ್, ಜೂಲಿಚ್, ಜರ್ಮನಿಯಲ್ಲಿ ಕಾರ್ಯ ನಿರ್ವಹಿಸಿದರು. ಎಲೆಕ್ಟ್ರಾನ್ ಸಿಂಕ್ರೊಟ್ರೋನ್ ಕೇಂದ್ರ, ಹಂಬರ್ಗ್, ಜರ್ಮನಿಯಲ್ಲಿ (೧೯೭೮-೧೯೮೧) ಅತಿಥಿ ವಿಜ್ಞಾನಿಯಾಗಿ ಭಾಗವಹಿಸಿದ್ದಾರೆ. ಇವರು ಭಾರತ, ಜರ್ಮನಿ, ನೆದರ್‌ಲ್ಯಾಂಡ್, ಆಸ್ಟ್ರೀಯ ಮತ್ತು ಯುರೋಪಿಯನ್ ರಾಷ್ಟ್ರಗಳಲ್ಲಿ ಸುಮಾರು ೩೦ಕ್ಕಿಂತ ಹೆಚ್ಚು ಸಮ್ಮೇಳನ ಮತ್ತು ವಿಜ್ಞಾನ ಸಮಾರಂಭಗಳಲ್ಲಿ ತಮ್ಮ ಸಂಶೋಧನಾತ್ಮಕ ಭಾಷಣಗಳನ್ನು ನೀಡಿದ್ದಾರೆ.

ಇವರ ಮಾರ್ಗದರ್ಶನದಲ್ಲಿ ಆರು ವಿದ್ಯಾರ್ಥಿಗಳು ಪಿ.ಎಚ್.ಡಿ. ಪದವಿಯನ್ನು ಪಡೆದಿದ್ದಾರೆ. ಇನ್ನೂ ನಾಲ್ಕು ವಿದ್ಯಾರ್ಥಿಗಳು ಇವರ ಮಾರ್ಗದರ್ಶನದಲ್ಲಿ ಪಿ.ಎಚ್.ಡಿ. ಪದವಿ ಮಾಡುತ್ತಿದ್ದಾರೆ. ಸಂಶೋಧನೆಗಳಿಗೆ ಪೂರಕವಾಗಿ ಡಿ.ಎಸ್.ಟಿ., ಡಿಪಾರ್ಟ್‌ಮೆಂಟ್ ಆಫ್ ಆಟೋಮಿಕ್ ಎನರ್ಜಿ ಮತ್ತು ಡಿಪಾರ್ಟ್‌ಮೆಂಟ್ ಆಫ್ ಸ್ಪೇಸ್‌ರವರ ಸಹಯೋಗದಿಂದ ಸುಮಾರು ೮ ಪ್ರಾಜೆಕ್ಟ್‌ಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ್ದಾರೆ.

ಗೋಪಾಲ್ ಅವರ ಕಾರ್ಯಕ್ಷಮತೆ ಗುರುತಿಸಿದ ಸರಕಾರ ೨೮, ಅಕ್ಟೋಬರ್ ೧೯೯೫ರಲ್ಲಿ ಮಂಗಳ ಗಂಗೋತ್ರಿ ವಿಶ್ವವಿದ್ಯಾಲಯಕ್ಕೆ ಉಪಕುಲಪತಿಗಳನ್ನಾಗಿ ವಿದ್ಯುಕ್ತವಾಗಿ ನೇಮಕಮಾಡಿತು. ಇವರನ್ನು ನೇಮಕ ಮಾಡಿದ ಸಮಯದಲ್ಲಿ ಆ ವಿಶ್ವವಿದ್ಯಾಲಯವು ಇನ್ನೂ ಅಂಬೆಗಾಲನ್ನು ಇಟ್ಟು ತೆವಳುತ್ತಿತ್ತು. ಇವರು ಅದನ್ನು ಸವಾಲಾಗಿ ಸ್ವೀಕರಿಸಿ ಐದು ಹೊಸ ಕೋರ್ಸುಗಳನ್ನು ಪ್ರಾರಂಭಿಸಿದರು. ಅವುಗಳಲ್ಲಿ ಎಂ.ಎಸ್ಸಿ (ಪಿಸಿಕಲ್ ಎಜುಕೇಶನ್), ಕಂಪ್ಯೂಟರ್ ಸೈನ್ಸ್ ಮುಖ್ಯವಾದವು. ಇವರು ಅಧಿಕಾರ ಸ್ವೀಕರಿಸಿದ ನಂತರ ಒಂದು ಕೋಟಿಗಿಂತ ಹೆಚ್ಚಿನ ಅನುದಾನ ಈ ವಿಶ್ವವಿದ್ಯಾಲಯಕ್ಕೆ ಹರಿದು ಬಂದಿತು. ಈ ವಿಶ್ವವಿದ್ಯಾಲಯದ ಜೊತೆಗೆ ವಿದೇಶಿ ವಿಶ್ವವಿದ್ಯಾಲಯಗಳು ಜಂಟಿಯಾಗಿ ಕಾರ್ಯನಿರ್ವಹಿಸಲು ಇವರ ಜೊತೆ ಸಹಿ ಹಾಕಿವೆ. ವಿಶ್ವವಿದ್ಯಾಲಯಗಳ ಎಲ್ಲಾ ವಿಷಯಗಳಲ್ಲಿ ತುಂಬ ಆಸಕ್ತಿ ಮತ್ತು ಶ್ರದ್ಧೆವಹಿಸಿ ಅದರ ಬೆಳವಣಿಗೆಗಾಗಿ ದುಡಿಯುತ್ತಿರುವ ಗೋಪಾಲ್‌ರವರಿಂದ ಮುಂಬರುವ ದಿನಗಳಲ್ಲೂ ಅರ್ಥಪೂರ್ಣ ಶೈಕ್ಷಣಿಕ ಸೇವೆ ನಿರೀಕ್ಷಿಸಬಹುದು.

ವಿಧಾನವನ್ನು ಅಳವಡಿಸುವುದರ ಮೂಲಕ ಗ್ರಂಥಾಲಯದಲ್ಲಿರುವ ಯಾವುದೇ ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಅತಿ ಶೀಘ್ರವಾಗಿ ಪಡೆಯಲು ಸಾಧ್ಯವಾಗುತ್ತದೆ.

೨.೨ ಗ್ರಂಥಾಲಯದ ಕೆಲಸದ ವೇಳೆಯನ್ನು ಬೆಳಿಗ್ಗೆ ೮ ಗಂಟೆಯಿಂದ ರಾತ್ರಿ ೧೦ ಗಂಟೆಯವರೆಗೆ ವಿಸ್ತರಿಸಲಾಗಿದೆ.

೨.೩ ವಾರ್ಷಿಕವಾಗಿ ಕೇವಲ ನಾಲ್ಕು ಅಥವಾ ಐದು ರಾಷ್ಟ್ರೀಯ ರಜಾದಿನಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ದಿನಗಳಲ್ಲಿ ಗ್ರಂಥಾಲಯವು ತೆರೆದಿರುವಂತೆ ವ್ಯವಸ್ಥೆ ಮಾಡಲಾಗಿದೆ.

೨.೪ ಮಂಗಳೂರು ವಿಶ್ವವಿದ್ಯಾನಿಲಯದ ಆವರಣದಲ್ಲಿ ಪ್ರಸ್ತುತ ಇರುವ ವಸತಿಗೃಹಗಳ ಸೌಲಭ್ಯದಲ್ಲಿ ಕೊರತೆ ಇರುವುದರಿಂದ ಅದನ್ನು ತುಂಬಲು ಪುರುಷರ ಮತ್ತು ಮಹಿಳೆಯರ ನೂತನ ವಸತಿಗೃಹಗಳ ನಿರ್ಮಾಣ ಕಾರ್ಯವನ್ನು ಆರಂಭಿಸಲಾಗುವುದು. ಅಲ್ಲದೆ ನೂತನ ಅತಿಥಿ ಗೃಹದ ಕಾಮಗಾರಿಯನ್ನು ಕೈಗೊಳ್ಳಲಾಗುವುದು.

೨.೫ ಮಂಗಳೂರು ವಿಶ್ವವಿದ್ಯಾನಿಲಯ ಆವರಣದ ಪರಿಸರ ಸಂರಕ್ಷಣೆಗೆ ವಿಶೇಷ ಗಮನ ನೀಡಲಾಗುವುದು. ಮಂಗಳ ಗಂಗೋತ್ರಿ ಆವರಣದಲ್ಲಿ ನಾನಾ ಜಾತಿಯ ಉಪಯುಕ್ತ ಗಿಡಮರಗಳನ್ನು ನೆಟ್ಟು ಬೆಳಸಿ ವನಸಂಪತ್ತನ್ನು ಹೆಚ್ಚಿಸುವ ಬಗೆಗೆ ಆದ್ಯತೆ ನೀಡಲಾಗುವುದು.

೨.೬ ಪ್ರಸ್ತುತ ಅನುಭವಿಸುತ್ತಿರುವ ನೀರಿನ ಕೊರತೆಯನ್ನು ನೀಗಲು ೬ ಕೊಳವೆ ಬಾವಿಗಳನ್ನು ತೋಡಲು ವ್ಯವಸ್ಥೆ ಮಾಡಲಾಗಿದೆ. ಕೊಳವೆ ಬಾವಿಗಳ ನೀರನ್ನು ಸರಬರಾಜು ಮಾಡಿ ಸಸ್ಯ ಸಂರಕ್ಷಣೆಯನ್ನು ಮಾಡಲಾಗುವುದು.

೨.೭ ಮಲಿನಗೊಂಡ ನೀರನ್ನು ಶುದ್ಧೀಕರಣ ಪ್ರಕ್ರಿಯೆಗೆ ಒಳಪಡಿಸಿ ಪುನಃ ಬಳಸುವ ಕುರಿತಂತೆ ತಾಂತ್ರಿಕ ಕ್ರಮವನ್ನು ಕೈಕೊಳ್ಳಲಾಗುವುದು.

೨.೮ ಪ್ರಾಯೋಗಿಕ ನೆಲೆಯಲ್ಲಿ ಒಂದು ಅತಿಥಿಗೃಹಕ್ಕೆ ಸೌರಶಕ್ತಿ ನಿರ್ಮಾಣದ ತಾಂತ್ರಿಕತೆಯನ್ನು ಅಳವಡಿಸಿ ಈ ತಂತ್ರಜ್ಞಾನದ ಬಗ್ಗೆ ಬಳಕೆದಾರರಿಗೆ ಸರಿಯಾದ ಮಾಹಿತಿ ಒದಗಿಸಲು ಉದ್ದೇಶಿಸಲಾಗಿದೆ.

೨.೯ ವಿಶ್ವವಿದ್ಯಾನಿಲಯದ ಆವರಣದ ಸುತ್ತಲೂ ರಕ್ಷಣಾ ಗೋಡೆಯನ್ನು ಕಟ್ಟಿಸಿ ಆವರಣದೊಳಗಿನ ಸಸ್ಯ ಸಂಪತ್ತನ್ನು ರಕ್ಷಿಸುವ ನಿಟ್ಟಿನಲ್ಲಿ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

೨.೧೦ ಕ್ರೀಡಾ ವಿಭಾಗದ ಅಭಿವೃದ್ಧಿಗೆ ಮಹತ್ವಪೂರ್ಣ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ಶಿಕ್ಷಕರು, ಶಿಕ್ಷಕೇತರರು ಮತ್ತು ವಿದ್ಯಾರ್ಥಿಗಳು ಕ್ರೀಡಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಸರಿಯಾದ ಪ್ರೋತ್ಸಾಹ ಮತ್ತು ಮಾರ್ಗದರ್ಶನವನ್ನು ನೀಡಲಾಗುವುದು. ಕ್ರೀಡಾಪಟುಗಳನ್ನು ಗುರುತಿಸಿ ಸಕಾಲಿಕ ಉತ್ತೇಜನ ನೀಡಿ ಅವರಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಯುವಂತೆ ಮಾಡಲಾಗುವುದು. ಅಖಿಲ ಭಾರತ ಅಂತರ ವಿಶ್ವವಿದ್ಯಾನಿಲಯ ಮಟ್ಟದ ಹಾಗೂ ದಕ್ಷಿಣ ವಲಯ ಅಂತರ ವಿಶ್ವವಿದ್ಯಾನಿಲಯ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಪಾಲ್ಗೊಳ್ಳುವಂತೆ ಉತ್ತೇಜನ ನೀಡಲಾಗುವುದು.

೨.೧೧ ಅಕ್ಟೋಬರ್ ಮತ್ತು ಮೇ ತಿಂಗಳಲ್ಲಿ ಒಂದು ತಿಂಗಳ ಅವಧಿಯ ಯೋಗಾಸನ ತರಬೇತಿ ಶಿಬಿರವನ್ನು ವರ್ಷಕ್ಕೆ ಎರಡು ಬಾರಿ ನಡೆಸಲಾಗುವುದು. ಪುರುಷರು ಮತ್ತು ಮಹಿಳೆಯರಿಗೆ ಪ್ರತ್ಯೇಕವಾಗಿ ಇಂತಹ ಯೋಗಾಸನ ತರಬೇತು ಶಿಬಿರಗಳನ್ನು ವ್ಯವಸ್ಥೆಗೊಳಿಸಲಾಗುವುದು.

ಹೀಗೆ ವಿಶ್ವವಿದ್ಯಾನಿಲಯದ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾದ ಹಲವು ಯೋಜನೆಗಳನ್ನು ಸಕಾಲದಲ್ಲಿ ಆರಂಭಿಸಲಾಗುವುದು. ವಿಶ್ವವಿದ್ಯಾನಿಲಯವು ಭೌತಿಕ ಮತ್ತು ಶೈಕ್ಷಣಿಕ ಪ್ರಗತಿಯ ಜೊತೆಗೆ ಸಾಂಸ್ಕೃತಿಕ ಉನ್ನತಿಯನ್ನೂ ಸಾಧಿಸಬೇಕಾಗಿದೆ. ಇಲ್ಲಿಯ ನಿವಾಸಿಗಳ ಬುದ್ಧಿ ಮತ್ತು ಹೃದಯದ ಸಂಸ್ಕಾರವು ಸಮತೂಕದಲ್ಲಿ ಆಗಬೇಕಾಗಿದೆ. ಮನುಷ್ಯರ ವ್ಯಕ್ತಿತ್ವಕ್ಕೆ ಸಾಂಸ್ಕೃತಿಕ ಮೆರುಗನ್ನು ತರುವ ಕಲೆ, ಸಂಗೀತ, ಯಕ್ಷಗಾನ, ಗಮಕ - ಇಂತಹ ಲಲಿತಕಲೆಗಳ ಅಧ್ಯಯನ, ಅಧ್ಯಾಪನಕ್ಕೆ ನೂತನವಾಗಿ ಕಟ್ಟಿಸುತ್ತಿರುವ ಯಕ್ಷಗಾನ ಮಂದಿರದಲ್ಲಿ ಅವಕಾಶ ಕಲ್ಪಿಸಲಾಗುವುದು. ಲಲಿತಕಲೆಗಳ ಅಧ್ಯಯನವನ್ನು ಪ್ರಾಯೋಗಿಕ ಮತ್ತು ಪ್ರಾತ್ಯಕ್ಷಿಕೆಯ ರೂಪದಲ್ಲಿ ಅಳವಡಿಸಿಕೊಳ್ಳಲಾಗುವುದು. ಪ್ರಸಾರಾಂಗದ ಕಾರ್ಯ ಚಟುವಟಿಕೆಗಳು ಇನ್ನಷ್ಟು ವ್ಯಾಪಕವಾಗಿ ನಡೆಯುವಂತೆ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ವಿಶ್ವವಿದ್ಯಾನಿಲಯದ ಸಂಶೋಧನೆ ಮತ್ತು ಬೋಧನೆಯ ಪ್ರಯೋಜನವು ಜನಸಾಮಾನ್ಯರಿಗೆ ಸಿಗುವಂತೆ ಗ್ರಾಮಾಂತರ ಸಾಹಿತ್ಯ ಪ್ರಸಾರ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಲಾಗುವುದು. ಕನ್ನಡ ವಿಭಾಗದ ಆಶ್ರಯದಲ್ಲಿರುವ ಮಂಗಳೂರು-ಕೊಡಗು ಸಾಂಸ್ಕೃತಿಕ: ಜಾನಪದ ವಸ್ತು ಸಂಗ್ರಹಾಲಯವನ್ನು ಅಭಿವೃದ್ಧಿಪಡಿಸಲಾಗುವುದು. ಇಲ್ಲಿಯ ಪ್ರಾದೇಶಿಕ ಭಾಷೆಗಳಾದ ತುಳು, ಕೊಡಗು, ಕೊಂಕಣಿ-ಇವುಗಳ ಅಭಿವೃದ್ಧಿಗೆ ಪೂರಕವೂ ಪ್ರೇರಕವೂ ಆದ ಸಾಹಿತ್ಯಿಕ ವಾತಾವರಣವನ್ನು ಕಲ್ಪಿಸಲಾಗುವುದು. ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಈಗಾಗಲೇ ಸ್ಥಾಪನೆಯಾಗಿ ಕಾರ್ಯೋನ್ಮುಖವಾಗಿರುವ **ಡಾ.ಶಿವರಾಮ ಕಾರಂತ** ಅಧ್ಯಯನ ಪೀಠದ ಮೂಲಕ ಕಾರಂತರ ಸಾಹಿತ್ಯಿಕ, ಸಾಮಾಜಿಕ ಮತ್ತು ವೈಜ್ಞಾನಿಕ ಕೊಡುಗೆಗಳ ಕುರಿತಂತೆ ಅಧ್ಯಯನ ಮತ್ತು ಪ್ರಚಾರ, ಪ್ರಸಾರ ಪಡಿಸುವ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಲಾಗುವುದು. ಕರಾವಳಿ ವಲಯದ ಪ್ರಬುದ್ಧ ರಂಗಸಂಪ್ರದಾಯಗಳಾದ ಯಕ್ಷಗಾನ ಮತ್ತು ತಾಳಮದ್ದಳೆಯ ಬಗೆಗೂ ವಿಶೇಷ ಗಮನ ಕೊಡಲಾಗುವುದು.

ಒಟ್ಟಿನಲ್ಲಿ ಮಂಗಳೂರು ವಿಶ್ವವಿದ್ಯಾನಿಲಯವನ್ನು ಒಂದು ಆದರ್ಶ ವಿಶ್ವವಿದ್ಯಾನಿಲಯವನ್ನಾಗಿ ರೂಪಿಸಲು ಅಗತ್ಯವಿರುವ ಸಂಬಂಧಪಟ್ಟ ಎಲ್ಲಾ ಯೋಜನೆಗಳನ್ನು ಅತ್ಯಂತ ಶ್ರದ್ಧೆ ಮತ್ತು ನಿಷ್ಠೆಯಿಂದ ಕೈಗೆತ್ತಿಕೊಳ್ಳಲಾಗುವುದು. ●

**ಮುಂದಿನ ಸಂಚಿಕೆಯಲ್ಲಿ**

## ಎಂ.ಬಿ.ಎ.: ಇನ್ನಷ್ಟು ವಿವರ

*ಪ್ರತಿಷ್ಠಿತ ಮ್ಯಾನೇಜ್‌ಮೆಂಟ್ ಕಾಲೇಜುಗಳಲ್ಲಿ ಸ್ಥಳಾವಕಾಶ ಗಿಟ್ಟಿಸಿಕೊಳ್ಳಲು ಯಾವ ತರಹದ ಸಿದ್ಧತೆ ಬೇಕು? ಬೇಕಾಗುವ ಅರ್ಹತೆಗಳೇನು? ಎಲ್ಲೆಲ್ಲಿ ಅವಕಾಶಗಳಿವೆ? ತಗಲುವ ಅಂದಾಜು ವೆಚ್ಚ ಎಷ್ಟು? ಇತ್ಯಾದಿ ವಿವರಗಳನ್ನು ಈ ಸಂಚಿಕೆಯಲ್ಲೇ ನೀಡಬೇಕಿತ್ತು. ಆದರೆ ಲೇಖಕರ ಅನಾರೋಗ್ಯದಿಂದಾಗಿ ಈ ಸಂಚಿಕೆಯಲ್ಲಿ ಎಂ.ಬಿ.ಎ. ವಿವರಗಳನ್ನು ಪ್ರಕಟಿಸಲು ಸಾಧ್ಯವಾಗಲಿಲ್ಲ. ಮುಂದಿನ ಸಂಚಿಕೆಯಲ್ಲಿ ಈ ವಿವರಗಳನ್ನು ನೀಡಲಾಗುವುದು.* – ಸಂ.

## ಅರ್ಜಿ ಆಹ್ವಾನ

ರಾಷ್ಟ್ರೀಯ ಮಿಲಿಟರಿ ಕಾಲೇಜಿನಲ್ಲಿ ೮ನೇ ತರಗತಿಗೆ ಪ್ರವೇಶವನ್ನು ಪಡೆಯಲು ಬೆಂಗಳೂರಿನ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯು ಫೆಬ್ರವರಿ ೨ ಮತ್ತು ೩ರಂದು ಅರ್ಹತಾ ಪರೀಕ್ಷೆಯನ್ನು ನಡೆಸಲಿದೆ.

ಏಳನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದು ೧೯೮೫ರ ಜುಲೈ ೧ರಿಂದ ೮೬ರ ಜನವರಿ ೧ನೇ ತಾರೀಖಿನ ಅವಧಿಯಲ್ಲಿ ಜನಿಸಿದ ಬಾಲಕರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಅರ್ಜಿಯನ್ನು ಒಳಗೊಂಡ ಮಾಹಿತಿ ಪುಸ್ತಕವನ್ನು ಕಮಾಂಡೆಂಟ್, ಆರ್.ಐ.ಎಂ.ಸಿ. ಡೆಹರಾಡೂನ್ ಇವರಿಗೆ ೬೫ ರೂಪಾಯಿಗಳ ಡಿ.ಡಿ.ಯನ್ನು ಸಲ್ಲಿಸುವುದರ ಮೂಲಕ ಪಡೆಯಬಹುದು. ದ್ವಿಪ್ರತಿಯಲ್ಲಿ ಭರ್ತಿ ಮಾಡಿದ ಅರ್ಜಿಯನ್ನು ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಫೀಲ್ಡ್ ಮಾರ್ಷಲ್ ಕಾರಿಯಪ್ಪ ಭವನ, ಬೆಂಗಳೂರು - ೨೬ ಇವರಿಗೆ ಡಿಸೆಂಬರ್ ೧೬ರೊಳಗೆ ಸಲ್ಲಿಸಲು ಕೋರಲಾಗಿದೆ.

# ತಾಳ್ಮೆ - ಮಾನಸಿಕ ಆರೋಗ್ಯದ ವಿಮೆ!




○ 'ಕೃಶಾಂಗ'

## ಹೆಜ್ಜೆ - ೫

**ತಾಳ್ಮೆ 'ಮಾನಸಿಕ ಆರೋಗ್ಯದ ವಿಮೆ' ಎಂದು ಹೇಳಿದ್ದಾರೆ. ಆದನ್ನು ಗಳಿಸಿಕೊಳ್ಳಬೇಕಾದರೆ ನಮ್ಮ ಜೀವನದಲ್ಲಿ ದುಃಖದಾಯಕ ಪ್ರಸಂಗಗಳು ಬರಬೇಕು; ಅವುಗಳನ್ನು ನಾವು ಸಮಾಜ ಬಯಸುವ ಹಾಗೆ ಎದುರಿಸಬೇಕು. ದುಃಖದಾಯಕ ಸಂದರ್ಭ ಗಳನ್ನು ನಾವು ಎದುರಿಸುವಾಗ ಪಾಲಕರ, ಶಿಕ್ಷಕರ ಅಥವಾ ಓರಗೆಯವರ ಸಹಾಯ ಸಿಕ್ಕೇ ಸಿಗುವದೆಂಬ ಭರವಸೆಯಿಲ್ಲ !**

ಹಿಂದಿನ ಹೆಜ್ಜೆಗಳಲ್ಲಿ ಭಾವನೆಗಳ ಬಗೆಗೆ ಏನೆಲ್ಲವನ್ನು ತಿಳಿಯುವದವಶ್ಯವಿತ್ತೋ ಅದನ್ನು ತಿಳಿದ ನಂತರ ಈಗ ಮಹತ್ವದ ಹೆಜ್ಜೆಯನ್ನಿರಿಸೋಣ. ಉತ್ತಮ, ಜನಪ್ರಿಯ ಸಮಾಜಜೀವಿಯಾಗಿ ಬಾಳಲು ಅವಶ್ಯವಾದ ವ್ಯಕ್ತಿತ್ವ ರೂಪಿಸಿಕೊಳ್ಳಲು ಪ್ರಯತ್ನ ಮಾಡುವಾಗ ಭಾವನೆಗಳ ಕಡೆಗೆ ಏಕೆ ಹಾಗೂ ಎಷ್ಟು ಗಮನಕೊಡಬೇಕು ಎಂಬುದರತ್ತ ಈಗ ಲಕ್ಷ್ಯ ಹರಿಸುವಾ.

ನಮ್ಮ ಆರೋಗ್ಯ, ಸುಖ, ವೃತ್ತಿ, ಕಾರ್ಯಕ್ಷಮತೆಗಳ ಮೇಲೆ ಭಾವನೆಗಳು ಅಪಾರವಾಗಿ ಪರಿಣಾಮ ಬೀರುತ್ತವೆ. ಆದುದರಿಂದ ಅವುಗಳನ್ನು ನಿಯಂತ್ರಣದಲ್ಲಿ, ಅಧೀನದಲ್ಲಿರಿಸುವ ಮೂಲಕ ಜೀವನದ ಸುಖ-ಸಮೃದ್ಧಿಗಳಿಗಾಗಿ ಅವುಗಳನ್ನು ದುಡಿಸಿಕೊಳ್ಳಬೇಕು. ನಮ್ಮ ನಡೆನುಡಿಗಳಲ್ಲಿ ಪರರನ್ನು ಆಕರ್ಷಿಸುವ, ಉತ್ತೇಜಿಸುವ, ಸ್ಫೂರ್ತಿಗೊಳಿಸುವ ಉತ್ಸಾಹ, ಧೈರ್ಯ, ಸದಾಶಯ, ಪ್ರೇಮ, ಸಹಾನುಭೂತಿ ಮುಂತಾದ ಭಾವನೆಗಳು ವ್ಯಕ್ತವಾಗಬೇಕು. ಚಿಂತೆ ಹೊತ್ತ ಮುಖದ, ಮತ್ಸರ ಸೂಸುವ ಧ್ವನಿಯ, ದ್ವೇಷಪೂರಿತ ಹಾವಭಾವದ ವ್ಯಕ್ತಿಯೊಡನೆ ಸ್ಪಂದಿಸಲು ಯಾರೂ ಇಷ್ಟ ಪಡುವದಿಲ್ಲ. ಭಾವನೆಗಳು ಹಾಗೂ ಅವುಗಳ ಪರಿಣಾಮಗಳ ಬಗೆಗೆ ತಿಳಿದ ವ್ಯಕ್ತಿ ತನ್ನ ಮತ್ತು ಇತರರ ಭಾವನೆಗಳನ್ನು ನಿಯಂತ್ರಿಸಬಲ್ಲ.

ಎರಡು ರೀತಿಗಳಲ್ಲಿ ಭಾವನೆಗಳು ವ್ಯಕ್ತಿತ್ವವನ್ನು ಪ್ರಭಾವಿತಗೊಳಿಸುತ್ತವೆ. ಹೆರವರ ದೃಷ್ಟಿಯಲ್ಲಿ ನಾವು ಹೇಗೆ ಎಂಬುದು ನಮ್ಮ ಭಾವನಾತ್ಮಕ ವರ್ತನೆಯನ್ನು ಅವರು ಅರ್ಥೈಸಿಕೊಳ್ಳುವದನ್ನವಲಂಬಿಸಿರುತ್ತದೆ. ಇತರರೊಡನೆ ನಾವು ಜೋಡಿಸುವ ಭಾವನಾತ್ಮಕ ಸಂಬಂಧ ಎರಡನೆಯದು.

ಜನರು ಋಣಾತ್ಮಕ ಹಾಗೂ ದುಃಖಭರಿತ ಭಾವನೆಗಳನ್ನು ನಿಯಂತ್ರಿಸಬಲ್ಲವನ ಸಹವಾಸ ಬಯಸುತ್ತಾರೆ. ಅವರಿಗೆ ಸುಖಿಗಳ, ಹಸನ್ಮುಖಿಗಳ ಒಡನಾಟಬೇಕು. ತನ್ನ ದುರ್ದೈವವನ್ನು ಹಳಿಯುವವ, ಇತರರನ್ನು ವ್ಯಂಗ್ಯ ಬಾಣಗಳಿಂದ ಘಾಸಿಗೊಳಿಸುವವ ಇಂಥವರ ಸಮ್ಮುಖದಲ್ಲಿ ಅವರು ಅಸುಖಿಗಳಾಗುತ್ತಾರೆ. ಆದುದರಿಂದಲೇ ಹೇಳಿದೆ : 'ನೀನು ನಕ್ಕರೆ ನಗುವದು ಜಗ; ಅತ್ತರೆ ನೀನು ಏಕಾಂಗಿ' ಎಂದು.

ಆಗಾಗ ಭಾವಾವೇಶಕ್ಕೊಳಗಾಗುವದರಷ್ಟೆ ಕೆಟ್ಟುದು ಭಾವನೆಗಳನ್ನು ಹತ್ತಿಕ್ಕುವದು. ಯಾವಾಗಲೂ ಮಂಕಾಗಿರುವವ, ಉಗುರು ಕಚ್ಚುವವ, ಎಡೆಬಿಡದೆ ಕಣ್ಣು ಮಿಳುಕಿಸುವವ ಭಾವನೆಗಳನ್ನು ಹತ್ತಿಕ್ಕಿರುವ ಸಾಧ್ಯತೆ ಬಹಳವಾಗಿದೆ.

ನಮ್ಮ ಹಿತಾಸಕ್ತಿಗಳಂಥವನ್ನೇ ಹೊಂದಿದ ಇತರರೊಡನೆಯ ಸಂಬಂಧದಿಂದ ನಾವು ನಮ್ಮ ಜೀವನದ ಆಶೋತ್ತರಗಳನ್ನು ಪೂರೈಸಿಕೊಳ್ಳುತ್ತೇವೆ. ಅದಕ್ಕಾಗಿ ನಾವು ಇತರರೊಡನೆ ಭಾವನಾತ್ಮಕ ಸಂಬಂಧಗಳನ್ನೂ ಬೆಸೆಯಬೇಕಾಗುತ್ತದೆ. ಈ ಬೆಸುಗೆಯಲ್ಲಿ ಯಶಸ್ವಿಯಾಗುವಷ್ಟರ ಮಟ್ಟಿಗೆ ನಮ್ಮ ವ್ಯಕ್ತಿತ್ವದ ಮೇಲೆ ಭಾವನೆಗಳು ಪರಿಣಾಮ ಬೀರುತ್ತವೆ.

ನಾನು ದೂರೀಕರಿಸಲ್ಪಟ್ಟವ ಎಂದು ತಿಳಿಯುವವ ತನಗೆ ತಾನೇ ಹೊರೆಯಾಗಿ, ಒಂಟಿಯಾಗಿ, ಬೇರೆಯವರೊಡನೆ ಪ್ರೀತಿ, ವಾತ್ಸಲ್ಯಗಳನ್ನು ಹಂಚಿಕೊಳ್ಳಲು ಅಸಮರ್ಥನಾಗುತ್ತಾನೆ. ಈ ಸ್ಥಿತಿ ಬಾಲ್ಯ ಅಥವಾ ವೃದ್ಧಾಪ್ಯದಲ್ಲುಂಟಾದರೆ ಆತನ ಬಗೆಗೆ ನಾವು ಕನಿಕರಪಡಲೇಬೇಕು. ಏಕೆಂದರೆ ಈ ಎರಡೂ ಸ್ಥಿತಿಗಳಲ್ಲಿ ನಮ್ಮ ಸಾಮಾಜಿಕ ಚಟುವಟಿಕೆಗಳು ಬಹಳೇ ಸೀಮಿತವಿರುತ್ತವೆ. ಪ್ರೀತಿ ಹಂಚುವಲ್ಲಿ, ಭಾವನಾತ್ಮಕವಾಗಿ ಬೆರೆಯುವಲ್ಲಿ ನಾವು ತೋರುವ ಜಿಪುಣತನ ನಮ್ಮನ್ನು ಇತರರಿಂದ ಇನ್ನೂ ದೂರ ಮಾಡುತ್ತದೆ. ಜನಪ್ರಿಯತೆಯ ಮೊದಲ ಮೆಟ್ಟಿಲು 'ಸ್ನೇಹಪರತೆ', 'ಭಾವನಾತ್ಮಕ ಬೆಸುಗೆ' ಎಂಬುದರತ್ತ ನಾವು ಗಮನವಿಡಬೇಕು.

ಭಾವನೆಗಳ ಮಹಾಪೂರ, ಸಂಪೂರ್ಣ ಅಭಾವ; ಕೇವಲ ಸಂತೋಷಕರ ಅಥವಾ ಕೇವಲ ಅಸಂತೋಷಕರ ಭಾವನೆಗಳು; ಇದ್ದ ಭಾವನೆಗಳನ್ನು ಹತ್ತಿಕ್ಕುವುದು ಅಥವಾ ನಮ್ಮಲ್ಲಿಯ ಭಾವನೆಗಳ ಅಸಮತೋಲ ವ್ಯಕ್ತಿತ್ವಕ್ಕೆ ಕುಂದುಂಟುಮಾಡುತ್ತದೆ. ಆದುದರಿಂದ ಬಾಲ್ಯದಿಂದಲೇ ಭಾವನೆಗಳನ್ನು ಸಮತೋಲದಲ್ಲಿರಿಸುವದರ ಬಗೆಗೆ ಪಾಲಕರು, ಶಿಕ್ಷಕರು, ಹಿರಿಯರು ತರಬೇತಿ ನೀಡಬೇಕು.

# ವ್ಯಕ್ತಿತ್ವ ವಿಕಾಸ

ನಾವೆಲ್ಲ ಒಂದೊಮ್ಮೆ ಮಕ್ಕಳಾಗಿದ್ದೆವು, ಅಲ್ಲವೇ? ಆಗ ನಮ್ಮ ಪಾಲಕರು ನೀಡಿದ ತರಬೇತಿ ಎಂಥದು? ನೆನಪಿಸಿಕೊಳ್ಳಿ, ನಿಮ್ಮ ಸದ್ಯದ ವ್ಯಕ್ತಿತ್ವಕ್ಕೆ ಉತ್ತರ ನಿಮಗೇ ದೊರಕುತ್ತದೆ. ಚಲನಚಿತ್ರಗಳಲ್ಲಿ ನಾವು ನೋಡುತ್ತೇವೆ. ಯಾವುದೇ ಅಹಿತಕರ ಭಾವನೆಯಿಂದ ಬಳಲದಂತೆ ಮಗುವನ್ನು ಅಲ್ಲಿ ಬೆಳೆಸುವದನ್ನು ನೋಡುತ್ತೇವೆ ಅಥವಾ ಸಾಮಾಜಿಕವಾಗಿ ಗ್ರಾಹ್ಯವಾದ ನಿಯಮಗಳನ್ನು ಧಿಕ್ಕರಿಸಿಯೂ ಮಗುವೊಂದು ಬೆಳೆಯುವದನ್ನು ನೋಡುತ್ತೇವೆ. ಮೂರು ಗಂಟೆಗಳಲ್ಲಿಯೇ ಕಥೆಯ ಅಂತ್ಯ ಅಲ್ಲಿ ಆಗಬೇಕಾಗಿರುವದರಿಂದ ಇಂಥ ಮಕ್ಕಳೂ ಯಶಸ್ವಿಯಾಗುತ್ತಾರೆ! ಆದರೆ ನೈಜ ಜೀವನದಲ್ಲಿ ಹೀಗೆ ಬೆಳೆದ ಮಕ್ಕಳು ಜೀವನದ ಬವಣೆಗಳನ್ನು ತಾಳಲಾರದೆ ತಮ್ಮ ಜೀವನ, ಜಗಗಳಿಗೆ ರಾಮ್, ರಾಮ್ ಹೇಳಬೇಕಾಗುತ್ತದೆ. ಹಾಗಾದರೆ ನಮಗೆ ಅತಿ ಮುಖ್ಯ ಬೇಕಾದುದು ತಾಳ್ಮೆ.

ತಾಳ್ಮೆ 'ಮಾನಸಿಕ ಆರೋಗ್ಯದ ವಿಮೆ' ಎಂದು ಹೇಳಿದ್ದಾರೆ. ಅದನ್ನು ಗಳಿಸಿಕೊಳ್ಳಬೇಕಾದರೆ ನಮ್ಮ ಜೀವನದಲ್ಲಿ ದುಃಖದಾಯಕ ಪ್ರಸಂಗಗಳು ಬರಬೇಕು; ಅವುಗಳನ್ನು ನಾವು ಸಮಾಜ ಬಯಸುವ ಹಾಗೆ ಎದುರಿಸಬೇಕು. ದುಃಖದಾಯಕ ಸಂದರ್ಭಗಳನ್ನು ನಾವು ಎದುರಿಸುವಾಗ ಪಾಲಕರ, ಶಿಕ್ಷಕರ ಅಥವಾ ಓರಗೆಯವರ ಸಹಾಯ ಸಿಕ್ಕೇ ಸಿಗುವದೆಂಬ ಭರವಸೆಯಿಲ್ಲ.

ಮಕ್ಕಳನ್ನು ತರಬೇತಿಗೊಳಿಸುವವರದು ದೊಡ್ಡ ಹೊಣೆ. ಅವರೇ ಮಕ್ಕಳಲ್ಲಿ ಭಾವನೆಗಳ ಸಮತೋಲ ಕಲ್ಪಿಸುವವರು. ಇದು ನಾಲ್ಕು ವಿಧದಲ್ಲಿ ಆಗಬಹುದು. ಮಕ್ಕಳು ಒಳ್ಳೆಯ ಹಾಗೂ ಕೆಡುಕಾದ ಪ್ರಸಂಗಗಳಿಗೆ ಹೆದರದಂತೆ ನೋಡಿಕೊಳ್ಳುವದು. ಚಳಿಯಲ್ಲಿ ಅಡ್ಡಾಡಿದವನಿಗೆ ಮಾತ್ರ ಬೆಚ್ಚಗಿನ ಕೋಣೆಯ ಸುಖ ತಿಳಿಯುತ್ತದೆ. ಒಬ್ಬ ಹಸಿದವ ಮಾತ್ರ ಇನ್ನೋರ್ವ ಹಸಿದವನನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ. ಹಾಗೆಯೇ ಪರರ ಬಗೆಗೆ ಸಹಾನುಭೂತಿ ವ್ಯಕ್ತಪಡಿಸುವದು ನಾವು ಈಗಾಗಲೇ ಅಂಥ ಪ್ರಸಂಗಗಳನ್ನು ಎದುರಿಸಿದ್ದರೆ ಮಾತ್ರ ಸಾಧ್ಯ. ಎರಡನೆಯದಾಗಿ ನಮ್ಮ ಭಾವನೆಗಳನ್ನು ಅವು ಅಸಂತೋಷಕರವಾಗಿದ್ದರಂತೂ ಇದರ ಮಹತ್ವ ಹೆಚ್ಚು-ನಮಗೆ ಇಷ್ಟ ಬಂದ ರೀತಿಯಲ್ಲಿ ಸಮಾಜದಲ್ಲಿ ವ್ಯಕ್ತಪಡಿಸುವದು ಸಲ್ಲ ಎಂಬ ತರಬೇತಿ ನೀಡುವದು. ಜೀವನವು ಬೇವು-ಬೆಲ್ಲಗಳ ಮಿಶ್ರಣ ಎಂದು ಮನವರಿಕೆ ಮಾಡಿಕೊಡುತ್ತಾ ದುಃಖಿತರನ್ನಾಗಿ ಮಾಡುವ ಪ್ರಸಂಗಗಳನ್ನು ಅವರು ಧೈರ್ಯ-ಸ್ಥೈರ್ಯಗಳಿಂದ ಎದುರಿಸುವಂತೆ ಮಕ್ಕಳನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಸಿದ್ಧಗೊಳಿಸುವದು, ಮೂರನೆಯದು. ಮಗುವಿಗೆ ಓದು ಬೇಡ; ಊಟ ಬೇಡ; ಆಟ ಮಾತ್ರ ಬೇಕು, ಹೌದೇ? ಆಟ ಆಡುತ್ತಿರುವ ಮಗುವಿಗೆ ಹತ್ತೇ ನಿಮಿಷಗಳಲ್ಲಿ ಊಟ ಬಡಿಸಲಾಗುತ್ತದೆಯೆಂದು ಮೊದಲೇ ತಿಳಿಸಿದ್ದರೆ ಅದನ್ನು ಊಟಕ್ಕೆ ಕರೆತರುವಾಗ ಅದು ರಂಪಮಾಡುವುದಿಲ್ಲ! ಕೊನೆಯದಾಗಿ, ಅನಿವಾರ್ಯವಾದ, ಅಸಂತೋಷ ತರುವ ಪ್ರಸಂಗವನ್ನು ಸಾಧ್ಯವಾದಷ್ಟು ಬೇಗ ಸಂತೋಷ ತರುವ ಘಟನೆಯಾಗಿ ಬದಲಾಯಿಸುವುದು. ಕುಟುಂಬದಲ್ಲಿ ಕೆಲ ತಿಂಗಳ ಹಿಂದೆ ಸೇರ್ಪಡೆಯಾದ ತಮ್ಮ ಅಥವಾ ತಂಗಿ ತನ್ನ ಸಂತೋಷಕ್ಕೆ ಅಡ್ಡಿಯಾಗಿದ್ದಾನೆ/ಳೆ ಎಂದು ಖಚಿತಪಡಿಸಿಕೊಂಡಿರುವ ಇನ್ನೊಂದು ಮಗು ರೋಷ, ಅಸಮಾಧಾನದಿಂದ ಕುದಿಯುತ್ತಿರುತ್ತದೆ. ಅಸುರಕ್ಷತೆಯ ಭಾವನೆ ಅದನ್ನು ಸುತ್ತಿಕೊಂಡಿದೆ. ಆದರೆ ಇದು ಅನಿವಾರ್ಯ. ಜಾಣ ತಾಯಿ ಚಿಕ್ಕ ಮಗು ಮಲಗಿರುವಾಗಲಾದರೂ ಈ ಮಗುವಿನೊಂದಿಗೆ ಆಟವಾಡಿದರೆ, ಲಲ್ಲೆಗರೆದರೆ ಅದರ ಸಿಟ್ಟಿನ, ದ್ವೇಷದ ಭಾವನೆ ಅಳಿಸಿ ತಮ್ಮನಲ್ಲಿ ಪ್ರೀತಿ, ವಿಶ್ವಾಸ ಮೂಡುತ್ತದೆ!



ನಮ್ಮಲ್ಲಿಯ ಭಾವನೆಗಳು ಎಷ್ಟೇ ಸಮತೋಲನದಲ್ಲಿದ್ದರೂ ಸಹ ಅವುಗಳನ್ನು ಹತೋಟಿ ಅಥವಾ ನಿಯಂತ್ರಣಕ್ಕೊಳಪಡಿಸುವದು ನಮಗೆ ಸಾಧಿಸದಿದ್ದರೆ ನಮ್ಮ ವ್ಯಕ್ತಿತ್ವವು ದೋಷಪೂರ್ಣವಾಗುವದು ಖಚಿತ. ಆದರೆ ಭಾವನೆಗಳ ಹತೋಟಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವದವಶ್ಯ. ಭಾವನೆಗಳ ನಿಯಂತ್ರಣವೆಂದರೆ ಅವುಗಳನ್ನು ಸಂಪೂರ್ಣವಾಗಿ ಅಳಿಸಿ ಹಾಕುವದಾಗಲೀ ಅಥವಾ ಹತ್ತಿಕ್ಕಿ ಬಿಡುವದಾಗಲೀ ಅಲ್ಲ. ಭಾವನೆಗಳ ಅಭಿವ್ಯಕ್ತಿ ಸೂಕ್ತವಾಗಿ ನಿಯಂತ್ರಿತವಾಗಿದೆಯೇ ಹೇಗೆ ಎಂದು ತಿಳಿಯಲು ಮೂರು ಒರೆಗಲ್ಲುಗಳಿವೆ. ಮೊದಲನೆಯದು, ಕನಿಷ್ಠ ದೈಹಿಕ ತೊಂದರೆಯುಂಟಾಗಬೇಕು; ಎರಡನೆಯದು, ಆ ವ್ಯಕ್ತಿಗೆ ಗರಿಷ್ಠ ಮಾನಸಿಕ ತೃಪ್ತಿಯುಂಟಾಗಬೇಕು; ಮೂರನೆಯದು, ನಮ್ಮ ಅಭಿವ್ಯಕ್ತಿ ನಾವು ಎದುರಿಸುವ ಸಮಾಜವು ಅಂಗೀಕರಿಸುವ ನಿಯಮಗಳಿಗನುಗುಣವಾದುದಾಗಿರಬೇಕು. ಯಾವುದೋ ಸಂದರ್ಭ ಭಾವೋದ್ದೀಪನಕ್ಕೆಡೆಮಾಡಿತೆನ್ನಿ. ಅದನ್ನು ಮೊದಲು ತಾರ್ಕಿಕವಾಗಿ, ವೈಚಾರಿಕವಾಗಿ ಎದುರಿಸಲು ಸಿದ್ಧರಾಗಿರಬೇಕು.

ಪ್ರತಿಯೊಂದು ಭಾವನೆಯ ಉಗಮ ಅದರ ಹಿಂದಿರುವ ಮಾನಸಿಕ ಸ್ಥಿತಿಯನ್ನು ಅವಲಂಬಿಸಿರುತ್ತದೆ. ನಿಮ್ಮ ಬಗೆಗೆ ಯಾವಳೋ ಅತ್ಯಂತ ಲಘುವಾಗಿ ಮಾತನಾಡಿದಳೆನ್ನಿ. ಅದನ್ನು ಮುಖಭಂಗವೆಂದೇ ಏಕೆ ಭಾವಿಸಬೇಕು? ಅದು ಬಾಲಿಶವಾದ ನಿಮ್ಮ ಟೀಕಾಕಾರಳ ತಿಳಿಗೇಡಿತನದ ಅಸಹ್ಯ ಸಾರ್ವಜನಿಕ ಪ್ರದರ್ಶನವೇಕಾಗಿರಬಾರದು? ಹೀಗೆ ನೀವು ವಿಚಾರ ಮಾಡಬಲ್ಲಿರಾದರೆ ನಿಮ್ಮಿಬ್ಬರನ್ನೂ ತಕ್ಕಡಿಯ ಒಂದೇ ತಟ್ಟೆಯಲ್ಲಿ ತೂಗುವದು ಸಾಧ್ಯವಿಲ್ಲ. ನಿಮ್ಮ ವ್ಯಕ್ತಿತ್ವ ಭಾವನಾತ್ಮಕವಾಗಿ ಎತ್ತರದಲ್ಲಿದೆ ಎಂದು ಇದರ ಅರ್ಥ. ಈಗ ಇನ್ನೊಂದು ಉದಾಹರಣೆ. ಯಾವನೋ ಒಬ್ಬ 'ಅ' ನಿಮಗೆ ಕೇಡು ಬಗೆಯುತ್ತಾನೆ. ಆತನ ಮುಖ್ಯ ಉದ್ದೇಶ ನಿಮ್ಮ ಪ್ರಗತಿಯನ್ನು ನಿಶ್ಚಲಗೊಳಿಸುವುದು. ಆದುದರಿಂದ ಮೊದಲು ಆ ವ್ಯಕ್ತಿಯ ಉದ್ದೇಶಗಳ ಬಗೆಗೆ ಚಿಂತಿಸಬೇಕು. ನೀವು ಕೋಪದ ಪ್ರತಿಕ್ರಿಯೆ ತೋರುವದು ಸಹಜವಾದರೂ ಸಹ ಸಂಬಂಧಿತನ ಉದ್ದೇಶ ನಿಮಗೆ ಸ್ಪಷ್ಟಗೊಂಡಾಗಲೂ ನೀವು ಕೋಪಿಷ್ಠರಾದರೆ

# ವ್ಯಕ್ತಿತ್ವ ವಿಕಾಸ

ನಿಮ್ಮ ವ್ಯಕ್ತಿತ್ವ ಮಲಿನವಾಗಿ ಆತನ ಉದ್ದೇಶ ಈಡೇರಿತು! ಇದನ್ನು ತಿಳಿದು ನಿಮ್ಮ ಕೋಪವನ್ನು ಆಗ ಸಂಪೂರ್ಣ ಮೆಟ್ಟಿ ನಿಂತರೆ ನೀವು ಯಶಸ್ವಿ; ಆತ ನಿಷ್ಫಲ. ಅಷ್ಟೇ ಅಲ್ಲ, ಇಂಥ ವಿಘ್ನ ಸಂತೋಷಿಗಳನ್ನು ಮಾನಸಿಕ ಅಸ್ವಸ್ಥರಾಗಿ ಪರಿಗಣಿಸಿ ಅವರ ಬಗೆಗೆ ಸಹಾನುಭೂತಿ ಪ್ರಕಟಪಡಿಸುವದು ನಿಮಗೆ ಸಾಧ್ಯವಾದರಂತೂ ಇನ್ನೂ ಚೆನ್ನ.

ಬುದ್ಧಿವಂತರಾದವರೂ ಸಹ ಭಾವಾವೇಶ ಕ್ಕೊಳಗಾಗಿ ಆಗೊಮ್ಮೆ ಈಗೊಮ್ಮೆ ಕೋಪ ಪ್ರದರ್ಶನ ಮಾಡುತ್ತಾರೆ. ಅದರ ಅಂಗವಾಗಿ ಗೋಡೆಗೆ ತಲೆಚಚ್ಚಿಕೊಳ್ಳುವದೋ, ಸಾಸರ್ ಗಳನ್ನು ಬಿಸಾಡಿ ಚೂರು ಚೂರು ಮಾಡು ವದೋ, ಸಾಕಿದ ನಾಯಿಯನ್ನು ಹಿಂಸಿಸು ವದೋ, ಅಥವಾ ಚಿಕ್ಕವರ ಮೇಲೆ ತಮ್ಮ ಕೋಪವನ್ನು ಹರಿಯಬಿಡುವದೋ ಮಾಡ ಬಹುದು. ಕ್ಷಣಕಾಲ ನಿರುದ್ಯೋಗಿಯಾದ ಬುದ್ಧಿ, ಮನೆಯ ಎಷ್ಟು ಜನಕ್ಕೆ ಕೆಲಸ ಕೊಟ್ಟಿತು! ಯೋಚಿಸಿ. ತಂದೆ ಹೀಗೆಲ್ಲ ಕೋಪದಾಟ ಆಡಿದಾಗ ಮಕ್ಕಳೆದುರು, ಶಾಂತತೆಯ ಪ್ರತೀಕವಾಗಿರುವ ತಾಯಿ ಗಂಡನ ಪಕ್ಷ ವಹಿಸಲಾರದೇ ಇಬ್ಬರೂ ಹೇಗೆ ನಗೆಪಾಟಲಿ ಗೀಡಾಗಬಹುದು ಎಂಬುದನ್ನೂ ಊಹಿಸಿದರೆ ತಿಳಿದೀತು. ಬುದ್ಧಿ, ಭಾವನೆಗಳ ಸಮ ತೋಲನವನ್ನು ಕಾಯ್ದುಕೊಳ್ಳುವದು; ನಮ್ಮ ದೇಹ, ಧ್ವನಿ, ಭಾಷೆ ಇವುಗಳನ್ನು ನಿಯಂತ್ರಣ ದಲ್ಲಿಟ್ಟುಕೊಳ್ಳುವದು ನಮಗೆ ಸಾಧ್ಯವಾದರೆ ನಮ್ಮ ವ್ಯಕ್ತಿತ್ವ ಸರಿಯಾದ ದಿಕ್ಕಿನಲ್ಲಿ ರೂಪಿತ ಗೊಳ್ಳುತ್ತಿದೆಯೆಂದು ಭಾವಿಸಲಡ್ಡಿಯಿಲ್ಲ.

ನಾವು ಎಷ್ಟೇ ಪ್ರಯತ್ನಿಸಿದರೂ, ನಾವು ಮಾನವರಾದುದರಿಂದ ನಮ್ಮ ದೌರ್ಬಲ್ಯ ಗಳಿಗನುಗುಣವಾಗಿ ಅಸಂತೋಷಜನಕ ಭಾವನೆಗಳನ್ನು ಅನುಭವಿಸದೆ ಇರಲಾರೆವು. ಆದುದರಿಂದ ಭಾವನೆಗಳ ನಿಯಂತ್ರಣ ಅಭ್ಯಸಿಸಿದ ನಂತರ ಇನ್ನೊಂದು ಪರಿಹಾರದತ್ತ ಗಮನಿಸಿ ಈ ಪಯಣ ನಿಲ್ಲಿಸುವಾ. ಅದು ಕೆಲ ಪ್ರಮುಖ ಭಾವನೆಗಳನ್ನು ಗೆಲ್ಲುವದು ಹೇಗೆ ಎಂಬುದಾಗಿದೆ. ಇಲ್ಲಿ ನಾವು ಚಿಂತೆ, ಭಯ, ದುಃಖಗಳನ್ನು ಗೆಲ್ಲುವದು ಹೇಗೆ ಎಂದು ಕಂಡುಕೊಳ್ಳಲು ಪ್ರಯತ್ನಿಸೋಣ.

ಮೃತನನ್ನು ಚಿತೆ ಸುಟ್ಟರೆ, ಜೀವಿತನನ್ನು ಚಿಂತೆ ಸುಡುತ್ತದೆ. ಆದರೆ ಕೇವಲ ಚಿಂತಿಸು ವದರಿಂದ ಪಾರಾಗಲು ಸಾಧ್ಯವಿಲ್ಲ. ಹಲವು ಸಲ ಚಿಂತೆ, ನಿರಾಶೆಗಳು ಸೊಳ್ಳೆಗಳಂತೆ ನಮ್ಮನ್ನು ಮುತ್ತುತ್ತವೆ. ನಮ್ಮ ಶಕ್ತಿ, ಆರೋಗ್ಯಗಳನ್ನು ಹಾಳುಗೆಡುವದರ ಮೂಲಕ ನಮ್ಮ ವ್ಯಕ್ತಿತ್ವವನ್ನೇ ಅವು ಬಲಿತೆಗೆದುಕೊಳ್ಳುತ್ತವೆ. ಚಿಂತೆಯಿಂದ ಪಾರಾಗಲು ಇರುವ ರಾಜಮಾರ್ಗ ಯಾವ ದಾದರೊಂದು ದೀರ್ಘಕಾಲೀನ ಚಟುವಟಿಕೆ ಯಲ್ಲಿ ನಿಮ್ಮನ್ನು ತೊಡಗಿಸಿಕೊಳ್ಳಿ. ಆದರೆ ಆ ಚಟುವಟಿಕೆ ನಿಮ್ಮ ಮನಸ್ಸಿಗೆ ತುಂಬ ಖುಷಿ ಕೊಡುವದಾಗಿರಬೇಕು. ಆಗ ತಂತಾನೆ ನಿಮ್ಮ ಮಾನಸಿಕ ಸ್ಥಿತಿ ಬದಲಾಗಿ ಚಿಂತೆ ದೂರವಾಗು ವದು. 'ನೀನು ಚಿಂತಿಸದಿರು, ತಂಗಿ' ಎಂಬ ಉಪದೇಶವನ್ನು ಎಷ್ಟು ಬಾರಿ ಕೊಟ್ಟರೂ, ಕೇಳಿದರೂ ಚಿಂತೆ ದೂರವಾಗದು. ಶಾಶ್ವತ ವಾಗಲ್ಲದಿದ್ದರೂ, ಓದು ಮತ್ತು ಮನರಂಜನೆ ಚಿಂತೆಯನ್ನು ಹಗುರಗೊಳಿಸುವ ಸಾಧನೆ ಗಳಾಗಿವೆ.

ಭಯವೂ ಸಹ ದೋಷಪೂರ್ಣ ಅಥವಾ



ಅಪೂರ್ಣ ವಿಚಾರಶಕ್ತಿಯ ದ್ಯೋತಕವಾಗಿದೆ. ತಂದೆ ಸಮುದ್ರದಲ್ಲಿ ತೀರಿಹೋದದ್ದರಿಂದ ಮಗ ಸ್ನಾನ ಮಾಡುವದನ್ನೇ ಬಿಟ್ಟರೆ? ಹಾಗಾದರೆ ನಿದ್ರೆಯಲ್ಲಿ ತೀರಿಹೋದವನ ಮೊಮ್ಮಗ ನಿದ್ರಿಸಲೇ ಬಾರದಾಯಿತು! ಒಂದಕ್ಕೊಂದು ಸಂಬಂಧಿಸದೆ ಇದ್ದ ಅನುಭವ ಗಳು ಭಯ ನಿರ್ಮಿಸುತ್ತವೆ. ಗಾಳಿ ಬೀಸಿತು; ಕಿಟಕಿಯ ಗಾಜು ಸಿಡಿದು ನಿಮ್ಮ ಕೈಗೆ ಗಾಯ ವಾಯಿತು. ದೋಷಪೂರ್ಣ ಚಿಂತನೆ ಗಾಳಿಗೆ ಹೆದರುವಂತೆ ಮಾಡಿತು. ಸರಿಯಾದ ತಿಳಿವಳಿಕೆ ಭಯದ ಹಗೆ! ವಿಚಾರಶಕ್ತಿಯ ಹರಿತ ಗೊಳ್ಳುವಿಕೆ, ತರ್ಕ ಮಾಡುವ ಕಲೆ ಬೆಳೆಯಿಸಿ ಕೊಳ್ಳುವಿಕೆ, ಅಂಥ ವಿಶ್ವಾಸದಿಂದ ಅತಿ ದೂರ ವಿರುವ ಮೂಲಕ ಭಯ ಮತ್ತು ನಿಮ್ಮ ನಡುವೆ ಶಾಶ್ವತ ಗೋಡೆ ಕಟ್ಟಿ.

ದುಃಖಿತ ವ್ಯಕ್ತಿ ಇತರರಲ್ಲಿ ವಿಶ್ವಾಸ ಮೂಡಿಸಲಾರ. ಆತನನ್ನು ಯಾರೂ ಶ್ಲಾಘಿ ಸರು. ಏಕೆಂದರೆ ಆತನಲ್ಲಿ ಆಕರ್ಷಣೆ, ಉತ್ಸಾಹ, ಧೈರ್ಯ, ಚಾಕಚಾಕ್ಯತೆಗಳು ಬತ್ತಿ ಹೋಗಿವೆ. ಆತನ ಶಕ್ತಿಯೂ ಕುಂದಿದೆ. ಎರಡು ವಿಧದಿಂದ ದುಃಖವನ್ನು ಜಯಿಸಬಹುದು. ಯಾವ ವಿಘಟನೆಯಿಂದ ನಿಮ್ಮ ಮನ ದುಃಖಿತವಾಗಿದೆಯೋ ಅದನ್ನು ಯಾರೊಂದಿಗೂ ಪದೇ ಪದೇ ಚರ್ಚಿಸ ದಿರುವದು, ಒಂದು. ಆತನ ಹಿತೈಷಿಗಳು ಕೂಡ ಆ ವಿಷಯವನ್ನು ಅವನಲ್ಲಿ ಕೆದಕತಕ್ಕದ್ದಲ್ಲ. ಅಂಥ ಪ್ರಸಂಗ ಘಟಿಸಿದೊಡನೆಯೇ, ನಿಮ್ಮ ಮನಸ್ಸನ್ನು ಸಂಪೂರ್ಣವಾಗಿ ಆವರಿಸುವ ಇತರ ಯಾವುದೇ ಚಟುವಟಿಕೆಯಲ್ಲಿ ನಿಮ್ಮನ್ನು ತೊಡಗಿಸಿಕೊಳ್ಳುವದು; ನಿಮ್ಮ ತತ್ಪರತೆಯನ್ನು ಬೇಡುವ ಹೊಸದೊಂದು ಜವಾಬ್ದಾರಿಯನ್ನು ನೀವಾಗಿಯೇ ವಹಿಸಿಕೊಳ್ಳುವದು; ದುಃಖ ವುಂಟು ಮಾಡಿದ ವ್ಯಕ್ತಿ, ಸ್ಥಳ ಮುಂತಾದವ ರಿಂದ ಸಾಧ್ಯವಿದ್ದಷ್ಟು ಬಿಡುಗಡೆಗೊಳ್ಳುವದು ಎರಡನೆಯ ವಿಧಾನ. ●



# ಈಡಿಯಟ್ ಪೊಲೀಸರು ಮತ್ತು ಸಭ್ಯ ಮುಖ್ಯಮಂತ್ರಿ

**''ರಾಮಣ್ಣೋರೆ, ಏನು ಈ ಭಾಷೆ? ಅದೂ ನವೆಂಬರ್ ತಿಂಗಳಲ್ಲಿ ಈಡಿಯಟ್ಸ್ ಅಂತ ಅತಿಥಿಗಳನ್ನ ಬೈತಾರಾ? ಮುಖ್ಯಮಂತ್ರಿಗಳ ಹಾಗೆ ಮಾತಾಡಬೇಡಿ'' ಎಂದು ಹಿರಿಯರೊಬ್ಬರು ಬುದ್ಧಿ ಹೇಳಿದರು.**

ಗೃಹಪ್ರವೇಶ ಮಾಡದಿದ್ದರೆ ಗ್ರಹಪ್ರವೇಶ ಆಗುತ್ತದೆ ಎಂಬ ಭಯದಿಂದ ರಾಮಣ್ಣ ಅಂಗಡಿ ಸಾಲಿನ ಉದ್ಘಾಟನೆ ಇಟ್ಟುಕೊಂಡ. ಎಂದೋ ಬಿ.ಡಿ.ಎ. ಕೃಪೆಯಿಂದ ಕಾಲು ಬೆಲೆಗೆ ಮಂಜೂರಾಗಿದ್ದ ಸೈಟಿನಲ್ಲಿ ಕಾಂಗ್ರೆಸ್ ಹುಲ್ಲು ಬೆಳೆಸಿದ್ದ. ನೀರು, ಗೊಬ್ಬರ ಇಲ್ಲದಿದ್ದರೂ ಅದು ಕಾಂಗ್ರೆಸ್ ಸರ್ಕಾರದಂತೆ ಎಲ್ಲೆಂದರೆ ಅಲ್ಲಿ, ಹೇಗೆಂದರೆ ಹಾಗೆ ಬೆಳೆದು ಬಿಳಿಯ ಟೋಪಿಗಳಂತೆ ಹೂಗಳನ್ನು ಅರಳಿಸಿ ದಟ್ಟವಾಗಿ ನಿಂತಿದ್ದವು. ಭಾರತದ ಜನಸಂಖ್ಯೆಯಂತೆ ಕಾಲೂರಲು ಜಾಗವಿಲ್ಲದಷ್ಟು ಒತ್ತೊತ್ತಾಗಿ ಬೆಳೆದಿದ್ದವು.

''ರಾಮಣ್ಣಾ, ಖಾಲಿ ಸೈಟ್‌ನ ಹಾಗೇ ಬಿಟ್ಟರೆ ಅದು ಕಂಡವರ ಪಾಲಾಗುತ್ತೆ. ಅಂಗಡಿಗಳನ್ನು ಕಟ್ಟಿಸು. ಬಾಡಿಗೆ ಬರುತ್ತೆ. ನೀನು ಕೆಲಸ ಬಿಟ್ಟು ರಾಜಕೀಯ ಮಾಡಿಕೊಂಡು ಆರಾಮವಾಗಿ ಇರಬಹುದು, ಪಾರ್ಥೇನಿಯಂ ರೀತಿ'' ಎಂದು ಗೆಳೆಯರು ಒತ್ತಾಯಿಸಿದ್ದರು.

''ಪಟೇಲರು ನಿನಗೆ ಗೊತ್ತು, ಮಂತ್ರಿಗಳು ನಿನಗೆ ಗೊತ್ತು. ದುಡ್ಡು ಖರ್ಚಿಲ್ಲದೆ ಪ್ಲಾನು ಸ್ಯಾಂಕ್ಷನ್ ಮಾಡಿಸಿಕೊಂಡು ಎರಡಡಿ ಹೆಚ್ಚಾಗೇ ಕಟ್ಟಡ ಕಟ್ಟು. ನಿನ್ನ ಯಾರು ತಡೀತಾರೆ.'' ಇವೇ ಮುಂತಾದ ಅಯಾಚಿತ ಸಲಹೆಗಳಿಂದ ತತ್ತರಿಸಿದ ರಾಮಣ್ಣನ ಸ್ಥಿತಿ ಕಷ್ಟಕ್ಕೆ ಬಂದಿತ್ತು. ಯಾರಿಗೋ ಸೈಟಿನ ನಕ್ಷೆ ತೋರಿಸಿ ವಾಸ್ತು ವಿಷಯ ಕೇಳಿದ. ತನ್ನ ಕೈ ತೋರಿಸಿ ಭವಿಷ್ಯ ಕೇಳಿದ.

''ಸರ್ಕಾರ ಒಂದು ದಶಕದಿಂದ ಮಾರ್ಕೆಟ್ ಒಂದನ್ನ ಕಟ್ತಾ ಇದೆ. ಅದಕ್ಕೆ ಮೊದಲು ನಿನ್ನ ಅಂಗಡಿ ಸಾಲು ಮುಗಿದರೆ ಅದೃಷ್ಟ ಇದೆ'' ಎಂದ ಜ್ಯೋತಿಷಿ.

ರಾಮಣ್ಣನ ಅಂಗಡಿ ಸಾಲು ಸಿದ್ಧವಾಯ್ತು. ಅದಕ್ಕೆ ಒಂದು ಪೂಜೆ ಇಟ್ಟುಕೊಂಡು ಪ್ರಾರಂಭೋತ್ಸವ ಮಾಡಿದ. ಜನರ ದಂಡು ಬಂತು. ಮಂತ್ರಿಗಳು ಇನ್ನೂ ಬಂದಿರಲಿಲ್ಲ.



''ಯಾರೋ ಅದು? ಅಯೋಗ್ಯರಾ, ಮಧ್ಯೆ ಜಾಗ ಬಿಟ್ಟು ನಿಂತ್ಕೊಳ್ಳಿ, ಮಂತ್ರಿಗಳು ಬರ್ತಾರೆ'' ಎಂದು ರಾಮಣ್ಣ ಅತಿಥಿಗಳನ್ನು ಎರಡು ಸಲ ರೇಗಿದ್ದ. ಕಡೆಗೆ ತಾಳ್ಮೆ ಕಳೆದುಕೊಂಡು, ''ಈಡಿಯಟ್ಸ್, ಬಿಡ್ರೋ ಜಾಗ, ತಳ್ರೋ ಅವರ್ನ ಹಿಂದೆ'' ಎಂದು ಕೂಗಾಡಿದ.

''ರಾಮಣ್ಣೋರೆ, ಏನು ಈ ಭಾಷೆ? ಅದೂ ನವೆಂಬರ್ ತಿಂಗಳಲ್ಲಿ ಈಡಿಯಟ್ಸ್ ಅಂತ ಅತಿಥಿಗಳನ್ನ ಬೈತಾರಾ? ಮುಖ್ಯ ಮಂತ್ರಿಗಳ ಹಾಗೆ ಮಾತಾಡಬೇಡಿ'' ಎಂದು ಹಿರಿಯರೊಬ್ಬರು ಬುದ್ಧಿ ಹೇಳಿದರು.

''ಹಾಂ! ಮುಖ್ಯಮಂತ್ರಿಗಳು ಇದೇ ಭಾಷೆ ಮಾತಾಡ್ತಾರಾ?'' ರಾಮಣ್ಣನಿಗೆ ಖುಷಿಯಾಯ್ತು. ತಾನು ಹಿರಿಯರ ಜಾಡಿನಲ್ಲಿ ನಡೆದಿದ್ದೇನೆ ಎಂದುಕೊಂಡ.

''ಹೌದು. ಎಂಥೆಂಥ ಪೊಲೀಸ್ ಅಧಿಕಾರಿಗಳ್ಗೋ ಈ ಮಾತು ಹೇಳಿದ್ದಾರೆ.

## ಬಿಟ್ಟಿ ಸೃಷ್ಟಿ

ಬ್ರಹ್ಮನಿಗೆ ವಿಪರೀತ
ಕೈಕಾಲು ನಡುಕ
ಕಾರಣವು ಪಾಪವೈ
ಅವನೊಬ್ಬ ಮುದುಕ
ಹೀಗಾಗಿ ಧರೆಯಲ್ಲಿ
ಆ ಅವನ ಸೃಷ್ಟಿ
ಆಗುತಿಹೆ ಬಹುಪಾಲು
ಸಂಪೂರ್ಣ ಬಿಟ್ಟಿ

○ ವಿಡಂಬಾರಿ

ಅವರು ರಾಜ್ಯದ ಪ್ರಥಮ ಪ್ರಜೆ. ರ್‍ಯಾಸ್ಕಲ್, ಈಡಿಯಟ್ ಅಂತ ಮಾತಾಡಿದರೂ ಜನ ಸುಮ್ಮನೆ ಇರ್ತಾರೆ. ಆದರೆ ನೀನು ಈ ಭಾಷೆ ಬಳಸಬಾರದು'' ಎಂದು ಗೀತೋಪದೇಶ ವಾಯ್ತು.

ರಾಮಣ್ಣ ಅಂದು ಸುಮ್ಮನಾದ. ಮಂತ್ರಿಗಳು ಕಡೆಗೂ ಬರಲಿಲ್ಲ. ತಾಂಬೂಲ ಹಿಡಿದು ಮಂತ್ರಿಗಳ ಮನೆಗೇ ಹೋದ.

''ಸಾರ್, ಅಂಗಡಿ ಸಾಲು ಪ್ರಾರಂಭೋತ್ಸವಕ್ಕೆ ತಾವು ಬರಲಿಲ್ಲ'' ತಾಂಬೂಲ ಟೇಬಲ್ ಮೇಲಿಟ್ಟ. ಅದರ ಒಳಗಿದ್ದ ರೂಪಾಯಿ ನಾಣ್ಯ ಕೆಳಗೆ ಬಿದ್ದು ಉರುಳಿಕೊಂಡು ಹೋಗಿ ಮಂತ್ರಿಗಳ ಪಾದದ ಬಳಿ ಮಲಗಿತು.

''ಲಕ್ಷ್ಮೀ, ಲಕ್ಷ್ಮೀಕಟಾಕ್ಷ ಇದು. ಬೇಡ ಅಂದ್ರೂ ಬರ್ತಾಳೆ'' ಎಂದ ಮಂತ್ರಿಗಳು, ''ಉದ್ಘಾಟನೆ ಒಂದೇ ಸಲ ಮಾಡಿದೆಯಾ ರಾಮಣ್ಣಾ?'' ಎಂದರು.

''ಹೌದು ಸಾರ್, ಯಾಕೆ?''

''ನಾನು ಮಾರ್ಕೆಟ್ ಉದ್ಘಾಟನೆ ಮೂರು ಸಲ ಇಟ್ಕೊಂಡಿದ್ದೆ. ನಾಲ್ಕನೇ ಸಲ ಹೋಗಿದ್ದು. ನೀನೂ ಹಾಗೇ ಮಾಡಬಹುದು ಅಂತ ನಾನು ಈ ಸಲದ ನಿನ್ನ ಕಾರ್ಯಕ್ರಮಕ್ಕೆ ಬರಲಿಲ್ಲ'' ಎಂದರು.

''ಸಾರ್, ತಾವು 'ಈಡಿಯಟ್ಸ್' ಅಂತ ಬೈದ್ರಂತೆ ಹೌದೆ?''

''ನಾನೇನು ಮಾಡ್ಲಿ ರಾಮಣ್ಣಾ? ಸರ್ಕಾರಾನ ಉರುಳಿಸೋಕೆ ಜನ ನೋಡ್ತಾ ಇದ್ದಾರೆ. ಸಂಪುಟ ವಿಸ್ತರಣೆ ಮಾಡಿದರೆ ಸರ್ಕಾರ ನಿಲ್ಲುತ್ತೆ ಅಂದ್ರು. ಎಷ್ಟು ಮಂದಿಗೆ ಮಂತ್ರಿ ಪದವಿ ಕೊಡೋದು?''

''ಈಗಾಗ್ಲೇ ೩೩ ಜನ ಇದ್ದಾರಲ್ಲ ಸಾರ್?''

''೫೦ ಮಂದಿಯನ್ನಾದ್ರೂ ಮಂತ್ರಿಗಳನ್ನಾಗಿ ಮಾಡಬೇಕು. ಇಲ್ಲಾಂದ್ರೆ ಅವರೇ ಪಿತೂರಿ ಪ್ರಾರಂಭ ಮಾಡ್ತಾರೆ.''

''ಅಷ್ಟು ಇಲಾಖೆಗಳೇ ಇಲ್ಲವಲ್ಲ ಸಾರ್?''

''ವಿರೋಧ ಪಕ್ಷದವರಿಗೂ ಕೆಲವು ಮಂತ್ರಿ ಸ್ಥಾನಗಳು ಕೊಡೋ ಬಗ್ಗೆ ಆಲೋಚನೆ ಇದೆ. ಈಗ ನಾಯಕನಿಗೆ ವಿರುದ್ಧ ಪ್ರತಿಪಕ್ಷ ನಾಯಕ ಇರ್ತಾನೆ. ಅದೇ ರೀತಿ ಪ್ರತಿಪಕ್ಷ ಮಂತ್ರಿ.''

''ತಿಳೀತು ಸಾರ್. ಸಾರಿಗೆ ಮಂತ್ರಿಗಳ ಜೊತೆಗೆ ಸಾರಿಗೆ ವಿರೋಧ ಮಂತ್ರಿಗಳು ಇರ್ತಾರೆ. ಅವರು ಸಾರೀಗೇನ ವಿರೋಧಿಸ್ತಾರೆ.''

''ಸಾರಿಗೇನ ವಿರೋಧಿಸೊಲ್ಲ. ಸಾರಿಗೆ ಮಂತ್ರಿಗಳು ಹೇಳಿದ್ದನ್ನ ಟೀಕಿಸ್ತಾ ಇರ್ತಾರೆ. ಇವರು ವಾಯುವ್ಯ ಸಾರಿಗೆ ಅಂದರೆ ಅವರು ಈಶಾನ್ಯ ಸಾರಿಗೆ ಅಂತಾರೆ. ಇವರು ಬಸ್ ಬಿಡ್ತೀವಿ ಅಂದ್ರೆ ಅವರು ರೈಲ್ ಬಿಡಿ ಅಂತಾರೆ.''

''ಬಹಳ ಒಳ್ಳೆಯ ಯೋಚನೆ ಸಾರ್. ವಿರೋಧ ಮಂತ್ರಿಗಳು ಪಕ್ಕದಲ್ಲೇ ಇರೋದರಿಂದ ಸಾರ್ವಜನಿಕರ ವಿರೋಧ ಬರೋಲ್ಲ. ಕೇವಲ ಒಬ್ಬರನ್ನ ಎದುರಿಸಿದರೆ ಸಾಕು'' ಎಂದ ರಾಮಣ್ಣ.

''ಆಕ್ಟ್ರಾಯ್ ಮತ್ತೆ ಜಡೀಬೇಕು ಅಂತ ಇದ್ದೀವಿ. ಜನ ಬೇಡ ಅಂತಾರೆ. ಆದರೆ ನಾವು ಬಿಡೊಲ್ಲ. ರಪರಪ ಅಂತ ಆಕ್ಟ್ರಾಯ್ ಹಾಕ್ತೀವಿ. ಅಂಥ ಸಮಯದಲ್ಲಿ ವಿರೋಧ ಮಂತ್ರಿ ಹತ್ತಿರಾನೇ ಇದ್ದರೆ ಅವರಿಗೂ ಆಕ್ಟ್ರಾಯ್ ಹಾಕಬಹುದು.''

''ಇದರಿಂದ ಜನ ಚೇತರಿಸಿಕೊಳ್ತಾರೆ ಸಾರ್. ಪ್ರತಿನಿತ್ಯ ಮಾಮೂಲು ವಸೂಲಿ ಮಾಡ್ತಾ ಆರಾಮವಾಗಿ ಇರ್ತಾರೆ. ನಿಮ್ಮನ್ನ ಹೊಗಳ್ತಾರೆ ಸಾರ್'' ಎಂದ ರಾಮಣ್ಣ.

''ರಾಮಣ್ಣಾ, ಈ ಸಲ ಸಂಪುಟ ವಿಸ್ತರಣೆ ಮಾಡೋವಾಗ ನಿಮಗೂ ಒಂದು ಖಾತೆ ಕೊಡೋ ಉದ್ದೇಶ ಇದೆ. ಒಪ್ತಿರಾ?''

''ನಾನು ಚುನಾವಣೆಗೆ ನಿಂತೇ ಇಲ್ಲವಲ್ಲ ಸಾರ್?''

''ನಾಮಕರಣ ಸದಸ್ಯ ಅಂತ ತಗೋತೀನಿ. ನಿಮಗೆ ''ನಾಮಕರಣ ಖಾತೆ'' ಕೊಡ್ತೀನಿ.''

''ಹಾಗಂದ್ರೆ?''

''ಸರ್ಕಾರದ ಯೋಜನೆಗಳಿಗೆ ಒಳ್ಳೆಯ ಹೆಸರು ಹುಡುಕಿ ನಾಮಕರಣ ಮಾಡ್ತಾ ಇರಬೇಕು ನೀವು. ತಾಳೀಭಾಗ್ಯ, ಹೆರಿಗೆಭತ್ಯ, ಅಕ್ಷಯ, ಆಶಾದೀಪ ಈ ರೀತಿ ನೀವು ಹೆಸರುಗಳು ಹುಡ್ಕೋ ಮಂತ್ರಿ.''

''ಆಗಬಹುದು ಸಾರ್'' ಎಂದ ರಾಮಣ್ಣ ಕೈ ಮುಗಿಯುತ್ತಾ.

''ನಾನೇ ಎಷ್ಟು ಕಾಲ ಇರ್ತೀನೋ ಗೊತ್ತಿಲ್ಲ. ಅಷ್ಟರಲ್ಲಿ ಒಂದೈವತ್ತು ಜನರಿಗೆ ಮಂತ್ರಿ ಪದವಿ ಕೊಟ್ರೆ ಕೊನೆಯ ಪಕ್ಷ 'ಮಾಜೀ ಮಂತ್ರಿ' ಅನ್ನೋ ಬಿರುದಾದರೂ ಉಳಿಯುತ್ತೆ'' ಎಂದ ಸಾಹೇಬರು ಕಾಫಿ ತರಿಸಿದರು.

○ ಎಂ.ಎಸ್. ನರಸಿಂಹಮೂರ್ತಿ
೨೪/೧/೧, ಒಂದನೇ ದೇವಸ್ಥಾನ ರಸ್ತೆ
೧೧ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೦೩.



# ಕ್ರಿಕೆಟ್ ತಾರೆಯರ ಕಾಣದ ಮುಖ



ರಾಜೇಶ್ ಚೌಹಾನ್

## ಟಿ.ವಿ. ನೋಡಲು ಸಮಯವೇ ಇಲ್ಲ!

ತಾನು ಬಾರಿಸಿದ ಒಂದೇ ಒಂದು ಸಿಕ್ಸರ್‌ನಿಂದ ಇಡೀ ಪಾಕಿಸ್ತಾನವನ್ನೇ ಸದ್ದು ಅಡಗಿಸಿದ ಈ ಹುಡುಗ ಭಾರತ ತಂಡದಲ್ಲಿ ನದಿ ದಡದ ಆಟವನ್ನು ಆಡುತ್ತಾ ಉತ್ತಮ ಆಲ್‌ರೌಂಡರ್ ಆಗುವತ್ತ ಹೆಜ್ಜೆ ಇಟ್ಟಿರುವ ಈ ರಾಜೇಶ್ ಚೌಹಾನ್ ಓದುಗರಿಗಾಗಿ ತಮ್ಮ ಮನದಾಳವನ್ನು ತೆರೆದಿಟ್ಟಿದ್ದಾರೆ

- ಕ್ರಿಕೇಟ್ ಬದುಕಿನ ಸ್ಮರಣೀಯ ದಿನ?
  **ಯಾವುದೂ ಇಲ್ಲ**
- ತುಂಬ ದುಃಖ ನೀಡಿದ ದಿನ?
  **ಯಾವುದೂ ಇಲ್ಲ**
- ಕ್ರಿಕೇಟಿಗೆ ಕಾಲು ಇಡಲು ಪ್ರೋತ್ಸಾಹ ನೀಡಿದವರು ಯಾರು?
  **ನನ್ನ ತಂದೆ ಮತ್ತು ಸಂದೀಪ್ ಪಾಟೀಲ್**
- ವರ್ತಮಾನದಲ್ಲಿ ನೀವು ಪ್ರಶಂಸೆ ಮಾಡುವ ಆಟಗಾರರು ಯಾರು?
  **ಸಚಿನ್, ಅಜರ್, ವಿನೋದ್ ಕಾಂಬ್ಳಿ**
- ನಿಮ್ಮ ಪ್ರಕಾರ ಭರವಸೆಯ ಆಟಗಾರ ಯಾರು?
  **ರಾಹುಲ್ ದ್ರಾವಿಡ್**
- ನಿಮ್ಮ ಕ್ರಿಕೆಟ್ ಜೀವನದ ದೊಡ್ಡ ಆಕಾಂಕ್ಷೆ?
  **ಟೆಸ್ಟ್ ಪಂದ್ಯದಲ್ಲಿ ೧೦೦ ವಿಕೆಟ್ ತೆಗೆಯುವುದು ಮತ್ತು ವಿಶ್ವಕಪ್‌ನಲ್ಲಿ ಭಾರತವನ್ನು ಪ್ರತಿನಿಧಿಸುವುದು.**
- ನಿಮಗೆ ಇಷ್ಟವಾದ ಮೈದಾನ?
  **ಕಲ್ಕತ್ತಾದ ಈಡನ್ ಗಾರ್ಡನ್**
- ನಿಮಗೆ ಇಷ್ಟವಾಗದ ಮೈದಾನ?
  **ಯಾವುದೂ ಇಲ್ಲ.**
- ಕ್ರಿಕೇಟ್‌ನಲ್ಲಿ ತುಂಬ ರೋಮಾಂಚನಗೊಂಡ ಕ್ಷಣ?
  **ಯಾವುದೂ ಇಲ್ಲ.**
- ಜೀವನದಲ್ಲಿ ನೆನೆಯುವ ಬಾಲ್ಯದ ಕ್ಷಣಗಳು?
  **ಶಾಲೆಗೆ ಚಕ್ಕರ್ ಹಾಕಿ ಮೈದಾನದಲ್ಲಿ ಕಾಲಕಳೆಯುತ್ತಿದ್ದ ಕ್ಷಣಗಳು.**
- ನೀವು ರಜೆ ದಿನಗಳಲ್ಲಿ ಏನು ಮಾಡುತ್ತೀರಿ?
  **ಹಿಂದಿ ಸಿನಿಮಾ ಹಾಡು ಕೇಳುತ್ತೇನೆ ಮತ್ತು ಪುಸ್ತಕ ಓದುತ್ತೇನೆ.**
- ಹೆಚ್ಚಾಗಿ ಧರಿಸುವ ಉಡುಪು?
  **ಜೀನ್ಸ್ ಪ್ಯಾಂಟ್ ಮತ್ತು ಶರ್ಟ್**
- ಬೇರೆ ಆಟಗಳಲ್ಲಿ ಯಾವುದು ಇಷ್ಟ?
  **ಬ್ಯಾಟ್‌ಮಿಂಟನ್**
- ನಿಮಗೆ ಇಷ್ಟವಾದ ಸಿನಿಮಾ ಹೀರೋ ಮತ್ತು ಹೀರೋಯಿನ್?
  **ರಾಜ್‌ಕಪೂರ್ ಮತ್ತು ಮಧುಬಾಲ.**
- ನಿಮಗೆ ಇಷ್ಟವಾದ ಟಿ.ವಿ. ಕಾರ್‍ಯಕ್ರಮ?
  **ನನಗೆ ಟಿ.ವಿ. ನೋಡಲು ಸಮಯವೇ ಇರುವುದಿಲ್ಲ.**
- ನಿಮಗೆ ಇಷ್ಟವಾದ ಚಲನಚಿತ್ರ?
  **ಮೇರಾ ನಾಮ್ ಜೋಕರ್**
- ಇಷ್ಟವಾದ ಪಾನೀಯ?
  **ಬಾದಾಮಿ ಹಾಲು**
- ಇಷ್ಟವಾದ ಊಟ?
  **ಮಾಂಸಾಹಾರಿ ಊಟ**
- ನಿಮಗೆ ಇಷ್ಟವಾದ ದಿನಪತ್ರಿಕೆ?
  **ಹಿಂದಿಯ ರಾಷ್ಟ್ರೀಯ ಸಹರಾ**
- ನಿಮಗೆ ಇಷ್ಟವಾದ ವಾರಪತ್ರಿಕೆ?
  **ಸ್ಪೋರ್ಟ್ಸ್ ಸ್ಟಾರ್**
- ನಿಮಗೆ ಇಷ್ಟವಾದ ಬರಹಗಾರರು?
  **ಪ್ರೇಮಚಂದ್ ಮತ್ತು ಶರತ್ ಚಂದ್ರ**
- ನಿಮ್ಮ ಜೀವನದ ಗುರಿ?
  **ಶತ್ರುಗಳಿಂದ ನನ್ನ ದೇಶವನ್ನು ಕಾಪಾಡುವುದು.**

## ದೇವರಲ್ಲಿ ನಂಬಿಕೆ



ವೆಂಕಟೇಶ್ ಪ್ರಸಾದ್

ವೆಂಕಿ ಅಲಿಯಾಸ್ ವೆಂಕಟೇಶ್ ಪ್ರಸಾದ್ ಎಂಬ ದೊಡ್ಡ ದೇಹದ ಮೇಲೆ ಮಗುವಿನಂಥ ಮುಖ ಹೊಂದಿರುವ ಆರಡಿಗೂ ಎತ್ತರದ ಬೆಂಗಳೂರಿನ ಈ ಹುಡುಗ ಕಾಲೇಜ್ ಹತ್ತುವವರೆಗೂ ಕ್ರಿಕೇಟ್ ಚೆಂಡನ್ನು ಹಿಡಿಯದ ಈ ಹುಡುಗ ಈಗಿನ ಬೆಳವಣಿಗೆಯನ್ನು ನೋಡಿದರೆ ತಿಳಿದವರಿಗೆ ಆಶ್ಚರ್ಯವಾಗುತ್ತದೆ. ಈ ನೀಳಕಾಯ ಹುಡುಗನ ಬೌಲಿಂಗ್ ಶಕ್ತಿಯನ್ನು ಗಮನಿಸಿದ ಆಸ್ಟ್ರೇಲಿಯದ ಖ್ಯಾತ ವೇಗದ ಬೌಲರ್ ಡೆನಿಸ್ಲಿಲ್ಲ ಪ್ರಸಾದ್‌ಗೆ ಮನಸ್ಸಿಟ್ಟು ಪಾಠ ಹೇಳಿ ಕೊಟ್ಟರು. ಟೆಸ್ಟ್‌ನಲ್ಲಿ ೧೭ ಪಂದ್ಯಗಳಿಂದ ೫೭ ವಿಕೇಟ್, ಒನ್‌ಡೇ ಪಂದ್ಯಗಳಲ್ಲಿ ೮೮ ವಿಕೇಟ್‌ಗಳ ಒಡೆಯರಾಗಿದ್ದರೆ, ತಮ್ಮ ಹತ್ತಿರ ಸಂಬಂಧಿಕರ ಹೆಣ್ಣು ಮಗಳನ್ನು (ಜಯಂತಿ) ಮದುವೆಯಾಗಿರುವ ಈ ವೆಂಕಿ ಈಗ ಒಂದು ಮಗುವಿನ ತಂದೆ. ಈ ಕೆಳಗೆ ತಮ್ಮ ಮನದಾಳವನ್ನು ತೆರೆದಿಟ್ಟಿದ್ದಾರೆ.

- ನಿಮ್ಮ ಕ್ರಿಕೇಟ್ ಜೀವನದ ತುಂಬು ನೆನಪಿನಲ್ಲಿ ಉಳಿಯುವ ಒಳ್ಳೆಯ ದಿನ?
  **ವಿಲ್ಸ ವಿಶ್ವಕಪ್‌ನ ಬೆಂಗಳೂರಿನಲ್ಲಿ ನಡೆದ ಪಾಕ್ ವಿರುದ್ಧದ ಕ್ವಾರ್ಟರ್ ಫೈನಲ್ ಪಂದ್ಯ.**
- ಕ್ರಿಕೇಟ್‌ನಲ್ಲಿ ನೀವು ಮೆಚ್ಚುವ ಪ್ರತಿಭೆಗಳು?
  **ಲಾರ, ಸಚಿನ್, ವಕಾರಯುನಿಸ್, ಅಜರ್ ಮತ್ತು ಕುಂಬ್ಳೆ**
- ವೇಗದ ಬೌಲರ್‌ಗಳಲ್ಲಿ ಯಾರನ್ನು ಮೆಚ್ಚುತ್ತೀರ?
  **ಕಪಿಲ್‌ದೇವ್, ಹ್ಯಾಡ್ಲಿ, ಡೆನಿಸ್ಲಿಲ್ಲ**
- ನಿಮ್ಮ ಕ್ರಿಕೇಟ್ ಅನುಭವದಲ್ಲಿ ಕೆಟ್ಟ ದಿನ?
  **ಇನ್ನೂ ಬಂದಿಲ್ಲ.**
- ಭಾರತದಲ್ಲಿ ಭವಿಷ್ಯದ ಆಟಗಾರರು?
  **ದ್ರಾವಿಡ್, ಸುನೀಲ್ ಜೋಷಿ, ಜೆ. ಅರುಣ್ ಕುಮಾರ್**
- ನಿಮಗೆ ಮೆಚ್ಚುಗೆಯಾದ ಕ್ರೀಡಾಂಗಣ?
  **ಕಲ್ಕತ್ತಾದ ಈಡನ್‌ಗಾರ್ಡನ್**
- ನಿಮಗೆ ಮೆಚ್ಚುಗೆಯಾಗದ ಕ್ರೀಡಾಂಗಣ?
  **ಯಾವುದೂ ಇಲ್ಲ**
- ಕ್ರಿಕೇಟ್ ಅಭಿವೃದ್ಧಿಗೆ ನಿಮ್ಮ ಸಲಹೆ?
  **ತಯಾರಿಸುವ ಪಿಚ್‌ಗಳು ಬೌಲರ್ ಮತ್ತು ಬ್ಯಾಟ್ಸ್‌ಮನ್ ಇಬ್ಬರಿಗೂ ಸಹಕಾರಿಯಾಗಿರಬೇಕು.**
- ನೀವು ಇತರ ಯಾವ ಕ್ರೀಡೆಗಳ ಬಗ್ಗೆ ಆಸಕ್ತಿ ಹೊಂದಿದ್ದೀರಿ?
  **ಫುಟ್‌ಬಾಲ್, ಟೆನಿಸ್, ಮೋಟಾರ್ ರೇಸಿಂಗ್, ಬಾಸ್ಕೆಟ್ ಬಾಲ್**
- ನೀವು ಮೆಚ್ಚುವ ಇತರ ಪ್ರತಿಭೆಗಳು?
  **ರಾಬರ್ಟೊ ಬ್ಯಾಜಿಯೋ, ಬೋರೀಸ್, ಸ್ಟೆಫಿಗ್ರಾಫ್, ಮೈಕಲ್ ಡೂಹನ್, ಅಯರ್ಟನ್ ಸೆನ್ನಾ**
- ನೀವು ಮೆಚ್ಚಿದ ಚಲನಚಿತ್ರ?
  **ಕ್ಲಿಫ್ ಹ್ಯಾಂಗರ್, ಗಾಡ್ ಫಾದರ್**
- ನಿಮ್ಮ ಮನದಾಳದ ಚಲನಚಿತ್ರ ತಾರೆಯರು?
  **ಅಮಿತಾಭ್, ಮೊನಿಷಾ ಕೊಯಿರಾಲಾ, ಹಾರಿಸನ್ ಫೋರ್ಡ್**
- ಸಂಗೀತದಲ್ಲಿ ಮೆಚ್ಚುವ ತಾರೆಯರು?
  **ಕಿಶೋರ್ ಕುಮಾರ್, ಮಹ್ಮದ್ ರಫಿ**
- ನೀವು ಮೆಚ್ಚುವ ಕಾರ್?
  **ಮಾರುತಿ.**
- ನಿಮಗೆ ಇಷ್ಟವಾದ ಉಡುಪು?
  **ಜೀನ್ಸ್‌ಪ್ಯಾಂಟ್ ಮತ್ತು ಟೀ ಶರ್ಟ್**
- ನೀವು ಓದುವ ದಿನಪತ್ರಿಕೆಗಳು?
  **ಡೆಕ್ಕನ್ ಹೆರಾಲ್ಡ್, ದಿ ಹಿಂದೂ**
- ನೀವು ಓದುವ ವಾರಪತ್ರಿಕೆಗಳು
  **ಇಂಡಿಯಾ ಟುಡೆ, ಸ್ಪಾರ್ಟ್ಸ್, ದಿ ಸ್ಪೋರ್ಟ್ಸ್ ಸ್ಟಾರ್**
- ಜೀವನದಲ್ಲಿ ಯಾರನ್ನು ಹೆಚ್ಚಾಗಿ ನಂಬುತ್ತೀರ?
  **ದೇವರನ್ನು ಹೆಚ್ಚಾಗಿ ನಂಬುತ್ತೇನೆ.**
- ರಜೆದಿನಗಳನ್ನು ಎಲ್ಲಿ ಕಳೆಯಲು ಇಷ್ಟಪಡುತ್ತೀರ?
  **ಗೋವಾ ಅಥವಾ ಮಾಲ್ಡೀವ್ಸ್**
- ಜೀವನದ ಮುಂದಿನ ಗುರಿ?
  **ಸಾಧ್ಯವಾದಷ್ಟು ದಿನ ದೇಶಕ್ಕೆ ಆಡುವುದು.**

**– ಪಿ. ರವಿಕುಮಾರ**

# ಕಿಲ ಕಿಲ



ಸ್ವಾತಿ ಜಿ.ಎಚ್.

## ಅಕ್ಟೋಬರ್ ರಜೆ

ಮಕ್ಕಳೇ,

ನಿಮಗೆ ಅಕ್ಟೋಬರ್ ತಿಂಗಳೆಂದರೆ ತುಂಬಾ ಇಷ್ಟ. ಏಕೆಂದರೆ ಆ ತಿಂಗಳು ನಿಮ್ಮ ಶಾಲೆಗಳಿಗೆ ರಜೆ ಇರುತ್ತದೆ. ಕಳೆದ ಅಕ್ಟೋಬರ್ ರಜೆಯಲ್ಲಿ ನೀವೇನು ಮಾಡಿದಿರಿ? ರಜೆಯನ್ನು ಹೇಗೆ ಕಳೆದಿರಿ? ರಜೆಯಲ್ಲಿ ಓದಿದಿರಾ? ಪ್ರವಾಸ ಹೋಗಿದ್ದಿರಾ? ಈ ಬಗ್ಗೆ ಪುಟ್ಟದಾಗಿ ಬರೆದು ಕಳಿಸಿ. ನಿಮ್ಮ ಬರಹಗಳು ಮುಂದಿನ ಸಂಚಿಕೆಯಲ್ಲಿ ಪ್ರಕಟಗೊಳ್ಳುತ್ತವೆ.

*ವಿಶೇಷ ಸೂಚನೆ :*

- ನಿಮ್ಮ ವಯಸ್ಸು ೧೫ ವರ್ಷ ಮೀರಿರಬಾರದು.
- ನಿಮ್ಮ ಅನಿಸಿಕೆಯನ್ನು ಬಿಳಿ ಹಾಳೆಯಲ್ಲಿ ಬರೆದು ಇದೇ ಸಂಚಿಕೆಯ ೭೫ನೇ ಪುಟದಲ್ಲಿರುವ ಕಿಲಕಿಲ ಕೂಪನ್-ಇನ್ನು ಲಗತ್ತಿಸಿ ಈ ಕೆಳಗಿನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸಿ.
- ನಿಮ್ಮ ಬರಹ ನಮಗೆ ತಲುಪಲು ಕೊನೆಯ ದಿನಾಂಕ : ೧-೧೨-೧೯೯೭.

ಸಂಪಾದಕರು, ಬಿಸಿಲ ಬದುಕು ಅಂಚೆ ಪೆಟ್ಟಿಗೆ ೭೯೫೧,
ಬಸವೇಶ್ವರನಗರ, ಬೆಂಗಳೂರು-೭೯.

ಚಿಣ್ಣರೆ,
ಈ ತಿಂಗಳ ಪುಟಾಣಿ ಪದ್ಯಗಳಲ್ಲಿ ಸೊಗಸಾಗಿ ಕಂಪು ಸೂಸುವ ಆರು ಹೂವುಗಳು ತಮ್ಮ ಹೆಸರು ಕೇಳಬೇಕೆಂದು ನಿಮ್ಮ ಮುಂದೆ ಬಂದಿವೆ. ಉತ್ತರ ನೋಡದೇ ತಕ್ಷಣ ಹೇಳುವುದರೊಂದಿಗೆ ನಿಮ್ಮ ಜಾಣತನವನ್ನು ಪ್ರದರ್ಶಿಸುವಿರಿ ತಾನೇ!?

○ ಗೋಪಾಲಕೃಷ್ಣ ವಂಡ್ಸೆ

೧

ಹಸುರು ಹಾಸಲಿ
ದಿನವೂ ಅರಳುವೆ
ತಾರೆಗಳ ತೆರದಲಿ
ನಾನು ನಲಿಯುವೆ
ಕಾಣುವ ಕಣ್ಮನಕೆ
ಸಂತಸ ನೀಡುವೆ
ಯಾರೆಂದು ಹೇಳಿರೆ
ಪರಿಮಳ ಬೀರುವೆ!

೨

ನನಗೆ ಹಳದಿ
ಬಣ್ಣ ಉಂಟು
ನನಗೂ ಮುಳ್ಳಿಗೂ
ಬಹಳ ನಂಟು
ಹಾವು ಕಂಡರೆ
ಬೀಳುವುದು ಗಂಟು
ತಕ್ಷಣ ಹೇಳಿರೆ
ಕೊಡುವೆನು ಮಿಂಟು!

೩

ಗದ್ದೆ ಬೆಟ್ಟದಲಿ
ನಾನು ಬೆಳೆವೆ
ಮಾಲೆ ದಂಡೆಯಲಿ
ನಾನು ಇರುವೆ
ಹಳದಿ ಬಣ್ಣದಲಿ
ನಿಮಗೆ ತೋರುವೆ
ಜಾಣೆಯರು ಹೇಳಿರೆ
ಮುಡಿಯನು ಏರುವೆ!

೪

ನಾನು ಎಲ್ಲರಿಗೂ
ಪ್ರಿಯವಂತೆ
ನನಗೆ ಪರಿಮಳ
ಬಹಳವಂತೆ
ನಾನು ಪ್ರೀತಿಯ
ಸಂಕೇತವಂತೆ
ಯಾರೆಂದು ಹೇಳಲು
ಮಾಡ್ವಿರಾ ಚಿಂತೆ!

೫

ಕೇಸರಿ ಬಿಳಿ
ಬಣ್ಣವ ಹೊತ್ತು
ಅರಳುವೆ ನಾನು
ರಾತ್ರಿಯ ಹೊತ್ತು
ವಿಶಿಷ್ಟ ಕಂಪು
ನನ್ನಲಿ ಇತ್ತು
ಹೇಳಿರಿ ಜಾಣರೆ
ನಾ ನಿಮ್ಮ ಸೊತ್ತು!

೬

ಮುಳ್ಳಿನ ಗೂಡಲಿ
ನನ್ನಯ ಹುಟ್ಟು
ನೆರಳನು ಕಾಣದೆ
ಇರುವೆನು ಒಟ್ಟು
ಏನೆಂದು ಬಿಡಿಸಿರೆ
ಈ ಪದ್ಯದ ಕಟ್ಟು
ಕಂಪನು ಚೆಲ್ಲುವೆ
ಮುತ್ತನು ಕೊಟ್ಟು!

**ಉತ್ತರ :**

| | |
|---|---|
| ೧. ಮಲ್ಲಿಗೆ | ೪. ಗುಲಾಬಿ |
| ೨. ಕೇದಿಗೆ | ೫. ಪಾರಿಜಾತ |
| ೩. ಸೇವಂತಿಗೆ | ೬. ಜಾಜಿ |

# ನನಗಿಷ್ಟವಾದ ಪುಸ್ತಕ - ಪತ್ರಿಕೆ

**ನಿಮಗಿಷ್ಟವಾದ ಪುಸ್ತಕ-ಪತ್ರಿಕೆ ಯಾವುದು ಎಂದು ಕಳೆದ ಸಂಚಿಕೆಯಲ್ಲಿ ಮಕ್ಕಳನ್ನು ಕೇಳಿದ್ದೆವು. ಈ ವಿಭಾಗಕ್ಕೆ ಅನೇಕರು ಉತ್ಸಾಹದಿಂದ ಬರೆದಿದ್ದಾರೆ. ಅವುಗಳಲ್ಲಿ ಆಯ್ದ ಕೆಲವು ಬರಹಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.**

## ಮಕ್ಕಳ ಕಥೆ ಪುಸ್ತಕ

ನನಗೆ ಇಷ್ಟವಾದ ಪುಸ್ತಕ ಎಂದರೆ- 'ಮಕ್ಕಳ ಕಥೆ ಪುಸ್ತಕ'. ನನಗೆ ಇಷ್ಟವಾದ ಪತ್ರಿಕೆ ಎಂದರೆ ದಿನಪತ್ರಿಕೆಯಲ್ಲಿ - 'ಪ್ರಜಾವಾಣಿ' ಹಾಗೂ ಮಾಸಿಕ ಪತ್ರಿಕೆಯಲ್ಲಿ 'ಬಿಸಿಲ ಬದುಕು'.

– ಎಂ. ರವಿಕುಮಾರ (೭ನೇ ತರಗತಿ)
ಜಗಳೂರು

## ಶೈಕ್ಷಣಿಕ ಮಾರ್ಗದರ್ಶನ

ನನಗೆ ಬಿಸಿಲ ಬದುಕು ಪುಸ್ತಕ ತುಂಬಾ ಇಷ್ಟ. ಏಕೆಂದರೆ ನಾನು ಒಂದು ಸಾರಿ ಶೈಕ್ಷಣಿಕ ವಿಷಯದ ಬಗ್ಗೆ ಬೇರೆಯವರನ್ನು ಕೇಳಿದಾಗ ಅವರು ಸರಿಯಾಗಿ ಮಾರ್ಗದರ್ಶನ ನೀಡಲಿಲ್ಲ. ಈಗ ನಿಮ್ಮ ಪತ್ರಿಕೆಯಲ್ಲಿ ವಿದ್ಯೆ, ಉದ್ಯೋಗ, ಆರೋಗ್ಯದ ಬಗ್ಗೆ ಬರುತ್ತಿರುವುದರಿಂದ ಬೇರೆಯವರನ್ನು ಕೇಳುವುದು ತಪ್ಪಿದಂತಾಗಿದೆ. ಆದ್ದರಿಂದ ನಾನು 'ಬಿಸಿಲ ಬದುಕನ್ನು' ಇಷ್ಟಪಡುತ್ತೇನೆ.

ಬೇರೆ ಯಾವುದೇ ಪತ್ರಿಕೆಯಲ್ಲಿ ಶೈಕ್ಷಣಿಕ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿ ಇರುವುದಿಲ್ಲ.

– ಟಿ.ಸಿ.ಎಂ. ಬಸವರಾಜು, (೯ನೇ ತರಗತಿ)
ದಾವಣಗೆರೆ

## ಮನೋರಂಜಿಸುವ ಪತ್ರಿಕೆ

ಯಾವ ಪುಸ್ತಕದಲ್ಲಿ ಮಕ್ಕಳಿಗೆ ಮನೋರಂಜನೆ ನೀಡುವ ಅಂಕಣ ಅಥವಾ ವಿಷಯಗಳನ್ನು ಪ್ರಕಟಿಸಿರುತ್ತಾರೋ ಅವು ಮಕ್ಕಳಿಗೆ ಇಷ್ಟವಾಗುವುದು ಸಹಜ. ಅಂತೆಯೇ ನನಗೆ ಬಿಸಿಲ ಬದುಕು ಮಾಸಪತ್ರಿಕೆ ಬಹಳ ಇಷ್ಟ. ಇದರಲ್ಲಿ ಕಿಲಕಿಲ, ಕ್ವಿಜ್, ಕ್ಲಾಸ್ ರೂಂ, ಚೌಚೌ ಇನ್ನೂ ಮುಂತಾದವು ಬಹಳ ಇಷ್ಟ. ಅದರಲ್ಲೂ ಕಿಲಕಿಲದಲ್ಲಿರುವ ನಿಮ್ಮ ಅನಿಸಿಕೆ ನನಗೆ ಬಹಳ ಇಷ್ಟ.

– ಮೇಘನಾ ದೇಸಾಯಿ (೭ನೇ ತರಗತಿ)
ಕೆರೂರು

## ಉದಯವಾಣಿ

ಪತ್ರಿಕೆಯಲ್ಲಿ ನನಗೆ 'ಉದಯವಾಣಿ' ಪತ್ರಿಕೆ ಬಲು ಇಷ್ಟ. ಅದರಲ್ಲಿಯ ಅಂಕಣವಾದ ಪ್ರಸ್ತುತ, ಜನತಾವಾಣಿ ಅಲ್ಲದೆ ರವಿವಾರದ ಮ್ಯಾಗಸಿನ್ ವಿಭಾಗದಲ್ಲಿ ಪ್ರಕಟವಾಗುವ ಬಾಲಜಗತ್ತು, ಜಾಣಮರಿ-ಶೀರ್ಷಿಕೆ ಬರಿ, ಕವನ ಹಾಗೂ ಮುದ್ದುಮುಖದ ಬಾಲರ ಭಾವಚಿತ್ರ ಇವೆಲ್ಲ ಹೊತ್ತು ತರುವ ಈ ಪತ್ರಿಕೆ ನನ್ನಂಥವರ ಮನಸ್ಸಿಗೆ ಮನೋರಂಜನೆಯ ಹಾರವಿದ್ದಂತೆ. ಆದ್ದರಿಂದ ನನಗೆ ಈ ಪತ್ರಿಕೆಯೇ ಇಷ್ಟ. ಓದುವ ಇತರ ಪುಸ್ತಕ ಮತ್ತು ಪತ್ರಿಕೆ ಎಂದರೆ ಬಾಲಮಿತ್ರ, ಬಾಲಮಂಗಳ ಹಾಗೂ ಕರಾವಳಿ ಅಲೆ, ಕುಂದಪ್ರಭ

– ಎಸ್.ಜಿ. ಚೈತ್ರಾ, ದೇವಾಡಿಗ (೯ನೇ ತರಗತಿ)
ಕುಂದಾಪುರ

## ಸಿನಿಮಾ ಪುಟ ಇಷ್ಟ

ನನಗೆ 'ತುಷಾರ', 'ಬಾಲಮಂಗಳ', 'ಬಿಸಿಲ ಬದುಕು' ಪುಸ್ತಕ ಓದುವುದೆಂದರೆ ಬಹಳ ಇಷ್ಟ. ನಾನು ಸಂಯುಕ್ತ ಕರ್ನಾಟಕ, ಉದಯವಾಣಿ, ಪ್ರಜಾವಾಣಿ ದಿನ ಪತ್ರಿಕೆಗಳನ್ನೂ ಓದುತ್ತೇನೆ. ಸಂಯುಕ್ತ ಕರ್ನಾಟಕದ 'ನಂದನವನ' ಕರ್ಮವೀರದ, 'ಚಿಲಿಪಿಲಿ' ತುಷಾರದ 'ಬಾಲ ಪ್ರಪಂಚ' ಅಂಕಣಗಳೆಂದರೆ ಬಹಳ ಇಷ್ಟ. ಸಿನಿಮಾ ಪುಟಗಳು ಇರುವ ಎಲ್ಲ ಪತ್ರಿಕೆಗಳೂ ನನಗೆ ತುಂಬಾ ಇಷ್ಟ. ನಿಮ್ಮ ಪತ್ರಿಕೆಯ ಮುಖಪುಟವೂ ನನಗೆ ಇಷ್ಟ.

– ಕೆ.ಪಿ. ಹರೀಶಾನಂದ (೨ನೇ ತರಗತಿ)
ಚಳ್ಳಕೆರೆ

## ಮಕ್ಕಳ ಪುಟ ನನಗಿಷ್ಟ

ದೇಶದ ಮಹಾನಾಯಕರ ಪುಸ್ತಕಗಳನ್ನು ಓದುವದು ನನಗೆ ತುಂಬಾ ಇಷ್ಟ. ಇನ್ನು ನಮ್ಮ ತಂದೆಯವರು ತರುವ ಸುಧಾ, ಕರ್ಮವೀರ, ಬಿಸಿಲ ಬದುಕು ಪತ್ರಿಕೆಗಳಲ್ಲಿ ಬರುವ ಚಿಕ್ಕಮಕ್ಕಳಿಗಾಗಿರುವ ಅಂಕಣವನ್ನು ಸದಾ ಓದುತ್ತೇನೆ.

– ಭದ್ರೇಶ್ವರಿ ಜವಳಿ, (೬ನೇ ತರಗತಿ)
ಹುಬ್ಬಳ್ಳಿ

## ಕಥೆ-ಕ್ರೀಡೆ ಇಷ್ಟ

ನನಗೆ ಕತೆ ಪುಸ್ತಕ ಓದಲು ಇಷ್ಟ. ಪ್ರಜಾವಾಣಿ ದಿನಪತ್ರಿಕೆ ಓದುತ್ತೇನೆ. ನನಗೆ ಕ್ರೀಡಾ ಅಂಕಣ ಮತ್ತು ಇತಿಹಾಸಕ್ಕೆ ಸಂಬಂಧವಾದ ವಿಷಯ ಇಷ್ಟ.

– ರಾಹುಲ್ ಅಶೋಕ ಹಜಾರೆ (೪ನೇ ತರಗತಿ)
ಬೀಳಗಿ

## ಬಾಲಮಂಗಳ-ಚಂದಮಾಮ

ಬಾಲಮಂಗಳ, ಚಂದಮಾಮ, ಪ್ರಜಾವಾಣಿ ನನಗಿಷ್ಟ.

ಭೂಬಾಣ, ದೇಶ ವಿದೇಶಗಳಲ್ಲಿ ದಿನನಿತ್ಯ ನಡೆಯುವ ಸುದ್ದಿ, ಕ್ರೀಡೆ, ಉದ್ಯೋಗ ಮಾರ್ಗದರ್ಶಿ, ಮಹನೀಯರು ನಡೆಯುವ ದಾರಿ ನುಡಿಯುವ ಮಾತು ಹಿಡಿಸುತ್ತವೆ.

**- ವಿಜಯಾ ಎಂ.ಎಸ್.** (೧೦ನೇ ತರಗತಿ)
ಸಾಗರ

## ಬಳ್ಳಾರಿಯಿಂದ ತರಿಸಿ ಓದುವೆ

*ನನಗೆ ೧೨ನೇ ಶತಮಾನದ ಶರಣರ ಕಥೆಗಳಿಗೆ ಸಂಬಂಧಿಸಿದ ಪುಸ್ತಕಗಳನ್ನು ಓದುವುದು ಬಲು ಇಷ್ಟ. ಅವರು ಸಕಲರಿಗೆ ಲೇಸನ್ನು ಬಯಸಿ ಮಹಾಮಾನವರಾಗಿ ಬಾಳಿದವರು. ನಿತ್ಯವೂ ಪ್ರಜಾವಾಣಿ ಪತ್ರಿಕೆಯನ್ನು ಓದುತ್ತಿರುವೆ. ಇತ್ತೀಚೆಗೆ ಬಿಸಿಲ ಬದುಕು ಮಾಸಿಕವನ್ನು ಆಸಕ್ತಿಯಿಂದ ಓದುತ್ತಿದ್ದೇನೆ. ಅದರಲ್ಲಿಯ ಮಕ್ಕಳ ಪುಟವಂತೂ ಮಿಠಾಯಿಗಳಿಗಿಂತ ಸಿಹಿ. ನಾವಿರುವುದು ಆಂಧ್ರದ ಗಡಿನಾಡು ಪ್ರದೇಶವಾದರೂ ನಮ್ಮ ತಂದೆಯವರು 'ಬಿಸಿಲ ಬದುಕ'ನ್ನು ಬಳ್ಳಾರಿಯಿಂದ ತರಿಸುವರು.*

***- ಎನ್. ಎಂ. ಚನ್ನಬಸವ*** *(೫ನೇ ತರಗತಿ)*
*ಹೊಳಗುಂದ, (ಆಂ. ಪ್ರ.)*

## ನೆಚ್ಚಿನ ಮಯೂರ

ನನಗೆ ಮಯೂರ ಪುಸ್ತಕ ಓದುವುದೆಂದರೆ ತುಂಬಾ ಇಷ್ಟ. ಏಕೆಂದರೆ ಈ ಪತ್ರಿಕೆಯಲ್ಲಿ ನನಗೆ ಇಷ್ಟವಾದ ಅಂಕಣಗಳೆಂದರೆ ಬುತ್ತಿ ಚಿಗುರು, ಅಂಗೈಯಲ್ಲಿ ಅರಮನೆ ಮತ್ತು ಬೀChi ಯವರ ಹಾಸ್ಯ ಲಹರಿಗಳು.

**- ಪ್ರಭು ವಿ. ಮಾರನಬಸರಿ** (೬ನೇ ತರಗತಿ)
ಸೂಡಿ

## *ಆಗ ಸುಧಾ, ಈಗ 'ಬದುಕು'*

*ನನಗಿಷ್ಟವಾದ ಪುಸ್ತಕ ನನ್ನ ಶಾಲೆಯ ಪುಸ್ತಕ. ಅದರಲ್ಲಿ ನನಗೆ ಹಾಡು ಬಹಳ ಇಷ್ಟ. ನನಗಿಷ್ಟವಾದ ಪತ್ರಿಕೆ ಬಿಸಿಲ ಬದುಕು. ಇದಕ್ಕೂ ಮೊದಲು ಸುಧಾ ಹಿಡಿಸುತ್ತಿತ್ತು. ಏಕೆಂದರೆ ಅದರಲ್ಲಿ ಜೋಕುಗಳು ಬಹಳ ಚೆನ್ನಾಗಿರುತ್ತಿದ್ದವು. ಈಗ ಬಿಸಿಲ ಬದುಕು ನನಗೆ ತುಂಬಾ ಇಷ್ಟವಾಗಿದೆ. ಇದರಲ್ಲಿ ಕಿಲಕಿಲ ಮತ್ತು ಟಪಾಲು ಎಂಬ ಅಂಕಣ ತುಂಬ ಇಷ್ಟ.*

***- ಸವಿತಾ ಸಜ್ಜನರ (೫ನೇ ತರಗತಿ)***
***ರೋಣ***

## ಪಂಚತಂತ್ರ ಕಥೆಗಳು

ನನಗೆ ಬಹಳ ಇಷ್ಟವಾದ ಪುಸ್ತಕಗಳೆಂದರೆ ಕಥೆ ಮತ್ತು ನೀತಿ ಪುಸ್ತಕಗಳು. ಅವುಗಳಲ್ಲಿ ಪಂಚತಂತ್ರ ಕಥೆಗಳನ್ನೇ ನಾನು ಹೆಚ್ಚಾಗಿ ಓದುತ್ತೇನೆ. ಏಕೆಂದರೆ ಅದರಲ್ಲಿ ಪ್ರಾಣಿಗಳ ಕಥೆಗಳು ಬಹಳ ಇರುತ್ತವೆ. ಆ ಕಥೆಗಳಿಂದ ನೀತಿ ಪಾಠಗಳು ಬಹಳ ಸಿಗುತ್ತವೆ. ನಮ್ಮ ಗುರುಗಳು ಸಹ ಇಂಥ ನೀತಿಕಥೆಗಳನ್ನು ಹೇಳಿ ನಮಗೆ ಮಾರ್ಗದರ್ಶನ ಮಾಡುತ್ತಾರೆ. ಅದಕ್ಕಾಗಿ ನಾನು ಬಿಡುವಿನ ಸಮಯದಲ್ಲಿ ಅಂಥ ಪುಸ್ತಕಗಳನ್ನೇ ಓದುವ ಅಭ್ಯಾಸ ಇಟ್ಟುಕೊಂಡಿದ್ದೇನೆ.

**- ಸಂಗಮೇಶ ಮೊಮ್ಮಾ** (೭ನೇ ತರಗತಿ), ಬೀದರ

## *ಅಚ್ಚುಮೆಚ್ಚಿನ 'ಬದುಕು'*

*ನಾನು ದಿನಾಲೂ ಪ್ರಜಾವಾಣಿ ದಿನಪತ್ರಿಕೆ ಓದುತ್ತೇನೆ. ಜೊತೆಗೆ ವಾರಪತ್ರಿಕೆಗಳಾದ ಕರ್ಮವೀರ, ಸುಧಾ ಇವುಗಳನ್ನು ಕೂಡಾ ಓದುವೆನು. ಅದರಂತೆ ಮಾಸಪತ್ರಿಕೆಗಳಾದ ದಿಕ್ಸೂಚಿ, ಬಿಸಿಲ ಬದುಕು ಓದುತ್ತೇನೆ.*

*ಪ್ರಜಾವಾಣಿಯಲ್ಲಿ ಸುದ್ದಿಯ ಮುಖ್ಯಾಂಶಗಳು ಮತ್ತು ಸುಭಾಷಿತ, ಕ್ರೀಡಾ ಸಮಾಚಾರ, ರಾಜ್ಯ ಸಮಾಚಾರ ಓದುತ್ತೇನೆ. ಮಹತ್ವವಾದಂತ ವಿಷಯವನ್ನು ಬರೆದುಕೊಳ್ಳುವೆನು. ಅದರಂತೆ ಸುಧಾ ಪತ್ರಿಕೆಯಲ್ಲಿ ಪದಬಂಧ, ವ್ಯಕ್ತಿ ವಿಷಯ, ಕ್ವಿಜ್ ಇವುಗಳನ್ನು ಓದುವೆನು. ಬಿಸಿಲ ಬದುಕು ಪತ್ರಿಕೆಯ ಮಕ್ಕಳ ಪುಟವನ್ನು ಕುತೂಹಲದಿಂದ ಓದುತ್ತೇನೆ. ಮೇಲಿನ ಎಲ್ಲಾ ಪತ್ರಿಕೆಗಳಲ್ಲಿ "ಬಿಸಿಲ ಬದುಕು" ನನ್ನ ಅಚ್ಚುಮೆಚ್ಚಿನ ಪತ್ರಿಕೆಯಾಗಿದೆ.*

*ಈ ಪತ್ರಿಕೆಯು ಈಗಾಗಲೇ ೫೦ ಸಾವಿರ ಓದುಗರನ್ನು ಆಕರ್ಷಿಸಿದ್ದು ಕೇಳಿ ಬಹಳ ಸಂತೋಷವಾಯ್ತು.*

***-ಎಸ್. ವಿಜಯಲಕ್ಷ್ಮಿ*** *(೯ನೇ ತರಗತಿ)*
*ಹುಲಗಿನಾಳ*

## ಕನ್ನಡ ಪಠ್ಯ ಪುಸ್ತಕ

ನನ್ನ ಮಾತೃಭಾಷೆಯಾದ ಕನ್ನಡ ಪಠ್ಯ ಪುಸ್ತಕ ಅದರಲ್ಲಿಯೂ ೧೦ನೇ ತರಗತಿಯೊಳಗಿನ ಕನ್ನಡ ಪಠ್ಯ ಪುಸ್ತಕದಲ್ಲಿರುವ ಸ್ವಾತಂತ್ರ್ಯಯೋಧರ, ಮಹಾತ್ಮರ, ಐತಿಹಾಸಿಕ ಸ್ಥಳಗಳ ಕತೆಗಳು, ಕವಿತೆಗಳು, ವಿಜ್ಞಾನಿಗಳ ಕೊಡುಗೆ ಇಂತಹ ವಿಷಯದ ಪಾಠಗಳನ್ನು ಓದಿಮುಗಿಸುವ ಕುತೂಹಲ ನನ್ನದು. ನಾನು ಮುಂದೆ ಶಾಲೆಯಲ್ಲಿ ಹೇಳುವ ಕನ್ನಡ ಪಠ್ಯಪುಸ್ತಕದೊಳಗಿರುವ ಪಾಠಗಳನ್ನೇ ೨ ತಿಂಗಳಿನ ಬೇಸಿಗೆಯ ರಜೆಯಲ್ಲಿ ಓದಿ ತಿಳಿದುಕೊಳ್ಳುವ ಹವ್ಯಾಸ ನನ್ನದು.

**- ಸಂಗಮೇಶ ಸೊಬರದ** (೯ನೇ ತರಗತಿ)
ಹಾಬಲಕಟ್ಟಿ

## ಪ್ರೀತಿಯ ಗೆಳೆಯ

ನನಗೆ ಓದುವ ಹವ್ಯಾಸವಿಲ್ಲ. ಆದರೂ ಅಣ್ಣ ತರುವ ಪತ್ರಿಕೆಗಳನ್ನು ಕಣ್ಣಾಡಿಸುತ್ತಿದ್ದೆ. ಅಣ್ಣ ಎರಡು ತಿಂಗಳುಗಳಿಂದ ಹೊಸ ಪತ್ರಿಕೆಯಾದ 'ಬಿಸಿಲ ಬದುಕು' ತರುವುದನ್ನು ನೋಡಿ ಆ ಪುಸ್ತಕವನ್ನು ತಿರುವಿ ಹಾಕಿದಾಗ ಅನೇಕ ವಿಷಯಗಳು ನನ್ನ ಓದಿಗೆ ಉತ್ತೇಜನ ನೀಡಿದವು. ಆದ್ದರಿಂದ ಅದನ್ನು ನನ್ನ ಪ್ರೀತಿಯ ಗೆಳೆಯನನ್ನಾಗಿ ಮಾಡಿಕೊಂಡಿರುವೆ.

**- ರವೀಂದ್ರ ಬೈಲಕೂರ** (೧೦ನೇ ತರಗತಿ), **ಹುನಗುಂದ**

## ಪದಬಂಧ - ಕ್ವಿಜ್

ನನಗೆ ಮಕ್ಕಳ ಪುಸ್ತಕಗಳೆಂದರೆ ಬಹಳ ಇಷ್ಟ. ದಿನ ಪತ್ರಿಕೆಯನ್ನು ಓದುವೆನು ಮಕ್ಕಳ ಅಂಕಣದಲ್ಲಿ ಕಥೆ, ಕವನಗಳನ್ನು ಓದುವದು ನನಗಿಷ್ಟ. ಕಾಮಿಕ್ಸ್ ಮತ್ತು ಐತಿಹಾಸಿಕ ಕಥೆಗಳನ್ನು ಓದುವದೆಂದರೆ ಅದರಲ್ಲು ಪದಬಂಧ ಮತ್ತು ಕ್ವಿಜ್ ಅನ್ನು ತುಂಬುವದೆಂದರೆ ಬಹಳ ಇಷ್ಟ.

**- ಅಶ್ವಿನಿ ಅ.ಡಂಬಳ** (೭ನೇ ತರಗತಿ)
ಕಲಾದಗಿ

# ನಟ ರಮೇಶ್ ಅವರ ಪಿ.ಆರ್.ಓ. ಗುಣ!

○ ಕೇಶವ ನಾಡಕರ್ಣಿ



ಒಂದು ವರ್ಷದ ಹಿಂದೆ ಹೀಗಿರಲಿಲ್ಲ. ಕನ್ನಡದಲ್ಲಿ ಸ್ಟಾರ್‌ಗಳಾರು ಎಂದರೆ ಅದೇ ಹಳೇ ಹೆಸರುಗಳು ರಿಪೀಟ್ ಆಗುತ್ತಿದ್ದವು. ಪ್ರೇಕ್ಷಕರು ಸ್ವೀಕರಿಸಲಿ ಬಿಡಲಿ ಅವರನ್ನೇ ಹಾಕಿಕೊಂಡು ನಿರ್ಮಾಪಕರು ಚಿತ್ರ ನಿರ್ಮಿಸುತ್ತಿದ್ದರು. ಅನಂತರ ಚಿತ್ರ ತೋಪಾದಾಗ ಆ ಸ್ಟಾರ್‌ನ್ನು ನಂಬಿ ಕೆಟ್ಟೆ ಎಂದು ಗೋಳಾಡುತ್ತಿದ್ದರು. ನಂಬರು, ನೆಚ್ಚರು, ಬರಿದೇ ಕರೆವರು ಎಂಬಂತಾಗಿತ್ತು ಸ್ಟಾರ್‌ಗಳ ಪರಿಸ್ಥಿತಿ. ಆದರೆ ಇತ್ತೀಚೆಗೆ ನಿರ್ಮಾಪಕರ ನೋಟ ಒಂದೆಡೆಗೆ ಕೇಂದ್ರೀಕೃತವಾಗಿದೆ. ಬಹುಶಃ ಮೊದಲ ಬಾರಿ ಕನ್ನಡ ಚಿತ್ರರಂಗದಲ್ಲಿ ಪ್ರೇಕ್ಷಕರ ಅನಿಸಿಕೆಗೆ ಬೆಲೆ ಬಂದಿದೆ. ಕಳೆದ ಆರು ತಿಂಗಳಿಂದ ಚಿತ್ರೋದ್ಯಮ ರಮೇಶ್ ಜ್ವರದಿಂದ ಬಳಲುತ್ತಿದೆ. ಪ್ರೇಕ್ಷಕರೂ ರಮೇಶ್ ಜಪ ಮಾಡುತ್ತಿದ್ದಾರೆ. ಪ್ರತಿ ವಾರವೂ ಯಾವುದಾದರೊಂದು ಪತ್ರಿಕೆಯ ಮುಖಪುಟದಲ್ಲಿ ರಮೇಶ್ ಫೋಟೋ ಇರುತ್ತದೆ, ಜೊತೆಗೆ ಸಂದರ್ಶನ. ಒಳ ಪುಟಗಳಲ್ಲಿ ರಮೇಶ್ ಬಾಲ್ಯದ ಬದುಕು, ಫ್ಯಾಮಿಲಿ ಫೋಟೋ, ಹವ್ಯಾಸಗಳು ಮೊದಲಾದ ಅಪರೂಪದ ವಿವರಗಳೂ ಪ್ರಕಟವಾಗುತ್ತಿವೆ.

ಆದರೆ ಹತ್ತು ವರ್ಷದ ಹಿಂದೆ ಇದೇ ರಮೇಶ್ ಅವಕಾಶಕ್ಕಾಗಿ ಸೈಕಲ್ ಹೊಡೀತಿದ್ದಾಗ ಈತನಲ್ಲಿದ್ದ ಪ್ರತಿಭೆಯನ್ನು ಯಾರೂ ಗಮನಿಸಿರಲಿಲ್ಲ. ಅಂದಿಗಿಂತ ತನ್ನ ಅಭಿನಯ ಮಟ್ಟದಲ್ಲಾಗಲಿ, ಶೈಲಿಯಲ್ಲಾಗಲಿ ಗಮನಾರ್ಹ ಬದಲಾವಣೆಯೇನೂ ಆಗಿಲ್ಲ ಎನ್ನುವುದನ್ನು ರಮೇಶ್ ಅವರೇ ಒಪ್ಪಿಕೊಳ್ಳುತ್ತಾರೆ. ಆಗ ಸಿಕ್ಕಿದ ಅವಕಾಶವನ್ನು ಕ್ಯಾಶ್ ಮಾಡಿಕೊಳ್ಳುವ ವಿದ್ಯೆ ಗೊತ್ತಿರಲಿಲ್ಲ, ಈಗ ಅದು ಸಿದ್ಧಿಯಾಗಿದೆ. ಇದೇ ರಮೇಶ್, ವಿಶ್ವನಾಥ್ ನಿರ್ದೇಶನದ ಶ್ರೀಗಂಧ, ಅರಗಿಣಿ, ಪಂಚಮವೇದದಲ್ಲಿ ಚೆನ್ನಾಗಿಯೇ ಅಭಿನಯಿಸಿದಾಗಲೂ ಅದು ಕಮಲಹಾಸನ್ ಅನುಕರಣೆ ಎಂದು ಬರೆದು ಪತ್ರಿಕೆಗಳು ಸುಮ್ಮನಾದವು. ಜನ ನಂಬಿದರು. ರಮೇಶ್ ತಮಿಳಿಗೆ ಪಲಾಯನ ಮಾಡಿದರು.

ಹಾಗೆ ನೋಡಿದರೆ ನಟನೆಗೆ ಗಂಟು ಬೀಳಬೇಕಾದ ದರ್ದ್ ಏನೂ ಈತನಿಗಿರಲಿಲ್ಲ. ಇಂಜನಿಯರಿಂಗ್‌ನಲ್ಲಿ ೯೦ ಶೇಕಡಾ ಮಾರ್ಕ್ ಗಳಿಸಿದ ಪ್ರತಿಭಾನ್ವಿತ. ಬೆಂಗಳೂರಲ್ಲಿ ಅಣ್ಣನ ಫ್ಯಾಕ್ಟರಿಯಿತ್ತು. ಆದರೆ, ಒಂದು ಚಾನ್ಸ್ ತೆಗೆದುಕೊಳ್ಳೋಣ ಅಂತ ಇಲ್ಲಿಗೆ ಬಂದರು. ಸಿನಿಮಾ ಎನ್ನೋದು ಹೆಲಿಕಾಪ್ಟರ್, ಹಾರಿದರೆ ಎತ್ತರಕ್ಕೆ ಹಾರಬಹುದು. ಹಾರಲಾಗದಿದ್ದಲ್ಲಿ ಭೂಮಿಯಲ್ಲೇ ನಡೆದಾಡಿದರಾಯಿತು ಎಂಬ ಸಿಂಪಲ್ ಫಿಲಾಸಫಿಯೊಂದಿಗೆ ಬಂದಾತನಿಗೆ ಅದೇ ಒಂದು ಹಠವಾಯಿತು, ಚಟವಾಯಿತು. ತಮಿಳಿನಲ್ಲೂ ಬಾಲಚಂದರ್ ಡ್ಯುಯೆಟ್ ಚಿತ್ರದಲ್ಲಿ ಅವಕಾಶ ಕೊಡುವ ತನಕ ರಮೇಶ್ ಬಗ್ಗೆ ಪ್ರೇಕ್ಷಕರಿಗೆ ಒಲವಿರಲಿಲ್ಲ. ಮಿಕ್ಕ ಹತ್ತಾರು ಹೀರೋಗಳಂತೆ ರಮೇಶ್ ಅರವಿಂದ್ ಕೂಡಾ ಒಬ್ಬ ಅಂದುಕೊಂಡಿದ್ದರು. ಆ ಕಾಲಕ್ಕೆ ಕೋಕಿಲಾ ಮೋಹನ್‌ಗೆ ಬೇಡಿಕೆ ಕಡಿಮೆಯಾಗಿದ್ದರಿಂದ ರಮೇಶ್ ಆ ಜಾಗದಲ್ಲಿ ಸ್ಥಾಪನೆಯಾದರು. ಇಲ್ಲೂ ಅಷ್ಟೇ ಅನಂತನಾಗ್ ನಟಿಸೋದು ಕಡಿಮೆಯಾಗಿದ್ದರಿಂದ ಆ ಸ್ಲಾಟ್‌ನ್ನು ಭರ್ತಿ ಮಾಡೋ ಉದ್ದೇಶದಿಂದಲೇ ರಮೇಶ್ ಮರಳಿ ಬಂದಿದ್ದರು. ಅನಂತರ ಆಗಿದ್ದೇ ಬೇರೆ.

**ಒಳ್ಳೇ ನಟನೊಳಗೆ ಒಬ್ಬ ಒಳ್ಳೇ ಪಬ್ಲಿಕ್ ರಿಲೇಷನ್ ಆಫೀಸರ್ ಇದ್ದರೆ ಅನುಕೂಲ ಡಬ್ಬಲ್ ಆಗುತ್ತದೆ ಎನ್ನೋದಕ್ಕೆ ರಮೇಶ್ ಉದಾಹರಣೆ**

ಒಳ್ಳೇ ನಟನೊಳಗೆ ಒಬ್ಬ ಒಳ್ಳೇ ಪಬ್ಲಿಕ್ ರಿಲೇಷನ್ ಆಫೀಸರ್ ಇದ್ದರೆ ಅನುಕೂಲ ಡಬ್ಬಲ್ ಆಗುತ್ತದೆ ಎನ್ನೋದಕ್ಕೆ ರಮೇಶ್ ಉದಾಹರಣೆ. ಇವರು ಎಲ್ಲರಿಗೂ ಮೆಚ್ಚುಗೆಯಾಗೋ ಥರ ಮಾತಾಡ್ತಾರೆ, ಮೆಚ್ಚಿಸ್ತಾರೆ,

ಯಾರನ್ನೂ ನೋಯಿಸೋಲ್ಲ. ಸಮಯ ಸಿಕ್ಕಾಗ ಓದ್ತಾರೆ, ಊರು ಸುತ್ತುತ್ತಾರೆ, ಜನರ ವೈವಿಧ್ಯಮಯ ಹಾವಭಾವಗಳನ್ನು ಗಮನಿಸುತ್ತಾರೆ. ಅದನ್ನೇ ಮನಸ್ಸಿನ ಮೂಲೆಯಲ್ಲಿ ಟಿಪ್ಪಣಿ ಮಾಡಿಕೊಂಡು ತಮ್ಮ ಅಭಿನಯದಲ್ಲಿ ಬಳಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇದು ಬೆಳೆಯುವ ನಟನ ಲಕ್ಷಣ. ನಮ್ಮಲ್ಲಿ ಯಾವುದೇ ನಟ ಜನಪ್ರಿಯತೆಯ ಅಟ್ಟಕ್ಕೇರಿದ ಮರುದಿನವೇ ಜನರಿಂದ ದೂರವಾಗ್ತಾನೆ, ತನ್ನದೇ ಕೋಟೆಯೊಳಗೆ-ಭ್ರಮೆಯ ವರ್ತುಲದೊಳಗೆ ಬಂಧಿಯಾಗ್ತಾನೆ. ಅವನ ಸುತ್ತ ಇರೋರೆಲ್ಲ ಅವನನ್ನೇ ಹಾಡಿ ಹೊಗಳುವ ಅಭಿಮಾನಿಗಳು. ಈ ಕಾರಣಕ್ಕೇ ಆತನಿಗೆ ವರ್ತಮಾನ ಅಪರಿಚಿತವಾಗಿಬಿಡುತ್ತದೆ, ನಿತ್ಯ ಬದುಕಿನಲ್ಲಾಗುವ ಬದಲಾವಣೆಗಳು ಗೋಚರಿಸುವುದಿಲ್ಲ, ಜನರ ಇಷ್ಟಾನಿಷ್ಟಗಳು ಗೊತ್ತಾಗುವುದಿಲ್ಲ. ಆದರೆ ರಮೇಶ್ ನೋಡಿ, ಇಂದಿಗೂ ಒಂಟಿಯಾಗಿ ಯಾವುದೋ ಲೈಬ್ರೆರಿಯಲ್ಲಿ ಕಾಣಿಸಿಕೊಳ್ಳುತ್ತಾರೆ, ಇನ್ನಾವುದೋ ಸಮಾರಂಭದಲ್ಲಿ ಸಿನಿಮೇತರ ವಿಷಯದ ಬಗ್ಗೆ ರಸವತ್ತಾಗಿ ಮಾತಾಡುತ್ತಾರೆ, ಜಗತ್ತಿನಲ್ಲಾಗುವ ಬದಲಾವಣೆಗಳ ಬಗ್ಗೆ ಕುತೂಹಲದಿಂದ ಮಾಹಿತಿ ಸಂಗ್ರಹಿಸುತ್ತಾರೆ. ಅರಿವಿನ ದಿಗಂತ ವಿಸ್ತಾರದೊಂದಿಗೇ ನಟನಾಗಿಯೂ ಬೆಳೆಯುತ್ತಾರೆ.

ಮದ್ರಾಸಿನಲ್ಲಿದ್ದಾಗಲೂ ಅಷ್ಟೇ ರಮೇಶ್ ಕನ್ನಡ ಪತ್ರಿಕೆಗಳಿಗೆ ದೀಪಾವಳಿ ಗ್ರೀಟಿಂಗ್ಸ್ ಕಳಿಸುತ್ತಾ ಇದ್ದರು. ತಮ್ಮ ಲೇಟೆಸ್ಟ್ ಫೋಟೋಗಳನ್ನು ಪಾರ್ಸೆಲ್ ಮಾಡುತ್ತಿದ್ದರು. ಇದರಿಂದ ಲಾಭವಾಗದಿದ್ದಲ್ಲೂ ಪರವಾಗಿಲ್ಲ, ನಷ್ಟವೇನೂ ಇಲ್ಲವಲ್ಲ ಎಂಬ ಪಾಲಿಸಿ. ಇಂಥ ಸಣ್ಣಪುಟ್ಟ ಸೌಜನ್ಯದ ಗೆಸ್ಚರ್‌ಗಳೇ ಇವರು ಮರಳಿ ಬಂದಾಗ ಇವರನ್ನು ಕಾಪಾಡಿದವು. ಈತ ಮೊದಲು ಪತ್ರಿಕೆಗಳ ಡಾರ್ಲಿಂಗ್ ಆದರು, ನಂತರ ಪ್ರೇಕ್ಷಕರ ಡಾರ್ಲಿಂಗ್ ಆದರು. ಇತರೇ ನಟರ ಚಿತ್ರಗಳನ್ನು ನೋಡಿ ಜನ ಚೆನ್ನಾಗಿದೆ ಅಂತ ತಮ್ಮೊಳಗೇ ಅಂದುಕೊಂಡು ಸುಮ್ಮನಾದರೆ ರಮೇಶ್ ಚಿತ್ರಗಳು ಬಂದಾಗ ಅವುಗಳ ಬಗ್ಗೆ ಚರ್ಚೆ ಮಾಡುವ ಟ್ರೆಂಡ್ ಶುರುವಾಯಿತು. ಅಮೃತವರ್ಷಿಣಿ ಚಿತ್ರದಲ್ಲಿ ಈತ ಆ್ಯಂಟಿ ಹೀರೋ ಪಾತ್ರ ಮಾಡಿದಾಗ ಅದರ ಪರ ಮತ್ತು ವಿರೋಧವಾಗಿ ಹತ್ತಾರು ಪತ್ರಗಳು ಪತ್ರಿಕಾ ಕಛೇರಿಗೆ ಬಂದವು. ಅದು ಪ್ರಕಟವಾದಾಗ ರಮೇಶ್ ಪ್ರತಿಕ್ರಿಯಿಸಿದರು. ಅವರ ಮಟ್ಟಿಗೆ ಇದು ಫೀಡ್‌ಬ್ಯಾಕ್ ಆದರೆ ಪ್ರೇಕ್ಷಕನಿಗೆ ರಮೇಶ್ ತಮ್ಮ ಮಾತನ್ನೂ ಗಂಭೀರವಾಗಿ ಸ್ವೀಕರಿಸುತ್ತಿದ್ದಾರೆ ಎಂಬ ಖುಶಿ ಮೂಡಿತು.

ರಮೇಶ್ ಪುನರಾಗಮನವಾಗಿದ್ದು ಅದು ನಾಯಕಿ ಪ್ರಧಾನ ಚಿತ್ರವಾದ ಕರ್ಪೂರದ ಗೊಂಬೆಯಿಂದ, ಆ ಚಿತ್ರ ಗೆದ್ದರೂ ಅದರ ಕ್ರೆಡಿಟ್ ನಿರ್ದೇಶಕ ಮಹೇಂದರ್ ಹಾಗೂ ಶ್ರುತಿಗೆ ಹೋಯಿತು. ಆದರೆ ರಮೇಶ್ ಇದನ್ನು ಉತ್ತಮ ಆರಂಭ ಎಂದೇ ಸ್ವೀಕರಿಸಿದರು. ಅನಂತರ ಇಬ್ಬರು ಹೀರೋಗಳಿರುವ ಚಿತ್ರಗಳನ್ನು ಒಪ್ಪಿಕೊಂಡರು. ನಮ್ಮೂರ ಮಂದಾರ ಹೂವೆ ಚಿತ್ರದ ಯಶಸ್ಸು ಈತನಿಗೆ ದಕ್ಕಲಿಲ್ಲ. ಯಾಕೆಂದರೆ ಅಲ್ಲಿ ದೇಸಾಯಿ, ಶಿವರಾಜ್ ಇದ್ದರು. ಅಮೃತವರ್ಷಿಣಿಯಲ್ಲಿ ದಿನೇಶ್‌ಬಾಬು ಮ್ಯಾಜಿಕ್ ಇತ್ತು. ಹೀಗಾಗಿ ರಮೇಶ್ ನಟಿಸಿದ ಪ್ರತಿಯೊಂದು ಚಿತ್ರ ಗೆದ್ದಾಗಲೂ ಅದಕ್ಕೆ ಕಾರಣರು ಇನ್ನಾರೋ ಎಂದು ಗಾಂಧಿನಗರ ಬೆಟ್ಟುತೋರಿಸುತ್ತಲೇ ಇದ್ದಿದ್ದರಿಂದ ರಮೇಶ್‌ನ್ನೇ ನೆಚ್ಚಿಕೊಂಡು ಚಿತ್ರ ನಿರ್ಮಿಸಲು ನಿರ್ಮಾಪಕರು ಹಿಂಜರಿದರು. ಮುಂದೆ ಬಂದವರಿಗೂ ಯಾರೂ ಫೈನಾನ್ಸ್ ಮಾಡೋದಕ್ಕೆ ಸಿದ್ಧರಾಗಲಿಲ್ಲ. ಇಂಥ ಟೈಮ್‌ನಲ್ಲಿ ಬಂತು 'ಓ ಮಲ್ಲಿಗೆ'. ನಿರ್ಮಾಪಕ, ನಿರ್ದೇಶಕ, ನಾಯಕಿ ಎಲ್ಲರೂ ಹೊಸಬರೇ. ಹೀಗಾಗಿ ಮಲ್ಲಿಗೆ ಮಾತ್ರ ರಮೇಶ್ ಪ್ರಯತ್ನ ಹಾಗೂ ಚರಿಶ್ಮದಿಂದಲೇ ಗೆದ್ದ ಚಿತ್ರ ಎಂದು ಎಲ್ಲರೂ ಒಪ್ಪಿಕೊಳ್ಳಲೇಬೇಕಾಯಿತು. ಆಗ ಇದ್ದಕ್ಕಿದ್ದಂತೆ ಪ್ರತಿಯೊಬ್ಬರೂ ರಮೇಶ್ ನಟಿಸಿದ ಹಿಂದಿನ ಚಿತ್ರಗಳ ಯಶಸ್ಸಲ್ಲೂ ಅವರ ಪಾಲಿದೆ ಎಂದು ಪತ್ತೆ ಹಚ್ಚೋದಕ್ಕೆ ಶುರು ಮಾಡಿದರು.

ಅಲ್ಲಿಯ ತನಕ ಸಣ್ಣ ಪಾತ್ರವಾದರೂ ಪರವಾಗಿಲ್ಲ, ಅದರಲ್ಲೇ ಮಿಂಚಬಹುದು ಎಂಬ ಧೋರಣೆಯನ್ನೇ ಅನುಸರಿಸುತ್ತಿದ್ದ ರಮೇಶ್ ಓ ಮಲ್ಲಿಗೆಯ ನಂತರ ಹುಷಾರಾದರು. ತಮ್ಮ ಜಾಣತನದ ಕಾರ್ಡನ್ನು ಬಳಸಿದರು. ದಿನೇಶ್ ಬಾಬು ತಮ್ಮ ನಿರ್ದೇಶನದ ಲಾಲಿಗೆ ಕರೆದಾಗ ತಪ್ಪಿಸಿಕೊಂಡರು. ಯಾಕೆಂದರೆ ಅಲ್ಲಿ ವಿಷ್ಣುವರ್ಧನ್ ಇರೋದ್ರಿಂದ ತನಗೇನೂ ಕೆಲಸವಿರೋಲ್ಲ ಅಂತ ಇವರಿಗೆ ಗೊತ್ತಿತ್ತು. ಆದರೆ ನೇರವಾಗಿ ನಿರಾಕರಿಸುವ ಬದಲಾಗಿ ಕಾಲ್‌ಷೀಟ್ ಸಮಸ್ಯೆಯನ್ನು ಮುಂದಿಟ್ಟರು. ವಿಷ್ಣುವರ್ಧನ್ ಜೊತೆ



ಮೊದಲ ಬಾರಿ ನಟಿಸುವ ಸುವರ್ಣಾವಕಾಶ ಮಿಸ್ ಆಯಿತು ಅಂತ ಪತ್ರಿಕೆಗಳ ಮುಂದೆ ಪರಿತಪಿಸಿದರು. ಇದೇ ಥರ ನಾಲ್ಕೈದು ಆಫರ್‌ಗಳಿಗೆ ಬುದ್ಧಿವಂತಿಕೆಯಿಂದಲೇ ಒಲ್ಲೆ ಅಂದ ರಮೇಶ್ ವೈವಿಧ್ಯಮಯ ಪಾತ್ರಗಳನ್ನೇ ಆರಿಸಿಕೊಂಡರು. ಆ ಪೈಕಿ ಅಂತರ್ಗಾಮಿ, ಮುಂಗಾರಿನ ಮಿಂಚು, ಉಲ್ಟಾಪಲ್ಟಾ ಮುಖ್ಯವಾದವು. ಉಲ್ಟಾಪಲ್ಟಾ ಈಗಾಗಲೇ ತೆರೆ ಕಂಡು ಯಶಸ್ವಿಯಾಗಿದೆ. ಸಂಪೂರ್ಣ ಹಾಸ್ಯಮಯ ಚಿತ್ರವಾಗಿದ್ದರೂ ಇದೇ ಚಿತ್ರ. ಈ ಹಿಂದೆ ಹಿಂದಿಯಲ್ಲಿ ಅಂಗೂರ್ ಎಂಬ ಹೆಸರಲ್ಲಿ ತೆರೆಕಂಡು ಕ್ಲಿಕ್ ಆಗಿದ್ದು ರಮೇಶ್‌ಗೆ ಗೊತ್ತಿತ್ತು. ಆದರೆ ಅವರು ನೀಡಿದ ಕಾರಣ ಬೇರೆಯೇ ಆಗಿತ್ತು. ಶೇಕ್ಸ್‌ಪಿಯರ್ ನಾಟಕವನ್ನು ಆಧರಿಸಿದ ಚಿತ್ರ ಎಂಬ ಕಾರಣಕ್ಕೆ ಒಪ್ಪಿಕೊಂಡೆ ಅಂದರು. ರಮೇಶ್‌ಗಿರುವ ಅನುಕೂಲವೆಂದರೆ ಹಾಸ್ಯದೃಶ್ಯಗಳಲ್ಲಿ ಆತನ ಸಮಯಪ್ರಜ್ಞೆ ಅದ್ಭುತವಾದದ್ದು. ಮೂಲತಃ ಈತ ಮೈಮ್ ಕಲಾವಿದ.

ಇಂದಿಗೂ ರಮೇಶ್ ಚಿತ್ರಗಳಿಗೆ ಮಧ್ಯಮ ವರ್ಗದ ಪ್ರೇಕ್ಷಕರಷ್ಟೇ ಬರುತ್ತಾರೆ, ಮುಂದಿನ ಸಾಲು ಖಾಲಿಯಾಗಿಯೇ ಇರುತ್ತದೆ ಎಂಬ ಆರೋಪವಿದೆ. ಅದು ಅನಿವಾರ್ಯ ಕೂಡಾ. ಯಾಕೆಂದರೆ ರಮೇಶ್ ನಿರ್ವಹಿಸುವ ಪಾತ್ರ ದ್ವಂದ್ವಾರ್ಥದ ಡೈಲಾಗ್ ಹೊಡೆಯುವುದಿಲ್ಲ, ಅಶ್ಲೀಲ ಭಂಗಿಯಲ್ಲಿ ಕುಣಿಯೋದಿಲ್ಲ, ರಕ್ತ ಚೆಲ್ಲುವ ಫೈಟ್ ಮಾಡೋಲ್ಲ. ಇಲ್ಲಿಯವರೆಗೆ ಟಿ.ವಿ.ಗೆ ಕಚ್ಚಿಕೊಂಡಿದ್ದ ಮಧ್ಯಮ ವರ್ಗದವರನ್ನು ಮತ್ತೆ ಚಿತ್ರರಂಗಕ್ಕೆ ಸೆಳೆಯುವಂತೆ ಮಾಡಿದ ರಮೇಶ್ ಸಾಧನೆ ಸಾಮಾನ್ಯದ್ದಲ್ಲ. ಇದರಿಂದ ಒಟ್ಟಾರೆಯಾಗಿ ಕನ್ನಡ ಚಿತ್ರೋದ್ಯಮಕ್ಕೇ ಲಾಭವಾಗಿದೆ. ಇನ್ನೊಂದೆಡೆ ಶೂಟಿಂಗ್ ಟೈಮ್‌ನಲ್ಲಿ ಯಾವುದೇ ಸ್ಟಾರ್ ನಖರಾ ತೋರದೆ, ನಿರ್ದೇಶಕರ ಖಾಸಾ ದೋಸ್ತ್‌ನಂತೆ ವರ್ತಿಸುವ ರಮೇಶ್ ಬಗ್ಗೆ ಯಾರೂ ಚಕಾರವೆತ್ತುವಂತಿಲ್ಲ. ಒಳ್ಳೇ ನಟ, ಒಳ್ಳೆ ಮನುಷ್ಯ. ಈ ಎರಡು ಬಿರುದುಗಳನ್ನು ಏಕಕಾಲಕ್ಕೆ ಪಡೆದ ಮೊದಲ ನಟನೀತ. ನೆನಪಿರಲಿ, ರಮೇಶ್ ಇನ್ನೂ ಸ್ಟಾರ್ ಆಗಿಲ್ಲ, ಜನ ಅವರನ್ನು ಆ ದೃಷ್ಟಿಯಲ್ಲಿ ನೋಡುವುದೂ ಇಲ್ಲ. ಪ್ರೇಕ್ಷಕರ ಮಟ್ಟಿಗೆ ರಮೇಶ್ ನಮ್ಮ ನಡುವಿನಲ್ಲೊಬ್ಬ. ■

# ಮಂಡ್ಯದ ಯುವ ಸಂಕಲನಕಾರ
# ಬೇಬಿ ನಾಗರಾಜ್

**ಜೀ**ವನದಲ್ಲಿ ಛಲ ಒಂದಿದ್ದರೆ ಏನೆಲ್ಲ ಸಾಧಿಸಲು ಸಾಧ್ಯ ಎಂಬುದಕ್ಕೆ ಟಿ.ವಿ. ಧಾರಾವಾಹಿ ಮತ್ತು ಸಾಕ್ಷ್ಯ ಚಿತ್ರಗಳ ಸಂಕಲನಕಾರನಾದ ಬೇಬಿ ನಾಗರಾಜ್‌ರವರೇ ಸಾಕ್ಷಿ.

೨೩ ವರ್ಷದ ನಾಗರಾಜ್ ಸಂಕಲನವನ್ನು ಕಲಿತು ಕೇವಲ ೫ ತಿಂಗಳಿನಲ್ಲಿಯೇ ೧೭೫ ಕಂತುಗಳಷ್ಟು ಧಾರಾವಾಹಿಗಳನ್ನು ಸಂಕಲಿಸಿದ್ದಾರೆ. ಅವರು ಸಂಕಲನ ಮಾಡಿದ ಹಲವಾರು ಧಾರಾವಾಹಿಗಳು ಇಂದು ಬೆಂಗಳೂರು



ದೂರದರ್ಶನದಲ್ಲಿ ಪ್ರಸಾರವಾಗುತ್ತಿವೆ.

ಮಂಡ್ಯ ತಾಲೂಕ್ ಹತ್ತಿರದ ಬೇಬಿ ಎಂಬ ಗ್ರಾಮದಿಂದ S.S.L.C. ಫೇಲ್ ಆದ ತಕ್ಷಣ ಬೆಂಗಳೂರಿಗೆ ಕೆಲಸ ಹುಡುಕಿಕೊಂಡು ಬಂದರು. ಜಯನಗರದ ಕ್ಲಬ್ ಒಂದರಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿಗೆ ಆಗಾಗ್ಗೆ ಬರುತ್ತಿದ್ದ ನಾಯ್ಡು ಸ್ಟುಡಿಯೋದ ಮೇನೇಜರ್ ಆದ ಪುಟ್ಟಮಾದಪ್ಪನವರ ಪರಿಚಯವಾಯಿತು.

ಅವರ ಪರಿಚಯದಿಂದ ಸ್ಟುಡಿಯೋ ಬಾಯ್ ಆಗಿ ಕೆಲಸಕ್ಕೆ ಸೇರಿದರು. ಕೆಲಸವಿಲ್ಲದ ಸಮಯದಲ್ಲಿ ಸ್ಟುಡಿಯೋದಲ್ಲಿ ಹಿರಿಯ ಸಂಕಲನಕಾರರು ಸಂಕಲನ ಮಾಡುವುದನ್ನು ನೋಡುತ್ತಾ ನಿಂತರೆ, ''ಇಲ್ಲಿ ಏನೋ ನೋಡುತ್ತೀಯ ಎಂದು ಗದರಿ ಒದ್ದು ಬಿಡುತ್ತಿದ್ದರು'' ಎಂದು ನಾಗರಾಜ್ ನೋವಿನಲ್ಲಿಯೇ ಹೇಳುತ್ತಾರೆ.

ಈ ಘಟನೆಗಳು ನಾಗರಾಜ್‌ನ ಮನಸ್ಸಿನಲ್ಲಿ ತೀವ್ರ ಪರಿಣಾಮ ಬೀರಿ, ತಾನೂ ಒಬ್ಬ ಸಂಕಲನಕಾರ ಆಗಬೇಕೆಂದು ಛಲ ಬರಿಸಿತು. ಸುಮಾರು ನಾಲ್ಕು ವರ್ಷ ಸ್ಟುಡಿಯೋದಲ್ಲಿಯೇ ಕಾಫಿ ಲೋಟ ತೊಳೆದುಕೊಂಡು, ರಾತ್ರಿಯ ವೇಳೆ ಎಡಿಟಿಂಗ್ ರೂಂನಲ್ಲಿ ಹೋಗಿ ಅಲ್ಲಿಯ ಕ್ಯಾಸೆಟ್‌ಗಳನ್ನು ಪ್ಲೈಯರ್‌ಗೆ ಹಾಕಿಕೊಂಡು ಹಿಂದೆ ಮುಂದೆ ಓಡಿಸುತ್ತಾ, ಅಲ್ಪ ಸ್ವಲ್ಪ ಕಲಿಯುವ ಸಮಯದಲ್ಲಿ ಅವನು ಬಳಸುತ್ತಿದ್ದ ಕ್ಯಾಸೆಟ್ ಒಂದರ ಆಡಿಯೋ ಟ್ರಾಕ್ ಅಳಿಸಿಹೋಗಿಬಿಟ್ಟಿತು.

ಈ ವಿಷಯ ಅಲ್ಲಿಯ ಮೇನೇಜರ್‌ಗೆ ತಿಳಿದು ಅವರಿಂದ ಏಟು ತಿಂದು ಅಲ್ಲಿಂದ ರವಿಕಿರಣ್ ಸ್ಟುಡಿಯೋದಲ್ಲಿ ಕೆಲಸಕ್ಕೆ ಸೇರಿ ಅಂತೂ ಕೆಲಸ ಕಲಿತೇಬಿಟ್ಟರು.

ಈಗ ನಾಗರಾಜ್ ಕೆಲಸ ಕಲಿತ ಅಲ್ಪಾವಧಿಯಲ್ಲೇ ತೋರಿದ ಸಾಧನೆ ಮಹತ್ವದ್ದಾಗಿದೆ. ಆದರೂ ಉತ್ತಮ ಸಾಕ್ಷ್ಯ ಚಿತ್ರಗಳನ್ನು ಸಂಕಲನ ಮಾಡುವುದನ್ನು ಇನ್ನೂ ಚೆನ್ನಾಗಿ ಕಲಿತರೆ ಈ ೨೩ರ ಯುವಕ ಇನ್ನೂ ಈ ಕ್ಷೇತ್ರದಲ್ಲಿ ಒಳ್ಳೆಯ ಕೆಲಸ ಮಾಡಬಹುದು.

○ ಬಿ.ಎಸ್. ತಿಪ್ಪೇಸ್ವಾಮಿ


















## ಸ್ವಾತಂತ್ರ್ಯದ ಐವತ್ತು ವರ್ಷ



# ಜಾಣ ವಿದ್ಯಾರ್ಥಿ ಯೋಜನೆ !

## ಕೇವಲ 90 ರೂಪಾಯಿಗೆ 12 ಸಂಚಿಕೆಗಳು !

ಮನೆಯಲ್ಲಿ ಎಲ್ಲರಿಗೂ ಇಷ್ಟವಾಗುವ ವಿಶಿಷ್ಟ ಮಾಸಪತ್ರಿಕೆಯಾಗಿ ಜನಪ್ರಿಯವಾಗಿರುವ 'ಬಿಸಿಲ ಬದುಕು' ವಿದ್ಯಾರ್ಥಿಮಿತ್ರರ ವಿಶೇಷ ಅಭಿಮಾನಕ್ಕೆ ಪಾತ್ರವಾಗಿದೆ. ಇದಕ್ಕೆ ಈ ಪತ್ರಿಕೆಯಲ್ಲಿರುವ ವಿದ್ಯೆ-ಉದ್ಯೋಗ ವಿಭಾಗದ ಉಪಯುಕ್ತ ಮಾಹಿತಿಯೂ ಒಂದು ಕಾರಣ. ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ಅಪ್ಪನಂತೆ, ಗುರುವಿನಂತೆ, ತಾಯಿಯಂತೆ, ಹಿರಿಯಣ್ಣನಂತೆ ಮಾಹಿತಿ-ಸ್ಫೂರ್ತಿ-ಮಾರ್ಗದರ್ಶನ ನೀಡುತ್ತಿರುವ 'ಬಿಸಿಲ ಬದುಕು' ಮಾಸಿಕ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಇನ್ನಷ್ಟು ಹತ್ತಿರವಾಗಲು ಈ ವಿಶೇಷ ರಿಯಾಯಿತಿ ಯೋಜನೆ ಘೋಷಿಸುತ್ತಿದೆ.

- ಜಾಣ ವಿದ್ಯಾರ್ಥಿ ಯೋಜನೆಯಡಿ ನೀವು ಕೇವಲ 90 ರೂಪಾಯಿ ಕಳುಹಿಸಿದರೆ ಸಾಕು. ಒಂದು ವರ್ಷ ಕಾಲ 12 ಸಂಚಿಕೆಗಳು ಅಂಚೆ ಮೂಲಕ ನಿಮ್ಮ ಮನೆ ತಲುಪುತ್ತವೆ.
- ಈ ಯೋಜನೆಯ ಪ್ರಯೋಜನ ಪಡೆಯಲು ಇದೇ ಸಂಚಿಕೆಯ 65ನೇ ಪುಟದಲ್ಲಿರುವ 'ಜಾಣ ವಿದ್ಯಾರ್ಥಿ' ಕೂಪನ್‌ನ್ನು ಭರ್ತಿ ಮಾಡಿ ನಿಮ್ಮ ಶಾಲೆ ಅಥವಾ ಕಾಲೇಜು ಮುಖ್ಯಸ್ಥರ ಸೀಲು-ಸಹಿ ಹಾಕಿಸಿ ನಮಗೆ ಕಳುಹಿಸಿ.
- 90 ರೂಪಾಯಿಗಳನ್ನು ಎಂ.ಓ. ಮೂಲಕವೇ ಕಳಿಸಬೇಕು. ಎಂ.ಓ. ಫಾರ್ಮ್‌ನಲ್ಲಿ ನಿಮ್ಮ ಪೂರ್ಣ ಅಂಚೆ ವಿಳಾಸ ಬರೆಯಲು ಮರೆಯಬೇಡಿ.

**ಬಿಸಿಲ ಬದುಕು** ಮಾಸ ಪತ್ರಿಕೆ

ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು - 560 079

---

# ಪ್ರಾಮಾಣಿಕ ಏಜೆಂಟರು ಬೇಕಾಗಿದ್ದಾರೆ

ಈ ಕೆಳಗಿನ ಊರುಗಳಲ್ಲಿ ಪತ್ರಿಕೆ ಮಾರಾಟ ಮಾಡಲು ಪ್ರಾಮಾಣಿಕ - ಉತ್ಸಾಹಿ ಏಜೆಂಟರು ಬೇಕಾಗಿದ್ದಾರೆ.

**ಏಜೆಂಟರಿಗೆ ಶೇಕಡಾ 30ರಷ್ಟು ಕಮೀಷನ್ ನೀಡಲಾಗುವುದು! ಠೇವಣಿ ಇಡುವ ಅಗತ್ಯವೂ ಇಲ್ಲ!!**

**ಹಾಸನ ಜಿಲ್ಲೆ**
- ಬೇಲೂರು
- ಆಲೂರು
- ಅರಕಲಗೂಡು

**ಚಿತ್ರದುರ್ಗ ಜಿಲ್ಲೆ**
- ಮೊಳಕಾಲ್ಮೂರು
- ಹಿರಿಯೂರು

**ತುಮಕೂರು ಜಿಲ್ಲೆ**
- ಶಿರಾ
- ತುರುವೇಕೆರೆ
- ಕುಣಿಗಲ್

**ಬಿಜಾಪುರ ಜಿಲ್ಲೆ**
- ಬೀಳಗಿ
- ಮುಧೋಳ

**ಧಾರವಾಡ ಜಿಲ್ಲೆ**
- ಕಲಘಟಗಿ
- ಶಿರಹಟ್ಟಿ
- ಬ್ಯಾಡಗಿ

**ಕೊಡಗು ಜಿಲ್ಲೆ**
- ಮಡಿಕೇರಿ
- ವಿರಾಜಪೇಟೆ

**ಕೋಲಾರ ಜಿಲ್ಲೆ**
- ಗೌರಿಬಿದನೂರು
- ಚಿಂತಾಮಣಿ

**ಚಿಕ್ಕಮಗಳೂರು ಜಿಲ್ಲೆ**
- ಚಿಕ್ಕಮಗಳೂರು
- ಮೂಡಿಗೆರೆ

**ಮಂಡ್ಯ ಜಿಲ್ಲೆ**
- ಶ್ರೀರಂಗಪಟ್ಟಣ
- ಕೃಷ್ಣರಾಜಪೇಟೆ
- ನಾಗಮಂಗಲ

**ಗುಲ್ಬರ್ಗಾ ಜಿಲ್ಲೆ**
- ಚಿಂಚೋಳಿ
- ಯಾದಗಿರಿ

**ದ.ಕ. ಜಿಲ್ಲೆ**
- ಸುಳ್ಯ
- ಬೆಳ್ತಂಗಡಿ
- ಬಂಟ್ವಾಳ

**ಶಿವಮೊಗ್ಗ ಜಿಲ್ಲೆ**
- ಹೊನ್ನಾಳಿ
- ಶಿವಮೊಗ್ಗ

**ಮೈಸೂರು ಜಿಲ್ಲೆ**
- ಯಳಂದೂರು
- ಹುಣಸೂರು
- ಪಿರಿಯಾಪಟ್ಟಣ
- ಟಿ. ನರಸೀಪುರ

**ಬೀದರ್ ಜಿಲ್ಲೆ**
- ಬಸವಕಲ್ಯಾಣ
- ಹುಮನಾಬಾದ್

**ಉಡುಪಿ ಜಿಲ್ಲೆ**
- ಕಾರ್ಕಳ
- ಮೂಡುಬಿದಿರೆ
- ಉಡುಪಿ

*ವಿವರಗಳಿಗೆ ಸಂಪರ್ಕಿಸಿ :* ಪ್ರಸಾರಣಾಧಿಕಾರಿ, **ಬಿಸಿಲ ಬದುಕು**

ಅಂಚೆ ಪೆಟ್ಟಿಗೆ : 7951, 1ನೇ ಕ್ರಾಸ್, 1ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರ ನಗರ, ಬೆಂಗಳೂರು - 560 079

ದೂರವಾಣಿ : **3358198** ಫ್ಯಾಕ್ಸ್ : **080 5091136**

BISILA BADUKU Kannada Monthly No.MAG (2) PRB.DECL / 310 / 97-98 DECEMBER 1997 Regd. BGW/394